# ಮಂಡ್ಯ ಜಿಲ್ಲೆಯ ಸಣ್ಣ ಕಥೆಗಳಲ್ಲಿ ಸಾಮಾಜಿಕ ಪ್ರಜ್ಞೆ

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸಿದ ಅಧ್ಯಯನ ಪ್ರಬಂಧ



ಸಂಶೋಧಕರು
ಟಿ.ವಿ. ತೇಜಸ್ವಿನಿ
ನೋಂದಣಿ ಸಂಖ್ಯೆ: KRSM 00149

<u>ಮಾರ್ಗದರ್ಶಕರು</u>
ಡಾ. ಎ.ಆರ್. ಮದನಕುಮಾರ್
ಮುಖ್ಯಸ್ಥರು ಮತ್ತು ಸಂಯೋಜಕರು,
ಕನ್ನಡ ಸ್ನಾತಕ ಮತ್ತು ಸ್ನಾತಕೋತ್ತರ ಅಧ್ಯಯನ ಕೇಂದ್ರ
ಮಹಿಳಾ ಸರ್ಕಾರಿ ಕಾಲೇಜು, ಮಂಡ್ಯ



ಕರ್ನಾಟಕ ಸಂಘ(ರಿ), ಮಂಡ್ಯ.
ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ.
(ಕನ್ನಡ ವಿ.ವಿ. ಹಂಪಿ, ಮಾನ್ಯತೆ ಪಡೆದಿದೆ)
೨೦೧೫

# ಮಂಡ್ಯ ಜಿಲ್ಲೆಯ ಸಣ್ಣ ಕಥೆಗಳಲ್ಲಿ ಸಾಮಾಜಿಕ ಪ್ರಜ್ಞೆ

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ ಪದವಿಗಾಗಿ ಸಲ್ಲಿಸಿದ ಅಧ್ಯಯನ ಪ್ರಬಂಧ



ಸಂಶೋಧಕರು
ಟಿ.ವಿ. ತೇಜಸ್ವಿನಿ
ನೋಂದಣಿ ಸಂಖ್ಯೆ: **KRSM 00149**

ಮಾರ್ಗದರ್ಶಕರು

**ಡಾ. ಎ.ಆರ್. ಮದನಕುಮಾರ್**
ಮುಖ್ಯಸ್ಥರು ಮತ್ತು ಸಂಯೋಜಕರು,
ಕನ್ನಡ ಸ್ನಾತಕ ಮತ್ತು ಸ್ನಾತಕೋತ್ತರ ಅಧ್ಯಯನ ಕೇಂದ್ರ
ಮಹಿಳಾ ಸರ್ಕಾರಿ ಕಾಲೇಜು, ಮಂಡ್ಯ



ಕರ್ನಾಟಕ ಸಂಘ(ರಿ), ಮಂಡ್ಯ,
ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ,
(ಕನ್ನಡ ವಿ.ವಿ. ಹಂಪಿ, ಮಾನ್ಯತೆ ಪಡೆದಿದೆ)
೨೦೧೫

# ಸಂಶೋಧಕರ ಪ್ರಮಾಣಪತ್ರ

ಕನ್ನಡ ವಿಶ್ವವಿದ್ಯಾಲಯದ (ಹಂಪಿ) ಪಿಎಚ್.ಡಿ. ಪದವಿಗಾಗಿ ಸಿದ್ಧಪಡಿಸಿರುವ **'ಮಂಡ್ಯ ಜಿಲ್ಲೆಯ ಸಣ್ಣಕಥೆಗಳಲ್ಲಿ ಸಾಮಾಜಿಕ ಪ್ರಜ್ಞೆ'** ಎಂಬ ಸಂಶೋಧನಾ ಪ್ರಬಂಧವನ್ನು ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ, ಕರ್ನಾಟಕ ಸಂಘ(ರಿ), ಮಂಡ್ಯ(ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿದೆ). ಈ ಸಂಸ್ಥೆಯ ಮೂಲಕ, ಮಹಿಳಾ ಸರ್ಕಾರಿ ಕಾಲೇಜಿನ ಕನ್ನಡ ವಿಭಾಗದ ಮುಖ್ಯಸ್ಥರು ಮತ್ತು ಸಂಯೋಜಕರು ಮತ್ತು ಎಂ.ಎಲ್ ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ ಸಂಪನ್ಮೂಲ ವ್ಯಕ್ತಿಯಾಗಿರುವ ಡಾ. ಎ.ಆರ್. ಮದನಕುಮಾರ್ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಈ ಪ್ರಬಂಧ ನನ್ನ ಸ್ವಂತ ಸಂಶೋಧನೆ ಆಗಿದೆ. ಇದನ್ನು ಸಂಪೂರ್ಣವಾಗಿ ಆಗಲೀ ಅಥವಾ ಭಾಗಶ:ವಾಗಲೀ ಯಾವುದೇ ವಿಶ್ವವಿದ್ಯಾಲಯದ ಪದವಿ ಅಥವಾ ಡಿಪ್ಲೊಮಗೆ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ಮಂಡ್ಯ

ದಿನಾಂಕ : 16.12.2015

ತೇಜಸ್ವಿನಿ

(ಟಿ.ವಿ. ತೇಜಸ್ವಿನಿ)

ನೋಂದಣಿ ಸಂಖ್ಯೆ: KRSM 00149

# ಮಾರ್ಗದರ್ಶಕರ ದೃಢೀಕರಣ ಪತ್ರ

ಶ್ರೀಮತಿ ಟಿ.ವಿ. ತೇಜಸ್ವಿನಿ ಇವರು ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ, ಕರ್ನಾಟಕ ಸಂಘ(ರಿ), ಮಂಡ್ಯ(ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿದೆ). ಈ ಸಂಸ್ಥೆಯ ಮೂಲಕ **'ಮಂಡ್ಯ ಜಿಲ್ಲೆಯ ಸಣ್ಣಕಥೆಗಳಲ್ಲಿ ಸಾಮಾಜಿಕ ಪ್ರಜ್ಞೆ'** ಎಂಬ ವಿಷಯವನ್ನು ಕುರಿತು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಂಶೋಧಕರಾಗಿ ಸಂಶೋಧನೆ ನಡೆಸಿ ಈ ಪ್ರಂಬಂಧವನ್ನು ಸಿದ್ಧಪಡಿಸಿದ್ದಾರೆ.

ಈ ಪ್ರಬಂಧವನ್ನು ಇಡಿಯಾಗಿ ಅಥವಾ ಬಿಡಿಯಾಗಿ ಈ ಮೊದಲು ಇವರು ಯಾವುದೇ ಪದವಿ ಅಥವಾ ಡಿಪ್ಲೊಮ ಪದವಿಗಾಗಿ ಬಳಸಿಕೊಂಡಿಲ್ಲ. ಈ ಅಭ್ಯರ್ಥಿ ನನ್ನೊಂದಿಗೆ ಐದು ವರ್ಷ ಸಂಶೋಧನೆ ಕೆಲಸ ಮಾಡಿದ್ದಾರೆಂದು ಈ ಪ್ರಬಂಧವನ್ನು ಪಿಎಚ್.ಡಿ., ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ (ಹಂಪಿ) ಸಾದರ ಪಡಿಸಲು ನಾನು ಸಮ್ಮತಿಸುತ್ತೇನೆಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ : ಮಂಡ್ಯ
ದಿನಾಂಕ : 16.12.2015

(ಡಾ ಎ.ಆರ್. ಮದನಕುಮಾರ್)

ಮುಖ್ಯಸ್ಥರು ಮತ್ತು ಸಂಯೋಜಕರು
ಕನ್ನಡ ಸ್ನಾತಕ ಮತ್ತು ಸ್ನಾತಕೋತ್ತರ ಅಧ್ಯಯನ ಕೇಂದ್ರ
ಮಹಿಳಾ ಸರ್ಕಾರಿ ಕಾಲೇಜು, ಮಂಡ್ಯ

ಡಾ. ಎ.ಆರ್. ಮದನಕುಮಾರ್
ಕನ್ನಡ ಸಹ ಪ್ರಾಧ್ಯಾಪಕ
ಮಹಿಳಾ ಸರ್ಕಾರಿ ಕಾಲೇಜು
ಮಂಡ್ಯ-೫೭೧೪೦೧

## ಪರಿವಿಡಿ

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಒಂದು ಜನಾಂಗದಲ್ಲಿ ಸಾಹಿತ್ಯವೆಂಬುದು ಪ್ರಜ್ವಲಿಸುವ ಮುನ್ನ ಆ ಜನಾಂಗದ ಆಡುವ ಭಾಷೆ ಸರಿಯಾಗಿ ರೂಪುಗೊಂಡು ಒಂದು ಹದಕ್ಕೆ ಬಂದಿರಬೇಕಾಗುತ್ತದೆ. ಆ ಜನಾಂಗದಲ್ಲಿ ಧರ್ಮ ಮತ್ತು ಸಂಸ್ಕೃತಿ ಎಂಬುದು ಒಂದು ಹಂತವನ್ನು ಮುಟ್ಟಿರಲೂಬೇಕಾಗುತ್ತದೆ. ಸಾಹಿತ್ಯವು ಸಮ್ಯಕ್ ಜೀವನಕ್ಕೆ ಸಂಬಂಧಿಸುದದಾರೆ, ಮನುಷ್ಯನ ಭಾವನೆಯನ್ನು ಪವಿತ್ರವಾಗಿಸುವುದೇ ಧರ್ಮದ ಕೆಲಸ. ಭಾರತೀಯ ಪ್ರಾಚೀನ ಸಾಹಿತ್ಯಗಳಲ್ಲಿ ಕನ್ನಡವೂ ಸತ್ತ್ವಪೂರ್ಣವಾಗಿದೆ. ಅದಕ್ಕೆ ಹದಿನೈದು ಶತಮಾನಗಳ ಇತಿಹಾಸವಿದೆ. ಒಟ್ಟಾರೆ, ಕನ್ನಡ ಸಾರಸ್ವತ ಲೋಕ ಬಹು ದೊಡ್ಡ ಪರಂಪರೆಯನ್ನು ಹೊಂದಿದ್ದು ವೈವಿಧ್ಯಮಯವಾಗಿದೆ. ಪಂಪ, ರನ್ನರಿಂದ ಆರಂಭವಾಗಿ ಕುವೆಂಪು, ಬೇಂದ್ರೆ, ಮಾಸ್ತಿ ಮೊದಲಾದವರಿಂದ ಬೆಳೆದು ಇಂದಿನವರೆಗೂ ಹಾಸುಹೊಕ್ಕಾಗಿದೆ.

ಪ್ರತಿಯೊಂದು ಪ್ರದೇಶಕ್ಕೆ ಅಥವಾ ಸ್ಥಳಕ್ಕೆ ಅದರದೇ ಆದ ಭೌಗೋಳಿಕವಾದ, ಪ್ರಾಕೃತಿಕವಾದ, ಭಾಷಿಕವಾದ, ಸಾಂಸ್ಕೃತಿಕವಾದ ಅನನ್ಯತೆಗಳಿರುತ್ತವೆ. ಒಂದು ಪ್ರಾದೇಶಿಕತೆಯು ತನ್ನೊಳಗೆ ಬೇರೆ-ಬೇರೆ ರೀತಿಯ ವಿಶಿಷ್ಟತೆಗಳನ್ನು ಮೈಗೂಡಿಸಿಕೊಂಡಿರುತ್ತದೆ, ಸ್ಥಳೀಯ ಸಾಹಿತ್ಯದ ಅಧ್ಯಯನವೆಂದರೆ, ದೇಸಿಯ ಅಧ್ಯಯನವೆ ಆಗಿದೆ. ಸ್ಥಳೀಯ ಸಾಹಿತ್ಯವು ಇಂದಿನ ಜಾಗತೀಕರಣ, ನಗರೀಕರಣ, ಖಾಸಗೀಕರಣ ಸಂಚಾರಿ ಸರಕಿನ ಸಂದರ್ಭದಲ್ಲಿ ಮರೆಯಾಗುತ್ತಿವೆ ಎಂಬುದು ವಾಸ್ತವ ಸಂಗತಿ. ಆದ್ದರಿಂದ ಇಂಥಹ ಸ್ಥಳೀಯ ಸಾಹಿತ್ಯದ ಅಧ್ಯಯನದಿಂದ ಕಳೆದು ಹೋಗುತ್ತಿರುವ ಅಂದಿನ ಸಾಮಾಜಿಕ ಬದುಕನ್ನು ಅರಿಯಲು ಸಾಧ್ಯವಾಗುತ್ತದೆ.

**ಉದ್ದೇಶ:** ಬಹುಜನರ, ಬಹುಕಾಲದ ಜ್ಞಾನ-ಅಭಿಪ್ರಾಯಗಳನ್ನು ಲೇಖಕನೊಬ್ಬ ಉಚಿತ ರೂಪಕ್ಕಿಳಿಸುವುದು ಸಾಹಿತ್ಯದ ಮೂಲ ಉದ್ದೇಶ. ಕಾಲಾನುಕ್ರಮದಲ್ಲಿ ರಾಮಾಯಣ-ಮಹಾಭಾರತಗಳ ಸಾರ್ವಕಾಲಿಕ ಶ್ರೇಷ್ಠ ಕಾವ್ಯಗಳ ಪುನರ್‌ಸೃಷ್ಟಿಯಾದರೂ ಆಯಾ ಕಾಲದ ರಾಜಕೀಯ, ಸಾಮಾಜಿಕ-ಸಾಂಸ್ಕೃತಿಕ ಛಾಪನ್ನು ಪುರಾಣ ಕಥನಗಳ ಪರಿವೇಷದ ಮೂಲಕ ನಿತ್ಯಸಮಕಾಲೀನವಾಗಿ ಒಡಮೂಡಿಸಿದ ಪರಿ ಅನನ್ಯವಾದುದ್ದು. ಅಂತೆಯೇ

ಇಂದಿನ ಸ್ಥಳೀಯ ಸಾಹಿತ್ಯದಲ್ಲಿ ಆಯಾಕಾಲದ ಸಾಮಾಜಿಕ ಸಂದರ್ಭ, ರಾಜಕೀಯ ಬೆಳವಣಿಗೆ ಸಮಕಾಲೀನ ಚಿಂತನಾಕ್ರಮ ಮೊದಲಾದ ಅಂಶಗಳಿಂದ ಪ್ರಭಾವಗೊಂಡಿರುತ್ತವೆ. ಇವುಗಳಿಂದ ಹೊರತಾಗಿಯು ಸಹ ಬರಹಗಾರರ ಧೋರಣೆ, ನಿಲುವುಗಳೂ ಸಾಹಿತ್ಯದಲ್ಲಿ ಅಭಿವ್ಯಕ್ತಗೊಳ್ಳುತ್ತದೆ. ಈ ಕಾರಣದಿಂದಲೆ ಒಂದು ಸಾಹಿತ್ಯ ಕೃತಿಯನ್ನು ಓದುವುದೆಂದರೆ ಸಮಾಜದ ಜನ ಸಮುದಾಯಗಳ ಬದುಕಿನ ಇತಿಹಾಸವನ್ನು ತಿಳಿದಂತೆ. ಆದ್ದರಿಂದ ಸೃಜನಶೀಲ ಸಾಹಿತ್ಯ ಕೃತಿಗಳನ್ನು ಅಧ್ಯಯನ ಮಾಡುವ ಮೂಲಕ **'ಸಾಮಾಜಿಕ ಪ್ರಜ್ಞೆ'**ಯ ಗುರುತಿಸುವಿಕೆಯನ್ನು ಈ ಅಧ್ಯಯನದಲ್ಲಿ ಮಾಡಲು ಪ್ರಯತ್ನಿಸಲಾಗಿದೆ.

ಸಾಮಾಜಿಕ ಪ್ರಜ್ಞೆಯೆಂದರೆ ಒಬ್ಬ ಕವಿಯು ತನ್ನ ಬದುಕಿನ ಸನ್ನಿವೇಶದಲ್ಲಿ ಕೆಲಸ ಮಾಡುತ್ತಿರುವಾಗ ಹಲವಾರು ಶಕ್ತಿಗಳನ್ನು ಕುರಿತಂತೆ ಮೊದಲೇ ಹೊಂದಿರುವ ಅಥವಾ ಕೃತಿ ರಚನೆಯ ಮೂಲಕವೆ ಕಂಡುಕೊಳ್ಳುವ ವೈಚಾರಿಕವಾದ ತಿಳಿವಳಿಕೆ ಎಂದು ಕರೆಯಬಹುದು. ಆಗ ಸಾಮಾಜಿಕ ಎಂಬುದು ಒಂದು ಪರಿ ಕಲ್ಪನೆಯಾಗಿ ಅದರ ಒಡಲಲ್ಲಿ ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕ ಅಂಶಗಳು ಸೇರಿಕೊಳ್ಳತ್ತವೆ. ಸಾಹಿತ್ಯಕ ಸಂದರ್ಭದಲ್ಲಿ ಹೀಗೆ ಗ್ರಹಿಸುವುದು ಅನಿವಾರ್ಯವಾಗುತ್ತದೆ.

**ವ್ಯಾಪ್ತಿ:** ಅಧ್ಯಯನಕ್ಕೆ ಕಥನ ಸಾಹಿತ್ಯ ಪ್ರಕಾರವನ್ನೇ ಆಯ್ದುಕೊಳ್ಳುವಲ್ಲಿ ಅದರ ಲೌಕಿಕ ಗುಣದ ಲೋಕದೃಷ್ಟಿ ಪ್ರಧಾನವಾಗಿದೆ. ಕಾವ್ಯ ರೂಪಾತ್ಮಕ ಹಾಗೂ ಪ್ರತಿಮಾತ್ಮಕವಾದುದು. ಕಥೆಯ ಬರಹಕ್ಕೆ ಭಾಷೆಯ ಒಲವು, ಪ್ರಯೋಗ ಪರಿಣತೆ, ಶಬ್ದಾರ್ಥಗಳ ತಿಳಿವು, ದ್ವಂದ್ವಾರ್ಥ, ಸೂಕ್ಷ್ಮಗ್ರಹಿಕೆ, ವ್ಯಾಕರಣ ಹಾಗೂ ಲಿಪಿಜ್ಞಾನದಲ್ಲಿ ಸ್ಪಷ್ಟತೆ ತಿಳಿದಿರಬೇಕಾಗುತ್ತದೆ. ಸಣ್ಣ ಕಥೆ ಎಂದರೆ ಆ ಬರಹಕ್ಕೆ ಇಷ್ಟೇ ಸಾಲು, ಇಷ್ಟೇ ಶಬ್ದ, ಇಷ್ಟೇ ವಿಭಾಗ ಹೀಗೆ ಯಾವ ಸೂತ್ರ ಬದ್ಧತೆಯೂ ಇಲ್ಲ. ಅದೊಂದು ನಿಷ್ಠಾವಂತಿಕೆಯ ಪ್ರಾಮಾಣಿಕ ಪ್ರಯತ್ನದ ಭಾವನೆಗಳನ್ನು ಅಕ್ಷರ ರೂಪದಲ್ಲಿ ಸುಸಂಬದ್ಧವಾಗಿ ಪ್ರಕಟಗೊಳಿಸುವ ಮಾಧ್ಯಮ. ಆದ್ದರಿಂದ ವಾಸ್ತವವನ್ನು ಗ್ರಹಿಸಲು ಕಥನ ಸೂಕ್ತವೆನಿಸಿದ್ದು ಮಂಡ್ಯ ಜಿಲ್ಲೆಯ ಕಥನ ಸಾಹಿತ್ಯದ ವ್ಯಾಪ್ತಿಯನ್ನು ಮಿತಿಯಾಗಿರಿಸಿಕೊಳ್ಳಲಾಗಿದೆ. ಎಲ್ಲಾ ಕೃತಿಗಳನ್ನು ಸಮಗ್ರವಾಗಿ ಅಧ್ಯಯನದ ವ್ಯಾಪ್ತಿಗೆ ಒಳಪಡಿಸುವುದು ಕಷ್ಟ ಸಾಧ್ಯವಾಗುವುದರಿಂದ ಸ್ವತಂತ್ರ ಭಾರತದ ಸ್ವಲ್ಪ ಹಿಂದಿನ ಹಾಗೂ ನಂತರದಲ್ಲಿ ರಚನೆಯಾದ ಕಥಾ ಸಾಹಿತ್ಯವನ್ನು ಇಲ್ಲಿ ಸ್ಥೂಲವಾಗಿ 'ಸಾಮಾಜಿಕ ಪ್ರಜ್ಞೆ'ಗೆ ಅವಕಾಶ ನೀಡುವ ಕಥೆಗಳು ಮತ್ತು ಕಥೆಗಾರರನ್ನು

ಗಮನಕ್ಕೆ ತರಲಾಗುವುದು. ಸಾಮಾಜಿಕ ಪ್ರಜ್ಞೆಯನ್ನು ವಾಸ್ತವ ನೆಲೆಯಲ್ಲಿ ಗ್ರಹಿಸಲು ಮಂಡ್ಯ ಜಿಲ್ಲೆಯ ಪ್ರಮುಖ ಕಥೆಗಾರರನ್ನು ಪ್ರಾತಿನಿಧಿಕವೆಂದು ಆಯ್ಕೆ ಮಾಡಿಕೊಂಡು, ಅವರ 'ಸಾಮಾಜಿಕ ಪ್ರಜ್ಞೆ'ಯ ವಸ್ತುವನ್ನುಳ್ಳ ಕಥಾ ಸಾಹಿತ್ಯವನ್ನು ಇಲ್ಲಿ ವಿವೇಚಿಸಿಕೊಳ್ಳಲಾಗುವುದು. ಈ ಮಹಾಪ್ರಬಂಧದ ವ್ಯಾಪ್ತಿಯ ಪರಿಮಿತಿಯೊಳಗೆ ಒಟ್ಟು ಹದಿಮೂರು ಕಥೆಗಾರರ ಹದಿನೈದು ಕಥಾಸಂಕಲನಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅನುಬಂಧ ೧ರಲ್ಲಿ ಪ್ರಾಥಮಿಕ ಆಕಾರಗಳನ್ನು, ಅನುಬಂಧ ೨ರಲ್ಲಿ ಪರಾಮರ್ಶನ ಗ್ರಂಥಗಳನ್ನು ಅನುಬಂಧ ೩ರಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಕೊಡುಗೆ ನೀಡಿದ ಮಂಡ್ಯ ಜಿಲ್ಲೆಯ ಕಥೆಗಾರರ ಪಟ್ಟಿಯನ್ನು ಕೊಡಲಾಗಿದೆ ಮತ್ತು ಕನ್ನಡ ವಿಶ್ವವಿದ್ಯಾಲಯದ ಸೂಚನೆಯಂತೆ ಅಡಿಟಿಪ್ಪಣಿಗಳನ್ನು ಅಧ್ಯಾಯದ ಒಳಗೆ ಅಲ್ಲಲ್ಲಿಯೆ ಗುರುತಿಸಲಾಗಿದೆ.

**ವೈಧಾನಿಕತೆ:** ಮಂಡ್ಯ ಜಿಲ್ಲೆಯ ಸಣ್ಣ ಕಥೆಗಳಲ್ಲಿ ಸಾಮಾಜಿಕ ಪ್ರಜ್ಞೆಯ ಅಧ್ಯಯನ ಶಿಸ್ತಿಗೆ ಅಳವಡಿಸಲು ಈ ಕೆಳಗಿನ ವೈಧಾನಿಕತೆಯನ್ನು ಅನುಸರಿಸ ಲಾಗುವುದು. ಮಂಡ್ಯ ಜಿಲ್ಲಾ ಕಥಾ ಸಾಹಿತ್ಯವನ್ನು ಸಿದ್ಧ ಮಾನದಂಡಗಳಿಗಿಂತ ವ್ಯಕ್ತಿ ನಿಷ್ಠ ನೆಲೆಯಲ್ಲಿ, ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಪಠ್ಯಗಳು ಹೊರ ಹಾಕುವ ಅರ್ಥವನ್ನು ತಿಳಿಯಲು ವಿಷಯ ವಿಶ್ಲೇಷಣಾ ವಿಧಾನವನ್ನು ಬಳಸಲಾಗುತ್ತದೆ.

ಪ್ರಸ್ತುತ ಮಹಾಪ್ರಬಂಧದ ಅಧ್ಯಯನದಲ್ಲಿ 'ಮಂಡ್ಯ ಜಿಲ್ಲೆಯ ಸಣ್ಣ ಕಥೆಗಳಲ್ಲಿ ಸಾಮಾಜಿಕ ಪ್ರಜ್ಞೆ' ಎನ್ನುವಾಗ ಕಥನಕಾರರ ಗ್ರಹಿಕೆ ಹಾಗೂ ಕಥಾ ನಿರೂಪಣೆಯಲ್ಲಿ ವಾಸ್ತವಾಂಶದ ಗ್ರಹಿಕೆಯನ್ನು ಮುಖಾಮುಖಿಯಾಗಿ ನೋಡುವ ಮೂಲಕ ಸಾಹಿತ್ಯ ಅಧ್ಯಯನದ ವಿದ್ಯಾರ್ಥಿಯಾದ ನನ್ನ ದೃಷ್ಟಿಕೋನ ಮತ್ತು ಗ್ರಹಿಕೆಯನ್ನು ಅಭಿವ್ಯಕ್ತಿಸಲು ವಿಶ್ಲೇಷಣಾ ವಿಧಾನವನ್ನು ಬಳಸಲಾಗುತ್ತದೆ. ಅಧ್ಯಯನ ಅನುಕೂಲ ದೃಷ್ಟಿಯಿಂದ ಮಹಾಪ್ರಬಂಧವನ್ನು ಏಳು ಅಧ್ಯಾಯಗಳಾಗಿ ವಿಂಗಡಿಸಿಕೊಂಡಿರುತ್ತೇನೆ. ಅಧ್ಯಾಯ ೧. ಅಧ್ಯಯನದ ಉದ್ದೇಶ ವ್ಯಾಪ್ತಿ, ಅಧ್ಯಾಯ ೨. ಸಾಮಾಜಿಕ ಪ್ರಜ್ಞೆಯ ಪರಿಕಲ್ಪನೆ, ಅಧ್ಯಾಯ ೩. ಜಾತಿ ಸಂಘರ್ಷದ ನೆಲೆಗಳು, ಅಧ್ಯಾಯ ೪. ವರ್ಗಸಂಘರ್ಷದ ನೆಲೆಗಳು, ಅಧ್ಯಾಯ ೫. ಕೌಟುಂಬಿಕ ಸಂಘರ್ಷದ ನೆಲೆಗಳು, ಅಧ್ಯಾಯ ೬. ಸಾಂಪ್ರದಾಯಿಕ ನೆಲೆಗಳು, ಅಧ್ಯಾಯ.೭ ಫಲಿತಗಳು.

**ಅಧ್ಯಯನದ ಸಮೀಕ್ಷೆ ಹಾಗೂ ಮಹತ್ವ:** ಮಹಾ ಪ್ರಬಂಧಕ್ಕೆ ಪೂರಕವಾಗಿರುವ ಕೆಲವು ಕೃತಿಗಳನ್ನು ಸಮೀಕ್ಷಿಸಲಾಗಿದೆ.

ಸಾಹಿತ್ಯ ಮತ್ತು ಸಾಮಾಜಿಕ ನಿಲುವುಗಳು: ಈ ಕೃತಿಯಲ್ಲಿ ಸಾಹಿತ್ಯವು ಸಮಾಜದೊಂದಿಗೆ ಇರಿಸಿಕೊಂಡಿರುವ ಸಂಬಂಧವು ಹೇಗೆ ಕಾಲಕಾಲಕ್ಕೆ ಅದರ ರೂಪ ಮತ್ತು ಸ್ವರೂಪವನ್ನು ನಿರ್ಣಯಿಸುತ್ತಾ ಬಂದಿದೆ ಎಂಬ ಸಂಗತಿಯನ್ನು ವಿಚಾರ ಸಂಕೀರಣದ ಪರಿಶೀಲನಗೆ ಒಳಪಡಿಸಿರುವ ಲೇಖನಗಳು 'ಸಾಮಾಜಿಕ ಪ್ರಜ್ಞೆ' ಎಂಬ ಪರಿಕಲ್ಪನೆಯನ್ನು ಅರ್ಥೈಸುತ್ತದೆ. **'ಭಾರತೀಯ ಸಾಮಾಜಿಕ ಸಂಸ್ಥೆಗಳು'**, (ಸಂ) ಹಾ.ಮಾ. ನಾಯಕರ ಕೃತಿಯಲ್ಲಿ ಸಮಾಜಶಾಸ್ತ್ರದ ಹಿನ್ನೆಲೆಯಲ್ಲಿ ಕುಟುಂಬ ಜೀವನದ ಬಗ್ಗೆ, ಜಾತಿ ಪದ್ಧತಿ ಬಗ್ಗೆ, ಗ್ರಾಮ ಸಮಾಜವನ್ನು ಕುರಿತು ವಿಶ್ಲೇಷಿಸಲಾಗಿದೆ.

**'ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ'** ಎನ್. ಕೆ. ಕೋದಂಡರಾಮ ಅವರ ಈ ಕೃತಿಯಲ್ಲಿ ನವೋದಯ, ಪ್ರಗತಿಶೀಲ, ನವ್ಯ, ಬಂಡಾಯ, ದಲಿತ, ಮುಸ್ಲಿಂ ಸಂವೇದನೆ ಹೀಗೆ ಎಲ್ಲ ಚಳುವಳಿಗಳಲ್ಲಿ ಕಂಡು ಬರುವ ನೂರಾರು ಕಥೆಗಳು ತಲಸ್ಪರ್ಶಿಯಾದ ಅಧ್ಯಯನ ಕೈಗೊಂಡಿವೆ. ಕನ್ನಡ ಕಥನ ಸಾಹಿತ್ಯ; ಸಣ್ಣಕಥೆ – ಜಿ. ಎಸ್. ಆಮೂರ ಈ ಕೃತಿಯಲ್ಲಿ ಕನ್ನಡ ಸಣ್ಣಕಥೆಯ ವಿಕಾಸಕ್ಕೆ ಕಾರಣರಾದ ಪ್ರಮುಖ ಕಥೆಗಾರರನ್ನು ಒಟ್ಟಿಗೆ ನೋಡುವ ಮೂಲಕ ಹಾಗೂ ಅವರ ಅಂತ:ಸಂಬಂಧಗಳನ್ನು ಗುರುತಿಸುವುದು ಮಹತ್ವದ ಕಥೆಗಾರರ ಸಾಧನೆಯ ಒಂದು ಸಮಗ್ರ ನೋಟ ಮತ್ತು ಮಹತ್ವದ ಕಥೆಗಳನ್ನು ವ್ಯಾಖ್ಯಾನಿಸುವುದು.

**'ಶತಮಾನದ ಸಣ್ಣಕಥೆಗಳ ಸಮೀಕೆ'** ಕರೀಗೌಡ ಬೀಚನಹಳ್ಳಿ ಅವರ ಕೃತಿಯಲ್ಲಿ ಇಪ್ಪತ್ತನೆಯ ಶತಮಾನದ ಕನ್ನಡ ಸಣ್ಣಕಥೆಗಳ ಸಮೀಕ್ಷೆಯನ್ನು ಕುರಿತದ್ದದಾಗಿದೆ. ಸಣ್ಣಕಥೆಗಳ ಬಗ್ಗೆ ಕುರಿತು ಅತ್ಯುತ್ತಮ ವಿಮರ್ಶೆ ಮತ್ತು ವಿಶ್ಲೇಷಣೆಯನ್ನು ಮಾಡಲಾಗಿದೆ. ನವೋದಯ, ಪ್ರಗತಿಶೀಲ, ನವ್ಯ, ದಲಿತ–ಬಂಡಾಯ, ಮುಸ್ಲಿಂ ಸಂವೇದನೆ, ಸ್ತ್ರೀಸಂವೇದನೆ, ತೊಂಬತ್ತರ ದಶಕ ಈ ರೀತಿಯಲ್ಲಿ ಅಧ್ಯಯನ ಕೈಗೊಳ್ಳಲಾಗಿದೆ.

**'ಸಾಹಿತ್ಯ ಸಂದರ್ಭ'** ಟಿ.ಪಿ. ಅಶೋಕ ಅವರ ಈ ಕೃತಿಯಲ್ಲಿ ಬೆಸಗರಹಳ್ಳಿ ರಾಮಣ್ಣನವರ ಕಥೆಗಳನ್ನು ಕುರಿತು ವಿಮರ್ಶೆ ಮಾಡಲಾಗಿದೆ. ಅಧ್ಯಯನಕ್ಕೆ ಪೂರಕವಾಗಿ ಕೆಲವು ಕಥೆಗಳನ್ನು ಗ್ರಹಿಸಲಾಗಿದೆ. **'ಯುಗಧರ್ಮ ಹಾಗೂ ಸಾಹಿತ್ಯ**

**ದರ್ಶನ'**, ಕೀರ್ತಿನಾಥ ಕುರ್ತಕೋಟಿ ಅವರ ಈ ಕೃತಿಯಲ್ಲಿ ಕನ್ನಡ ಸಾಹಿತ್ಯದ ಪ್ರಮುಖ ಕಾವ್ಯ, ನಾಟಕ, ಸಣ್ಣಕಥೆ, ಕಾದಂಬರಿಗಳನ್ನು ಕುರಿತ ವಿಶ್ಲೇಷಣೆ ಮಾಡಲಾಗಿದೆ. ಸಣ್ಣಕಥೆ ಭಾಗದಲ್ಲಿ ನವೋದಯದಿಂದ ದಲಿತ-ಬಂಡಾಯ ಪ್ರಮುಖ ಕಥೆಗಾರರನ್ನು ಮತ್ತು ಕಥೆಗಳನ್ನು ವಿಶ್ಲೇಷಿಸಲಾಗಿದೆ.

ಬಲ್ಲೇನಹಳ್ಳಿ ಮಂಜುನಾಥ್ ಅವರ **'ಮಂಡ್ಯ ಜಿಲ್ಲೆಯ ಮಹೋನ್ನತ ಸಾಹಿತಿಗಳು'** ಎಂಬ ಕೃತಿಯಲ್ಲಿ ಒಟ್ಟಾರೆ ಬಿ.ಎಂ.ಶ್ರೀ, ಪು.ತಿ.ನ, ಎ.ಎನ್. ಮೂರ್ತಿರಾವ್, ಕೆ.ಎಸ್. ನರಸಿಂಹಸ್ವಾಮಿ, ವೀರಕೇಸರಿ ಸೀತಾರಾಮಶಾಸ್ತ್ರಿ ಮುಂತಾದ ಒಟ್ಟು ಇಪ್ಪತ್ತೊಂದು ಲೇಖಕರರ ವ್ಯಕ್ತಿ ಪರಿಚಯ ಮಾಡಿದ್ದಾರೆ.

ನಾಲ್ಕನೆಯ ಮಂಡ್ಯ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ಸಂಚಿಕೆಯ **'ಪುಣ್ಯಕೋಟಿ'** ಕೃತಿಯಲ್ಲಿ ಸ್ಥಳೀಯ ಸಂಸ್ಕೃತಿ, ಸ್ಥಳನಾಮ, ಸಾಹಿತಿಗಳನ್ನು ಕುರಿತು ಜಿಲ್ಲೆಯ ಸಮಗ್ರನೋಟ ಗುರುತಿಸಲಾಗಿದೆ.

೬೩ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಸ್ಮರಣ ಸಂಚಿಕೆಯಾದ **'ಸಿರಿಯೊಡಲು'** ಕೃತಿಯಲ್ಲಿ ಮಂಡ್ಯ ಜಿಲ್ಲೆಯ ಸ್ಥಳೀಯ ಧಾರ್ಮಿಕತೆ, ಗ್ರಾಮದೇವತೆ, ಬೆಳಕಿಗೆ ಬಾರದ ಲೇಖಕರನ್ನು ಕುರಿತು ಮತ್ತು ಕೆಲವು ಕೃತಿ ಸಮೀಕ್ಷೆಗಳನ್ನು ಮಾಡಲಾಗಿದೆ.

ಮಂಡ್ಯ ಜಿಲ್ಲಾ ಅಮೃತ ಮಹೋತ್ಸವ ಸ್ಮರಣ ಸಂಪುಟ **'ಅಮೃತ ಮಂಡ್ಯ'** ಈ ಕೃತಿಯಲ್ಲಿ ಜಿಲ್ಲೆಯ ಹುಟ್ಟು ಮತ್ತು ಹಿನ್ನೆಲೆ, ದೇವಾಲಯಗಳು, ಶಾಸನಗಳು, ಜಲಸಂಪತ್ತು, ಕೃಷಿ, ವಾಸ್ತುಶಿಲ್ಪ, ಅರಣ್ಯ ಸಂಪನ್ಮೂಲ, ಪ್ರವಾಸ ಸಾಹಿತ್ಯ ಹೀಗೆ ಜಿಲ್ಲೆಗೆ ಸಂಬಂಧಿಸಿದ ಅನೇಕ ಮಾಹಿತಿಗಳನ್ನು ಗುರುತಿಸಲಾಗಿದೆ. ತೈಲೂರು ವೆಂಕಟಕೃಷ್ಣ ಅವರ **'ಮಂಡ್ಯ ಜಿಲ್ಲೆಯ ಸಾಂಸ್ಕೃತಿಕ ಪರಂಪರೆ'** ಈ ಕೃತಿಯಲ್ಲಿ ಜಿಲ್ಲೆಗೆ ಸಂಬಂಧಿಸಿದ ಶಾಸನ ಸಂಸ್ಕೃತಿ ಹಾಗೂ ಪ್ರಾಚೀನ ದೇವಾಲಯಗಳು ಮತ್ತು ಸಾಹಿತ್ಯ, ಧರ್ಮ, ಚಿತ್ರಕಲೆ, ಜಾನಪದ ಇವುಗಳನ್ನು ಸಂಗ್ರಹಿಸಿ ವಿಶ್ಲೇಷಿಸಲಾಗಿದೆ.

ಮಹಾಪ್ರಬಂಧಕ್ಕೆ ಸಂಬಂಧಿಸಿದಂತೆ ಪ್ರಾತಿನಿಧಿಕ ಕೆಲವು ಕಥೆಗಾರರನ್ನು ಕುರಿತು ಸಂಶೋಧನಾ ಪ್ರಬಂಧಗಳು ಪ್ರಕಟವಾಗಿವೆ. ಹಳೆ ತಲೆಮಾರಿನ ಎಚ್.ಎಲ್. ನಾಗೇಗೌಡರನ್ನು ಕುರಿತು ವೈ.ಡಿ. ಲೀಲಾ ಅವರು **'ಎಚ್.ಎಲ್. ನಾಗೇಗೌಡರ ಸೃಜನಶೀಲ ಸಾಹಿತ್ಯ'**ವನ್ನು ಕುರಿತು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಮಹಾಪ್ರಬಂಧ ಮಂಡಿಸಿದ್ದಾರೆ. ಇಲ್ಲಿ ಒಟ್ಟಾರೆ ಎಲ್ಲಾ ಕೃತಿಗಳನ್ನು ಸಮಗ್ರವಾಗಿ ಅಧ್ಯಯನಕ್ಕೆ ಒಳಪಡಿಸಿದ್ದಾರೆ. ಜಿ. ವೆಂಕಟಯ್ಯ ಅವರನ್ನು ಕುರಿತು

ಚಂದ್ರಶೇಖರ್ ಅವರು **'ಜಿ. ವೆಂಕಟಯ್ಯ: ಬದುಕು ಬರಹ'** ಎಂಬ ಮಹಾಪ್ರಬಂಧವನ್ನು ಮೈಸೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ.

ಬೆಸಗರಹಳ್ಳಿ ರಾಮಣ್ಣ ಅವರನ್ನು ಕುರಿತು ಪ್ರಭಾವತಿಯವರು **'ಡಾ. ಬೆಸಗರಹಳ್ಳಿ ರಾಮಣ್ಣನವರ ಸಮಗ್ರ ಸಾಹಿತ್ಯ ಒಂದು ಅಧ್ಯಯನ'** ಈ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಡಾ. ಎಂ. ಚಂದ್ರಮ್ಮನವರು **'ಬೆಸಗರಹಳ್ಳಿ ರಾಮಣ್ಣ ಅವರ ಕಥೆಗಳು ಒಂದು ಸಾಂಸ್ಕೃತಿಕ ಅಧ್ಯಯನ'** ಎಂಬ ಮಹಾ ಪ್ರಬಂಧವನ್ನು ಮಂಡಿಸಿದ್ದಾರೆ.

ಡಿ. ಲಿಂಗಯ್ಯನವರನ್ನು ಕುರಿತು ಸ.ಶಿಶಿರಾ ಅವರು **'ಪ್ರೊ. ಡಿ. ಲಿಂಗಯ್ಯ ಅವರ ಸಾಹಿತ್ಯ'** ಎಂಬ ಮಹಾಪ್ರಬಂಧವನ್ನು ಹೊರತಂದಿದ್ದಾರೆ. ಜಾನಪದ ಕ್ಷೇತ್ರಕ್ಕೆ ಹೆಚ್ಚಿನ ಕೊಡುಗೆ ಕೊಟ್ಟ ವಿದ್ವಾಂಸರಲ್ಲಿ ಇವರೂ ಒಬ್ಬರು. ಕಥೆ, ಸಂಶೋಧನೆ ಎಲ್ಲವನ್ನು ಸೇರಿಕೊಂಡಂತೆ ಸಮಗ್ರ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಇಲ್ಲಿಯವರೆಗೆ ಈ ಮಹಾಪ್ರಬಂಧಗಳಲ್ಲಿ ಕಥೆಗಾರರ ಸಮಗ್ರ ಸೃಜನಶೀಲ ಸಾಹಿತ್ಯವನ್ನು ಅಧ್ಯಯನಕ್ಕೆ ಒಳಪಡಿಸಿದ್ದಾರೆ. ಪಸ್ತುತ ಈ ಮಹಾಪ್ರಬಂಧದಲ್ಲಿ ಸೃಜನಶೀಲ ಕಥೆಗಾರರ ಪ್ರಾತಿನಿಧಿಕ ಕಥೆಗಳನ್ನು ಮಿತಿಯ ಒಳಗಡೆ ಅಧ್ಯಯನಕ್ಕೆ ಒಳಪಡಿಸಿರುತ್ತೇನೆ. ಈ ಮೇಲಿನ ಕೃತಿಗಳಲ್ಲಿ ಮತ್ತು ಸಂಶೋಧನ ಪ್ರಬಂಧಗಳಲ್ಲಿ ಮಂಡ್ಯ ಜಿಲ್ಲೆಯ ಕೆಲವು ಸಾಹಿತಿಗಳ ಬಗೆಗೆ ಗುರುತಿಸಿರುವುದು ಕೇವಲ ಆಂಶಿಕ ಮಾತ್ರ. ಈ ಕಥೆಗಾರರನ್ನು ಹೊರತುಪಡಿಸಿಯೂ ತಮ್ಮ ಕೃತಿಗಳ ಅಂತಸತ್ತ್ವಗಳಿಂದ ಪ್ರಸಿದ್ಧರಾಗಿರುವ ಮಂಡ್ಯ ಜಿಲ್ಲೆಯ ಇತರ ಕಥೆಗಾರರನ್ನು ಅಧ್ಯಯನಕ್ಕೆ ಒಳಪಡಿಸುತ್ತಿರುವುದರಿಂದ ನನ್ನ ಸಂಶೋಧನೆ ಮಹತ್ವ ಪೂರ್ಣದಾಗಿದೆ. ಈಗಾಗಲೇ ಮಂಡ್ಯ ಜಿಲ್ಲೆಯ ಸಾಹಿತಿಗಳ ಬಗೆಗೆ ವಿಮರ್ಶಕರು ಮತ್ತು ಸಂಶೋಧಕರು ಗುರುತಿಸಿರುವುದಕ್ಕಿಂತ ಭಿನ್ನ ಗ್ರಹಿಕೆಯ ನೆಲೆಗಳಲ್ಲಿ ನನ್ನ ಸಂಶೋಧನೆಯನ್ನು ರೂಪಿಸಿಕೊಂಡಿರುವುದರಿಂದ ಪ್ರಸ್ತುತ ಸಂಶೋಧನೆಗೆ ವಿಭಿನ್ನ ರೀತಿಯ ಹೊಳಹುಗಳು ತೆರೆದುಕೊಳ್ಳುತ್ತವೆ.

# ಸಾಮಾಜಿಕ ಪ್ರಜ್ಞೆಯ ಪರಿಕಲ್ಪನೆ

ಸಂಸ್ಕೃತಿ ಎಂದರೆ ವ್ಯಕ್ತಿಯ ಬುದ್ಧಿವಿಕಾಸ ಹಾಗೂ ಮಾನಸಿಕ ಪಕ್ವತೆ. ಅದು ಹೃದಯವನ್ನು ಸಂಸ್ಕರಿಸುವ, ಹೃದಯವನ್ನು ತಟ್ಟುವ ಹಾಗೂ ಮಹಾಸ್ಫೂರ್ತಿಯನ್ನು ನೀಡುವ ಶಕ್ತಿಯುಳ್ಳದ್ದು, ಜೀವನದ ಪ್ರತಿಯೊಂದು ಸನ್ನಿವೇಶದಲ್ಲಿಯೂ ಮನುಷ್ಯನ ಮನೋಭಾವವೂ, ವರ್ತನೆಯೂ ಔಚಿತ್ಯಪೂರ್ಣವಾಗುವಂತೆ ಮಾಡುವ ಪ್ರಯತ್ನವೇ ಸಂಸ್ಕೃತಿ. "ಸಂಸ್ಕೃತಿಯು ಮನಸ್ಸನ್ನು ತಿಕ್ಕಿ ತೊಳೆದು ಶುಚಿ ಮಾಡುವ ಕೆಲಸ" ಎನ್ನುತ್ತಾರೆ ಕವಿ ಡಿವಿಜಿ. ಸಮಾಜ ವಿಜ್ಞಾನಿಗಳ ದೃಷ್ಟಿಯಲ್ಲಿ ಸಂಸ್ಕೃತಿಯು ಒಂದು ಪ್ರದೇಶದ ಜನರ ಮಾನಸಿಕ ಅಥವಾ ನಾಗರೀಕತೆಯ ಬೌದ್ಧಿಕ ಸಾಧನೆ. ಇದು ಒಂದು ಜನಾಂಗದ, ಪ್ರಾಂತ್ಯದ ಜನಜೀವನದ ಹೊರ ಲಕ್ಷಣಗಳನ್ನು ಸೂಚಿಸುತ್ತದೆ. ಅಂದರೆ ಜನರ ವೇಷ-ಭೂಷಣಗಳು, ಹಬ್ಬ-ಹರಿದಿನಗಳು, ಜಾತ್ರೆ, ಉತ್ಸವ, ಕಲೆ ಮುಂತಾದವುಗಳನ್ನು ಸೂಚಿಸುವ ರೂಪಗಳಾಗುತ್ತವೆ. ಇದು ಸಮಾಜವನ್ನು ಒಟ್ಟುಗೂಡಿಸುವ ಸಂಸ್ಕೃತಿ. ಇದು ಕೆಲವು ಸಂದರ್ಭಗಳಲ್ಲಿ ತನ್ನ ಒಗ್ಗಟ್ಟನ್ನು ಕಾಪಾಡಿಕೊಳ್ಳಲು ಎಚ್ಚರಿಕೆಯನ್ನು ವಹಿಸಬೇಕಾಗುತ್ತದೆ. ಸಂಸ್ಕೃತಿಯ ಬಗ್ಗೆ ದಾರ್ಶನಿಕ ಮ್ಯಾಥ್ಯೂ ಅರ್ನಾಲ್ಡನ ಅಭಿಪ್ರಾಯ ಹೀಗಿದೆ-"ಬುದ್ಧಿಗೆ ತಿಳುವಳಿಕೆಯನ್ನು ಸಂಪಾದಿಸಿಕೊಡಬೇಕೆಂಬ ಶುದ್ಧ ವಿಜ್ಞಾನಕಾಂಕ್ಷೆಯ ಬಲದಿಂದ ಮಾತ್ರವೇ ಅಲ್ಲದೆ; ಜನಕ್ಕೆ ಒಳ್ಳೆಯದನ್ನು ಮಾಡಬೇಕೆಂಬ ಸಮಾಜ ಹಿತಾಕಾಂಕ್ಷೆಯ ಮತ್ತು ಧರ್ಮಾಕಾಂಕ್ಷೆಯ ಬಲದಿಂದಲೂ ಪ್ರೇರಿತವಾಗಿ ನಡೆಯತಕ್ಕದ್ದು ಸಂಸ್ಕೃತಿ" **(ತೈಲೂರು ವೆಂಕಟಕೃಷ್ಣ, ಮಂಡ್ಯ ಜಿಲ್ಲೆಯ ಸಾಂಸ್ಕೃತಿಕ ಪರಂಪರೆ, ೨೦೧೧, ಪುಟ-೧).**

ಮಾನವನ ಜಾತಿಗೆ ಬೇಕಾದ ಉನ್ನತ ಜೀವನ ಮೌಲ್ಯಗಳನ್ನು ಭಾರತೀಯ ಸಂಸ್ಕೃತಿಯು ಜಗತ್ತಿಗೆ ನೀಡಿದೆ. ನಿಯಮ ಹಾಗೂ ಉನ್ನತ ಚಾರಿತ್ರ್ಯಗಳನ್ನು ಎತ್ತಿ ಹಿಡಿಯುವುದು ಭಾರತೀಯ ಸಂಸ್ಕೃತಿ. ದಿವ್ಯತ್ವಕ್ಕೂ, ಸಾಮಾನ್ಯ ಜೀವನಕ್ಕೂ ಸಾಮರಸ್ಯವನ್ನು ಬೆಳೆಸುವುದು ಇದರ ಗುಣ. ಭಾರತೀಯ ಸಂಸ್ಕೃತಿ ಪರಂಪರೆಯ ತಳಹದಿಯಾಗಿರುವ ತತ್ವಗಳು, ಅನ್ವೇಷಣೆ, ಅಧ್ಯಯನ ಮತ್ತು ಪ್ರಯೋಗಗಳ ಫಲವಾಗಿ ಅಂಕುರಗೊಂಡವು. ಇದರಿಂದ ಉತ್ಪತ್ತಿಯಾದ ಧರ್ಮವು ಒಂದು ವಿಜ್ಞಾನವಾಯಿತು. ಈ ವಿಜ್ಞಾನ ಮತ್ತು ಆತ್ಮ

ವಿಜ್ಞಾನ ರಾಷ್ಟ್ರದ ಲಕ್ಷಣವಾಯಿತು. ಜನಾಂಗದ ಸತ್ವವಾಯಿತು. ಯಾವುದು ಪರಿವರ್ತನ ರಹಿತವೋ, ಯಾವುದನ್ನು ತಿಳಿಯುವುದರಿಂದ ಉಳಿದೆಲ್ಲವನ್ನು ತಿಳಿಯಬಹುದೋ ಅದನ್ನು ತಿಳಿಯುವಂತೆ ಮಾಡುವ ವಿಜ್ಞಾನವೇ ಅತ್ಯಂತ ಶ್ರೇಷ್ಠವಾದುದು ಎಂದು ನಮ್ಮ ಪ್ರಾಚೀನ ಉಪನಿಷತ್ತುಗಳು ಸಾರುತ್ತವೆ. ಈ ವಿಜ್ಞಾನವು ಚಿಂತನಾ ಜಗತ್ತು ಹಾಗೂ ಭೌತಿಕ ಜಗತ್ತುಗಳಲ್ಲಿ ಕಂಡು ಬರುವ ಅಸಂಖ್ಯ ವೈವಿಧ್ಯದ ತಳದಲ್ಲಿರುವ ಆಧ್ಯಾತ್ಮಿಕ ಏಕತೆಯ ತತ್ವವನ್ನು ಸ್ಥಾಪಿಸಿತು. ಇದು ಎಲ್ಲ ವಿವಾದಗಳು, ಭಿನ್ನಾಭಿಪ್ರಾಯಗಳನ್ನೂ ಪರಿಹರಿಸಿದುದು ಮಾತ್ರವಲ್ಲ, ಜೀವನಕ್ಕೆ ಅದರ ಎಲ್ಲಾ ಮುಖಗಳೊಂದಿಗೆ ಹೊಂದಿಕೊಂಡಿತು. ಅದರ ಆಧಾರದ, ಮೇಲೆ ಸಾಮಾಜಿಕ ವ್ಯವಸ್ಥೆ ಸ್ಥಾಪಿತವಾಯಿತು.

ಸಾಮಾಜಿಕ ಜೀವನವನ್ನು ಶಾಸ್ತ್ರೀಯವಾಗಿ ಅಭ್ಯಾಸ ಮಾಡುವ ಹವ್ಯಾಸ ಇತ್ತೀಚೆಗೆ ಬೆಳೆದು ಬಂದಿದೆಯಾದರೂ. ಇದಕ್ಕೆ ಬುನಾದಿ ಹಾಕಲು ೧೯ನೇ ಶತಮಾನದಲ್ಲೇ ಪ್ರಯತ್ನಗಳು ನಡೆದವೆಂದರೆ ಅತಿಶಯೋಕ್ತಿಯಲ್ಲ. ಸಾಮಾಜಿಕ ಜೀವನ ರಂಗದಲ್ಲಿ ಏರುಪೇರುಗಳು, ಬದಲಾವಣೆಗಳೂ ಸರ್ವೇ ಸಾಮಾನ್ಯವಾಗಿ ನಡೆಯುತ್ತಲೇ ಇರುತ್ತವೆ. ಆದುದರಿಂದ ಯಾವ ಸಾಹಿತಿಯಾಗಲಿ, ಸಮಾಜ ಶಾಸ್ತ್ರಜ್ಞನೇ ಆಗಲಿ, ಅವರ ಸಮಕಾಲೀನ ಪರಿಸ್ಥಿತಿ ಒತ್ತಡಗಳಿಗೆ ಸಿಕ್ಕಿ, ಅಂತೆಯೇ ಸಾಮಾಜಿಕ ರೂಪರೇಷೆಗಳನ್ನು ವರ್ಣಿಸಿ, ವಿಶ್ಲೇಷಣೆ ಮಾಡಬೇಕಾಗುತ್ತದೆ. ಜೊತೆಗೆ ತಮ್ಮ ನಿಲುವುಗಳನ್ನು ಸಮರ್ಥಿಸಿಕೊಳ್ಳಬೇಕಾಗುತ್ತದೆ.

ಭೌತಿಕ-ಜೈವಿಕ ವಿಜ್ಞಾನ ಬೆಳವಣಿಗೆ, ಚರಿತ್ರೆಯ ಅಂಶಗಳೂ ಸಮಾಜ ಶಾಸ್ತ್ರಜ್ಞನನ್ನು ಪ್ರಚೋದಿಸಿವೆ. ಅನೇಕ ವಿದ್ವಾಂಸರು, ಭೌತಿಕ-ಜೈವಿಕ ವಿಜ್ಞಾನಗಳಲ್ಲಿ ಪ್ರತಿಪಾಧಿಸಿರುವ ತತ್ವಗಳನ್ನು ಸಮಾಜ ಜೀವನವನ್ನು ಶಾಸ್ತ್ರೀಯವಾಗಿ ಅಧ್ಯಯನ ಮಾಡಲು ಅಳವಡಿಸಿಕೊಂಡಿದ್ದಾರೆ. ಅದು ವಿವಿಧ ಮಟ್ಟಗಳಲ್ಲಿ ಈಗಲೂ ಕಾಣಬಹುದು. ಒಟ್ಟಿನಲ್ಲಿ ಹೇಳುವುದಾದರೆ ಸಾಮಾಜಿಕ ಪ್ರಜ್ಞೆ ಮೂಡಿಸುವ ಬೆಳವಣಿಗೆಗೆ ಅನೇಕ ಸಮಾಜ ಸುಧಾರಕರು ತಮ್ಮ ಜೀವನವನ್ನೇ ಧಾರೆ ಎರೆದು, ಅತ್ಯಮೂಲ್ಯವಾದ ಸೇವೆ ಸಲ್ಲಿಸಿದ್ದಾರೆ ಇಂಥ ಮಹನೀಯರುಗಳಿಂದ ಅನೇಕ ತತ್ವಗಳಿಗೆ ಮತ್ತು ಸಿದ್ಧಾಂತಗಳಿಗೆ ತಿರುವು ಕೊಡಲು ಅವಕಾಶವಾಯಿತು. ಈ ನಿಟ್ಟಿನಲ್ಲಿ ಪಾಶ್ಚಿಮಾತ್ಯ ವಿವಿಧ ದೇಶಗಳಿಗೆ ಸೇರಿದವರು ೧೯ ಮತ್ತು ೨೦ನೇ ಶತಮಾನದ ಆದಿಯಲ್ಲೇ ತಮ್ಮ ಬರವಣಿಗೆಗಳಿಂದ ಸಮಕಾಲೀನರನ್ನು ಹಾಗೂ ಮುಂದಿನ ಪೀಳಿಗೆಯನ್ನು ಎಚ್ಚರಿಸಿ ಸಾಮಾಜಿಕ ಜೀವನದ ಬಗ್ಗೆ ವಿಪುಲ ಚರ್ಚೆ,

ವಿವಿಧ ದೃಷ್ಟಿಕೋನ, ತತ್ವಗಳು, ಸಿದ್ಧಾಂತಗಳು ಬೆಳೆಯಲು ಸಹಾಯಕರಾದರು. ಇಂಗ್ಲೆಂಡ್ ದೇಶದ ಹರ್ಬರ್ಟ್‌ಸ್ಪೆನ್ಸರ್, ಫ್ರಾನ್ಸ್ ದೇಶದ ಆಗಸ್ಟ್‌ಕಾಮ್ಟೆ ಹಾಗೂ ಡರ್ಕ್‌ಹೈಂ, ಇಟಲಿಯ ಪ್ಯಾರಟೋ, ಜರ್ಮನಿಯ ಕಾರ್ಲ್‌ಮಾರ್ಕ್ಸ್ ಮುಂತಾದವರ ಪ್ರಭಾವ ಪ್ರಮುಖವಾದುದು.

ಆಗಸ್ಟ್‌ಕಾಮ್ಟೆ, ಸಮಾಜಶಾಸ್ತ್ರದ ಪಿತಾಮಹನೆಂದು ಪರಿಗಣಿಸಲ್ಪಟ್ಟಿದ್ದರೂ, ಅವನ ಜೀವನ(ಜನನ:೧೭೯೮) ಕಾಲದಲ್ಲಿ, ಅವನ ಬರವಣಿಗೆಗಳಿಂದ ಪ್ರಭಾವಿತರಾದವರು ಕಡಿಮೆ ಎಂದಾದರೂ ಸಮಾಜದ ವಿಕಸನ, ಬೆಳವಣಿಗೆಗೆ ಸಂಶೋಧನಾ ವಿಧಾನಗಳ ಬಗ್ಗೆ ಅವನ ಕೊಡುಗೆ ಮಾನ್ಯವಾದುದ್ದು. ಅವಲೋಕನ, ಪ್ರಯೋಗ ಹಾಗೂ ತುಲನಾತ್ಮಕ ವಿಧಾನಗಳು ಸಾಮಾಜಿಕ ಸ್ಥಿರತೆ ಮತ್ತು ಪ್ರಗತಿಗಳನ್ನು ಅಧ್ಯಯನ ಮಾಡಲು ಇಂದಿಗೂ ಅತ್ಯವಶ್ಯಕವಾಗಿ ಅನುಸರಿಸಬೇಕಾದ, ಉಳಿದು ಬಂದಿರುವ ಮಾರ್ಗಗಳು ಕಾಮ್ಟೆಯ ಕೊಡುಗೆಗಳಾಗಿವೆ. "ಸಮಾಜಶಾಸ್ತ್ರ ಎಂಬ ಪದವನ್ನು ಪ್ರಥಮ ಬಾರಿಗೆ ಬಳಕೆಗೆ ತಂದವನು ಎಂಬ ಗರಿಮೆ ಆತನಿಗೆ ಇದೆ"(**ಕೆ.ಎನ್. ಸೋಮಯ್ಯ, ಸಮಾಜಶಾಸ್ತ್ರದ ಆಚಾರ್ಯಯರು, ೧೯೭೭, ಪುಟ-೧೫**). ಸಾಮಾಜಿಕ ಪ್ರಗತಿ ಮತ್ತು ಸಾಮಾಜಿಕ ಭದ್ರತೆಗಳು ಒಂದಕ್ಕೊಂದು ಹೊಂದಿಕೊಂಡು ಹೋದರೆ ಸಾಮಾಜಿಕ ಸಾಮರಸ್ಯ ಸಾಧ್ಯವಾಗುತ್ತದೆ ಎಂದು ಹೇಳಿರುವ ಕಾಮ್ಟೆ ಮಾತುಗಳು ಆಧುನಿಕ ಸಮಾಜಶಾಸ್ತ್ರಜ್ಞರ ವಿಶೇಷ ವಿಶ್ಲೇಷಣೆಗೆ ಗುರಿಯಾಗಿವೆ. "ಒಂದು ಸಾಮಾಜಿಕ ವ್ಯವಸ್ಥೆಯಿಂದ ಇನ್ನೊಂದು ಸಾಮಾಜಿಕ ವ್ಯವಸ್ಥೆಗೆ ದಾರಿಯು ಯಾವಾಗಲೂ ಸುಗಮವಾಗಿರುವುದಿಲ್ಲ. ಅದು ಅನೇಕ ಎಡರು-ತೊಡರುಗಳಿಂದ ಕೂಡಿರುತ್ತದೆ"(**ಕೆ.ಎನ್. ಸೋಮಯ್ಯ, ಸಮಾಜಶಾಸ್ತ್ರದ ಆಚಾರ್ಯಯರು, ೧೯೭೭, ಪುಟ-೧೫**) ಎಂದು ಹೇಳುತ್ತಾನೆ. "ಅತಿ ಬುದ್ಧಿವಂತ ಜನರೂ ಸಹ ಮುಂದೆ ಉದ್ಭವಿಸುವ ಯುಗದ ಲಕ್ಷಣಗಳನ್ನು ಊಹಿಸಲು ಅಸಮರ್ಥರಾಗುತ್ತಾರೆ" ಎನ್ನುತ್ತಾನೆ. ಕಾಮ್ಟೆಯ ಪ್ರಕಾರ ಮಾನವ ವಿಕಾಸದ ಪ್ರತಿಯೊಂದು ಅನುಕ್ರಮ ಹಂತವೂ ಹಿಂದಿನ ಹಂತದಿಂದ ಅವಶ್ಯಕವಾಗಿ ಕೂಡಿ ಬರುತ್ತದೆ. ಹೊಸ ವ್ಯವಸ್ಥೆಯ ರಚನೆಯು ಪುರಾತನ ವ್ಯವಸ್ಥೆಯ ನಾಶವಾಗದೆ ಸಾಧ್ಯವಿಲ್ಲ. ಹಳೆಯ ಮಾನಸಿಕ ವ್ಯವಸ್ಥೆಯು ಅಸ್ತಿತ್ವಕ್ಕೆ ಬರಲುಸಾಧ್ಯ ಎನ್ನುವುದು ಆತನ ಸಿದ್ಧಾಂತ. ಜೈವಿಕ ವ್ಯವಸ್ಥೆಯು ಚರ್ಮದ ಹೊದಿಕೆಯನ್ನು ಹೊಂದಿದ್ದು ಭೌತಿಕ ಗಡಿಗಳನ್ನು ಹೊಂದಿರುತ್ತದೆ. ಆದರೆ ಸಾಮಾಜಿಕ ವ್ಯವಸ್ಥೆಯು ಭೌತಿಕ ಸಾಧನಗಳ ಮೂಲಕ ಒಂದುಗೂಡಿಸಲ್ಪಡದೆ

ಆಧ್ಯಾತ್ಮಿಕ ಸಾಧನಗಳ ಮೂಲಕ ಒಂದುಗೂಡಿಸಲ್ಪಟ್ಟಿರುತ್ತವೆ ಎಂಬ ಕಾಮ್ಟೆಯ ಮಾತುಗಳು ತಂಬಾ ಅರ್ಥಗರ್ಭಿತವಾಗಿವೆ. ಕುಟುಂಬದ ಮುಖಾಂತರ ವ್ಯಕ್ತಿಯು ತನ್ನ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳುತ್ತಾನೆ ಮತ್ತು ತನ್ನ ಸಹಜ ಪ್ರವೃತ್ತಿಗಳನ್ನು ಹಿಡಿತದಲ್ಲಿರಿಸಿಕೊಂಡು ಅವುಗಳನ್ನು ತನ್ನ ಇತರ ಒಳತಿಗಾಗಿ ಬಳಸಿಕೊಳ್ಳುವುದನ್ನು ಕುಟುಂಬದಲ್ಲಿಯೇ ಕಲಿಯತ್ತಾನೆ ಎಂದು ಹೇಳುತ್ತಾನೆ. "ಸಾಮಾಜಿಕ ಘಟನೆಗಳು ಶಾಸಕನ, ಮಾನವ ಅಥವಾ ದೇವಿಕ, ಆಕಸ್ಮಿಕ ಪ್ರವೇಶದಿಂದ ಅಸ್ತವ್ಯಸ್ತಗೊಳಿಸ್ಪಡುತ್ತವೆ ಎಂದು ಎಲ್ಲಿಯವರೆಗೆ ಮಾನವರು ನಂಬುತ್ತಾರೆಯೋ ಅಲ್ಲಿಯವರೆಗೆ ಅವುಗಳ ಶಾಸ್ತ್ರೀಯ ಖಚಿತತೆ ಸಾಧ್ಯವಿಲ ಎಲ್ಲಿಯವರೆಗೆ ಸಾಮಾಜಿಕ ಘಟನೆಗಳು ಯಾವ ನಿಯಮವನ್ನೂ ಅನುಸರಿಸದೆ ತಾವೇ ತಾವಾಗಿ ಸಂಭವಿಸುತ್ತವೆ ಎಂದು ಜನರು ನಂಬಿರುತ್ತಾರೆಯೋ, ಅಲ್ಲಿಯವರೆಗೆ ಅವರು ತಮ್ಮಹಿತ ಸಾಧನೆಯಾಗುವುದಿಲ್ಲ" ಎಂಬುದು ಅವನ ಅಭಿಪ್ರಾಯ.

ಹತ್ತೊಂಬತ್ತನೇ ಶತಮಾನದ ಜರ್ಮನಿಯ ಕಾರ್ಲ್‌ಮಾರ್ಕ್ಸ್ ಸಮಾಜ ಶಾಸ್ತ್ರವು ಕ್ರಾಂತಿಗೆ ಅತಿ ಹೆಚ್ಚಿನ ಪ್ರಾಧಾನ್ಯ ನೀಡಿತು. ಕ್ರಾಂತಿಯು ಬಂಡವಾಳಶಾಹಿ ಪದ್ಧತಿಯನ್ನು ನಾಶಪಡಿಸಿ ಅದರ ಸ್ಥಳದಲ್ಲಿ ವರ್ಗರಹಿತ ಸಮಾಜವಾದಿ ಸಮಾಜವನ್ನು ಅಸ್ತಿತ್ವಕ್ಕೆ ತರುತ್ತದೆ ಎಂದು ಮಾರ್ಕ್ಸ್‌ನು ಹೇಳಿದನು. ಪ್ರತಿಯೊಂದು ಐತಿಹಾಸಿಕ ಯುಗವೂ ಕೂಡ ಹಿಂದಿನ ಐತಿಹಾಸಿಕ ಕಾಲದ ವರ್ಗಕಲಹಗಳ ಪರಿಣಾಮವಾಗಿ ಒಂದು ಹೊಸ ಸಂಯೋಜನೆಯನ್ನು ಹೇಗೆ ನಿರ್ಮಿಸಲು ಶಕ್ತವಾಯಿತು ಎಂಬುದನ್ನು ಮಾರ್ಕ್ಸ್‌ನು ಸ್ಪಷ್ಟ ನಿದರ್ಶನಗಳನ್ನು ತೋರಿಸಿದ್ದಾನೆ. ಮಾರ್ಕ್ಸ್‌ನಿಗೆ ವರ್ಗಗಳು ಸದಾ ಪರಿವರ್ತನೆಗೊಳ್ಳುತ್ತಿರುವ ಐತಿಹಾಸಿಕ ಪ್ರಕ್ರಿಯೆಯ ಭಾಗಗಳಾಗಿದ್ದವು.

ಮಾರ್ಕ್ಸ್‌ನ ವಿಚಾರಧಾರೆಯು ಕಾಮ್ಟೆ ಮತ್ತು ಹೇಗಲ್‌ರುಗಳ ವಿಚಾರಧಾರೆಯಿಂದ ಭಿನ್ನವಾಗಿದ್ದಿತು. ಇವರುಗಳು ಮಾನವತೆಯ ವಿಕಾಸವು ಮುಖ್ಯವಾಗಿ ಭಾವನೆಗಳ ಅಥವಾ ಮಾನವ ಜೀವದ ವಿಕಾಸದಿಂದ ಉದ್ಭವಿಸಿತು ಎಂದು ಹೇಳಿದ್ದಾರೆ. ಮಾರ್ಕ್ಸ್‌ನು ಮಾನವನ ಭೌತದ್ರವ್ಯ ಪರಿಸ್ಥಿತಿಗಳಲ್ಲಿನ ವಿಕಸತೆಯನ್ನು ತನ್ನ ಅಧ್ಯಯನದ ವಸ್ತುವನ್ನಾಗಿ ಆರಿಸಿಕೊಂಡಿದ್ದಾನೆ. ಮಾರ್ಕ್ಸ್‌ನಿಗೆ ಜೀವನೋಪಾಯವನ್ನು ಸಂಪಾದಿಸಲು ಮಾನವರು ವಿವಿಧ ರೀತಿಯಲ್ಲಿ ಒಟ್ಟುಗೂಡಿಸುವುದು ಅತಿಮುಖ್ಯವಾದ ವಿಷಯವಾಗಿರುತ್ತದೆ. "ನಾಗರಿಕ ಸಮಾಜದ ದೇಹ ರಚನೆಯನ್ನು ರಾಜಕೀಯ ಅರ್ಥವ್ಯವಸ್ಥೆಯಲ್ಲಿ

ಕಂಡುಕೊಳ್ಳಬೇಕು"(ಕೆ.ಎನ್. ಸೋಮಯ್ಯ, ಸಮಾಜಶಾಸ್ತ್ರದ ಆಚಾರ್ಯಯರು, ೧೯೭೭, ಪುಟ-೭೭)ಎಂದು ಮಾರ್ಕ್ಸ್ ಹೇಳುತ್ತಾನೆ.

ಇಟಲಿ ದೇಶದ ಸುಪ್ರಸಿದ್ಧ ವಿಲ್‌ಫ್ರೆಡ್ ಪ್ಯಾರಟೋ (೧೮೪೮)ವಿನ ಪ್ರಕಾರ ಸಾಮಾನ್ಯ ಸಮಾಜಶಾಸ್ತ್ರವು "ಮಾನವನ ನಡತೆಯನ್ನು ನಿಯಂತ್ರಣಗೊಳಿಸುವ ಪರಸ್ಪರ ಅವಲಂಬಿತ ಅಂಶಗಳ ವಿಶ್ಲೇಷಣೆಯನ್ನು ಒಂದು ನಿರ್ದಿಷ್ಟ ಸಾಮಾಜಿಕ ವ್ಯವಸ್ಥೆಯ ಚೌಕಟ್ಟಿನಲ್ಲಿ ಕೈಗೊಳ್ಳುತ್ತದೆ. ಮಾನವ ಸಮಾಜವು ಯಾವಾಗಲೂ ಸಿಂಹಗಳ ಆಡಳಿತ ಮತ್ತು ನರಿಗಳ ಆಡಳಿತವನ್ನು ಅದಲು ಬದಲು ಮಾಡಿಕೊಳ್ಳುತ್ತಾ ಮುಂದುವರಿಯುತ್ತದೆ" ಎಂದು ಹೇಳುತ್ತಾನೆ. ಅದು ನಿರಂತರವಾಗಿ ಒಂದು ಸ್ಥಾನದಿಂದ ಇನ್ನೊಂದು ಸ್ಥಾನಕ್ಕೆ ಚಲಿಸುವ ಆದರೆ ಅಂತಿಮವಾಗಿ ಪರಿವರ್ತನೆ ಹೊಂದದ ಸಮತೋಲನದ ಪ್ರಭಾವಕ್ಕೊಳಗಾಗುತ್ತದೆ ಎಂಬುದು ಅವನ ಸ್ಪಷ್ಟ ಅಭಿಮತವಾಗಿತ್ತು.

ಭಾರತೀಯ ಇತಿಹಾಸದ ನವಯುಗ ಆರಂಭವಾಗಿ ಸಮಾಜ ಸುಧಾರಣೆಯಲ್ಲಿ ಹೊಸ ದೃಷ್ಟಿ ಮೂಡಿದ ಮೇಲೆ ೧೯ನೇ ಶತಮಾನದ ಮಧ್ಯಭಾಗದಲ್ಲಿ ಅಸ್ಪೃಶ್ಯತೆ ಅರ್ಥವಿಲ್ಲದ್ದು, ಕಳಂಕಪ್ರಾಯವಾದದ್ದು ಎಂಬ ಅರಿವನ್ನು ಜನರಲ್ಲಿ ಮೂಡಿಸುವ ಪ್ರಯತ್ನಕ್ಕೆ ಮೌಢ್ಯ ನಿವಾರಕ ಬಂಗಾಳದ ರಾಜಾರಾಮ ಮೋಹನ ರಾಯರು ಕೈಹಾಕಿದರು. ಈ ಮೊದಲೇ 'ಸತಿಪದ್ಧತಿ' (ಗಂಡನ ಶವದೊಂದಿಗೆ ಜೀವಂತಪತ್ನಿ ಬೆಂಕಿಗೆ ಆಹುತಿಯಾಗುವುದು)ಯನ್ನು ನಿಷೇಧಿಸುವುದರಲ್ಲಿ ಯಶಸ್ವಿಯಾದರು. ಮುಂದೆ ಗಾಂಧೀಯುಗದಲ್ಲಿ ಅಸ್ಪೃಶ್ಯತೆ ನಿವಾರಣೆ ಘೋಷಣೆಯಾಗಿ ಉಳಿಯದೆ ಕಾರ್ಯರೂಪಕ್ಕೆ ಬಂದು ದೊಡ್ಡ ಆಂದೋಳನವೇ ನಡೆಯಿತು. ಈ ಆಂದೋಳನ ಅಥವಾ ಚಳವಳಿಯಲ್ಲಿ ದೇಶಾದ್ಯಂತ ಅಸ್ಪೃಶ್ಯರ ಬಗ್ಗೆ ಸವರ್ಣೀಯರ ಹೃದಯ ಪರಿವರ್ತನೆ ಮಾಡುವುದಕ್ಕೆ ತೀವ್ರವಾದ ಹಾಗೂ ಬಹುಮುಖವಾದ ಪ್ರಚಾರ ಕಾರ್ಯ ನಡೆಯಿತು. ಗಾಂಧೀಜಿಯವರ ಸಮಾಜ ಸುಧಾರಣೆಯಲ್ಲಿ ಅಸ್ಪೃಶ್ಯತಾ ನಿವಾರಣೆಗೆ ಪ್ರಥಮ ಸ್ಥಾನ. ದೇಶದ ಆರ್ಥಿಕ ಸ್ವಾತಂತ್ರ್ಯವನ್ನುಗಳಿಸುವುದಕ್ಕೆ ಚರಕ ಹೇಗೆ ಸಾಧನವೋ ಸಮಾಜದ ಉನ್ನತಿಯ ಸಾಧನೆಗೆ ಅಸ್ಪೃಶ್ಯತಾ ನಿವಾರಣೆಯೇ ಕೀಲಿಕೈ ಎಂಬುದು ಗಾಂಧೀಜಿಯವರ ದೃಷ್ಟಿಯಾಗಿತ್ತು. ಅಸ್ಪೃಶ್ಯರ ಬಗ್ಗೆ ಸಮಾಜದಲ್ಲಿ ಒಂದು ಹೊಸದೃಷ್ಟಿ ಮೂಡಲಿ ಎಂದು ಅವರನ್ನು ಹರಿಜನ(ಹರಿಗೆ ಪ್ರಿಯರಾದವರು)ರೆಂದು ಕರೆದರು. ತಮ್ಮ ಪ್ರಸಾರ ಕಾರ್ಯದ ಮುಖ್ಯ ಅಂಗವಾದ ವಾರಪತ್ರಿಕೆಗೆ 'ಹರಿಜನ' ಎಂದೇ

ಹೆಸರಿಟ್ಟರು. ಹರಿಜನರ ಉದ್ಧಾರಕ್ಕಾಗಿ ದೇಶಾದ್ಯಂತ ಪ್ರವಾಸ ಮಾಡಿ ಒಂದು ನಿಧಿಯನ್ನೇ ಶೇಖರಿಸಿದರು. ಈ ನಿಧಿಯಿಂದ ಹರಿಜನರಿಗೆ ಉತ್ತಮ ವಸತಿ, ವಿದ್ಯಾಭ್ಯಾಸ, ಆರೋಗ್ಯವಾಗಿ ಬಾಳಲು ಅಗತ್ಯವಾಗಿರುಂತಹ ಜೀವನ ಸೌಲಭ್ಯಗಳು, ಉತ್ತಮ ಕಸುಬುಗಳನ್ನು ಒದಗಿಸಿಕೊಟ್ಟರು. ನಮ್ಮ ಇತಿಹಾಸದ ಯಾವ ಘಟ್ಟದಲ್ಲಿಯೂ ಅಸ್ಪೃಶ್ಯತಾ ನಿವಾರಣೆಯ ಬಗ್ಗೆ ಇಂತಹ ಕ್ರಾಂತಿಕಾರಕ ಪರಿಣಾಮವಾಗಿರಲಿಲ್ಲ. ಇಂಥ ಒಂದು ದಿಟ್ಟ ಪ್ರಯತ್ನದಲ್ಲಿ ಗಾಂಧೀಜಿಯವರೊಂದಿಗೆ ಕೈಜೋಡಿಸಿದವರಲ್ಲಿ ವಿನೋಬಾಭಾವೆ ಅವರು ಪ್ರಮುಖರಾಗಿದ್ದು ಇವರೂ ಸಹ ದೇಶಾದ್ಯಂತ ಸಂಚರಿಸಿ ಉಳ್ಳವರಿಂದ ಭೂಮಿ ಪಡೆದು ಭೂರಹಿತರಿಗೆ ಹಂಚಿದ್ದು 'ಭೂದಾನಚಳುವಳಿ' ಎಂದೇ ಹೆಸರಾಯಿತು. ಸರ್ವೋದಯ ಇವರ ಧ್ಯೇಯವಾಯಿತು.

ಹೀಗೆ ಸಮಾಜ ಎಂದು ಕರೆಯುವ ಮನುಷ್ಯ ಸಮೂಹದ ಒಂದು ಗುಂಪಿಗೆ ಸೇರಿದವನು ಎಂಬ ಅರಿವಿರುವುದೇ ಸಮಾಜ ಪ್ರಜ್ಞೆ. ಈ ಮಾತು ಹೊಸತಾದರೂ ಅದರ ಅರ್ಥ ಆದಿಕಾಲದಿಂದಲೂ ಬೇರೆ ಬೇರೆ ಶಬ್ದಗಳ ಮೂಲಕ ವ್ಯಕ್ತವಾಗುತ್ತ ಬಂದಿದೆ. ವ್ಯಕ್ತಿ ವಿಶಿಷ್ಟತೆಯ ಅರಿವು ಹೇಗೆ ನಮ್ಮ ಅಂತರಂಗದ ಒಂದು ಅವಿಭಾಜ್ಯ ಅಂಶವೋ ಹಾಗೆಯೇ ನಾವು ಒಂದೇ ಸಮಾಜಕ್ಕೆ ಸೇರಿದವರು ಎಂಬ ಅರಿವೂ ಕೂಡ. ಇದರಲ್ಲಿ ಮೊದಲನೆಯದು ಸ್ವಾರ್ಥಕ್ಕಾಗಿ ಮಾರ್ಪಟ್ಟು ಸರ್ವೆಸಾಮಾನ್ಯವಾಗಿದ್ದರೆ ಎರಡನೆಯದು ಎಂದರೆ ಸಮಾಜಪ್ರಜ್ಞೆ ಒಂದಲ್ಲ ಒಂದು ಮಟ್ಟದಲ್ಲಿ ಎಲ್ಲರಲ್ಲೂ ಇರುವಂಥದೇ ಎಂದು ಹೇಳಬಹುದು.

ಸಂಘಜೀವಿಯಾದ ಮನುಷ್ಯ ತನ್ನ ವ್ಯಕ್ತಿತ್ವದ ಸರ್ವಾಂಗೀಣ ವಿಕಸನಕ್ಕಾಗಿ ಸಮಾಜದ ಒಳಗೆ ವಾಸ ಮಾಡುವುದು ಅನಿವಾರ್ಯ. ಒಂದು ಸಾಮಾಜಿಕ ಚೌಕಟ್ಟಿನ ಅಡಿಯಲ್ಲಿಯೇ ಆತ ತನ್ನ ಬದುಕನ್ನು ಕಂಡುಕೊಳ್ಳಬೇಕು. ಇಂಥ ಸಾಮಾಜಿಕ ವ್ಯವಸ್ಥೆಗೆ ತನ್ನನ್ನು ಒಗ್ಗಿಸಿಕೊಂಡ ಮಾನವ ತನ್ನ ಅಸ್ತಿತ್ವಕ್ಕಾಗಿ ತನ್ನದೇ ಪರಿಸರದಲ್ಲಿ ಕೆಲವು ಸಂಸ್ಥೆಗಳನ್ನು ರೂಪಿಸಿಕೊಂಡಿದ್ದಾನೆ. ಒಂದು ಸಾಮಾಜಿಕ ಪರಿಸರ ಎನ್ನುವಾಗ ವಿವಾಹ, ಕುಟುಂಬ, ಜಾತಿ, ಮತ, ಧರ್ಮ, ಆಚಾರ, ವಿಚಾರ, ನಂಬಿಕೆ, ಸಂಪ್ರದಾಯ, ಹಬ್ಬ-ಹರಿದಿನ. ಜಾತ್ರೆ, ಉತ್ಸವ, ಮದುವೆ-ಮುಂಜಿ, ಉಡುಗೆ-ತೊಡುಗೆ, ಒಡವೆ-ವಸ್ತ್ರ ಭಾಷೆಗಳೇ ಮೊದಲಾದ ವಿಚಾರಗಳನ್ನು ಒಳಗೊಂಡಿರುತ್ತವೆ. ಇದನ್ನು ವಿಶಾಲವಾದ ಅರ್ಥದಲ್ಲಿ ಸಂಸ್ಕೃತಿ ಎಂದು ಕರೆಯುತ್ತೇವೆ.

ಸಂಸ್ಕೃತಿಯನ್ನು ಕುರಿತಂತಹ ಚರ್ಚೆ ಯಾವುದೋ ಒಂದು ಕಾಲಘಟ್ಟದಲ್ಲಿ ನಿಲ್ಲುವಂಥದ್ದಲ್ಲ. ಅದರ ಬಗೆಗಿನ ಅಧ್ಯಯನ ಕುರಿತಂತ ವಿವೇಚನೆ ಯಾವ ಕಾಲಕ್ಕೂ ಪ್ರಸ್ತುತವೇ. ಸಂಸ್ಕೃತಿ ಅವಶ್ಯವಾಗಿ ಮಾನವನ ಗುಣಲಕ್ಷಣ ಎನ್ನುವ ಮಾನವಶಾಸ್ತ್ರಜ್ಞ ಜುಕರ್‌ಮನ್‌ನ ಅಭಿಪ್ರಾಯವನ್ನು ಎಲ್ಲರೂ ಒಪ್ಪುತ್ತಾರೆ. ಏಕೆಂದರೆ ಸಂಸ್ಕೃತಿ ಪ್ರಾಣಿ ಸಮುದಾಯಕ್ಕೆ ಅನ್ವಯಿಸುವುದಿಲ್ಲ. ಪ್ರಾಣಿ ಸಮಾಜ ತನ್ನ ಹಿಂದಿನ ಪೀಳಿಗೆಯ ಚಟುವಟಿಕೆಗಳಿಂದ ಪಾಠ ಕಲಿಯುವುದಿಲ್ಲ. ಹಿಂದಿನ ಅನುಭವಗಳ ಸ್ಥಿತಿ ಪ್ರಾಣಿವರ್ಗದಲ್ಲಿ ನಿರ್ಮಾಣವಾಗುವುದಿಲ್ಲ. ಆದ್ದರಿಂದ ಜನರ ಜೀವನ ವಿಧಾನವೇ ಸಂಸ್ಕೃತಿ. "ಜನ ಯಾರಾದರೂ ಆಗಿರಬಹುದು, ಎಲ್ಲಾದರೂ ವಾಸಿಸಬಹುದು. ಜನರಿದ್ದ ಕಡೆ ಅವರ ಸಂಸ್ಕೃತಿ ಇದ್ದೇ ಇರುತ್ತದೆ. ಆದರೆ, ಹೀಗೆ ಇರುವ ಸಂಸ್ಕೃತಿ ಒಂದೇ ತೆರನಾದುದಲ್ಲ, ಒಂದೇ ವಿನ್ಯಾಸದ್ದಲ್ಲ. ಒಂದೊಂದು ಪ್ರದೇಶದಲ್ಲಿ ಒಂದೊಂದು ಸಂಸ್ಕೃತಿ ಇರಲು ಸಾಧ್ಯ. ಸಂಸ್ಕೃತಿಗೆ ಮೇಲು-ಕೀಳು ಎಂಬ ತಾರತಮ್ಯ ಭಾವನೆ ಸಲ್ಲ."

ಸಂಸ್ಕೃತಿ ಎಂದಿಗೂ ವ್ಯಕ್ತಿ ಕೇಂದ್ರಿತವಲ್ಲ. ಅದು ಒಂದು ಸಮಾಜದ ಮಹತ್ವದ ಆಸ್ತಿ. ಆ ಸಮಾಜದ ಸದಸ್ಯರಾದ ವ್ಯಕ್ತಿಯ ನಂಬಿಕೆ, ಆಚರಣೆ, ಕಾನೂನು ಕಟ್ಟಳೆ, ಆಹಾರ, ಭಾಷೆ, ಉಡುಗೆ, ದೇವರು, ಧರ್ಮವೇ ಮೊದಲಾದವು ಒಂದು ಸಂಸ್ಕೃತಿಯ ವಿವರಣೆಯ ಅಂಗಗಳಾಗುತ್ತವೆ. ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಮಂಡ್ಯ ಜಿಲ್ಲೆಯ ಸಾಮಾಜಿಕ ಪರಿಸರದ ಅಧ್ಯಯನವನ್ನು ಮಾಡಬೇಕಾಗುತ್ತದೆ.

ಮಂಡ್ಯ ಜಿಲ್ಲೆಯ ಸಂಸ್ಕೃತಿ ಎಂದರೆ ಅಪ್ಪಟ ಗ್ರಾಮೀಣ ಸಂಸ್ಕೃತಿ. ಅದೂ ವ್ಯವಸಾಯ ಸಂಸ್ಕೃತಿಯೇ ಆಗಿದೆ. ಇಲ್ಲಿ ಒಕ್ಕಲುತನ ಪ್ರಧಾನ ವಾಗಿರುವುದರಿಂದಲೇ ಬಹುಸಂಖ್ಯಾತ ಒಕ್ಕಲಿಗ ಜನಾಂಗದ ಜತೆಗೆ ಅಲ್ಪಸಂಖ್ಯಾತ ಧರ್ಮ ಮತ್ತು ಜಾತಿಯ ಜನ ತಮ್ಮ ಮೂಲ ವೃತ್ತಿಯನ್ನು ಅವಲಂಬಿಸಿಯೂ ಬೇಸಾಯಕ್ಕೆ ಅಗ್ರಪ್ರಾಶಸ್ತ್ಯ ನೀಡಿದ್ದಾರೆ. ಮಂಡ್ಯ ಜಿಲ್ಲೆಯ ಜನರ ಸಕಲ ಚಟುವಟಿಕೆಗಳಿಗೂ ವ್ಯವಸಾಯವನ್ನೇ ಅವಲಂಬಿಸಿವೆ. ಈ ಜಿಲ್ಲೆಯ ರೈತರ ವ್ಯವಸಾಯದ ಮಮತೆ ಮತ್ತು ನಿಷ್ಠೆ ಅನನ್ಯ. ಬೇಸಾಯ ಸಂಬಂಧಿ ಪ್ರತಿ ಕ್ರಮ, ಪ್ರತಿ ವಸ್ತು ರೈತರಿಗೆ ಪೂಜ್ಯನೀಯ, ಪರಮ ಪವಿತ್ರ, ಇಲ್ಲಿ ಮೌಢ್ಯ, ಕಂದಾಚಾರ ಎಂಬ ಪ್ರಶ್ನೆ ಉದ್ಭವಿಸುವುದೇ ಇಲ್ಲ. ಧಾನ್ಯ ಒಕ್ಕಣೆ ಮಾಡುವ ಕಣವನ್ನು 'ದೇವಾಲಯ' ಎಂದು ಭಾವಿಸುತ್ತಾರೆ. ಅಲ್ಲಿ ಉಗಿಯುವುದಾಗಲೀ, ಚಪ್ಪಲಿ

ಹಾಕಿಕೊಂಡು ಪ್ರವೇಶ ಮಾಡುವುದಾಗಲೀ ನಿಷಿದ್ಧ. ಕಣದಲ್ಲಿ ಒಟ್ಟುಗೂಡಿಸಿದ ಬೆಳೆಯ ರಾಶಿಯಿಂದ ಯಾರಿಗೂ ಭಿಕ್ಷೆ ನೀಡಬಾರದು. ಕಣದ ಮೇಟಿಯಲ್ಲಿ ಬರಿದೆ ಸುತ್ತಬಾರದು. ಗದ್ದೆ ತೆವರಿಗಳ ಮೇಲೆ ಚಪ್ಪಲಿ ಧರಿಸಿ ಓಡಾಡಬಾರದು. ಧಾನ್ಯ ಅಳೆಯುವಾಗ 'ಏಳರ' ಸಂಖ್ಯೆಯನ್ನು ಉಚ್ಚರಿಸಬಾರದು. 'ಹೆಚ್ಚಲಿ' ಎನ್ನುಬೇಕು. ತುಂಬಿದ ಕಣಜ ಮತ್ತೆ ತೊಂಬೆಯನ್ನು ಕೀಳುವಾಗ ಪೂಜಿಸಬೇಕು ಇವೇ ಮೊದಲಾದ ಪರಂಪರೆಯಿಂದ ಬಂದ ಅಲಿಖಿತ ನಿಯಮಗಳು ಜಿಲ್ಲೆಯ ವ್ಯವಸಾಯಗಾರರ ಬದುಕಿನಲ್ಲಿ ಪ್ರಧಾನ ಪಾತ್ರ ವಹಿಸಿವೆ. ಇವುಗಳಿಗೆ ಅಗೌರವ ಸೂಚಿಸುವುದಾಗಲೀ, ಅನಾದರ ತೋರಿಸುವುದಾಗಲೀ ಅದನ್ನು ಬಹು ದೊಡ್ಡ ಅಪರಾಧವೆಂದೇ ಪರಿಗಣಿಸುತ್ತಾರೆ.

ಅದಾಗ್ಯೂ ಆದಾಯದ ಸ್ಪಷ್ಟ ಪರಿಕಲ್ಪನೆ ಇರದ ಜಿಲ್ಲೆಯ ರೈತನ ವ್ಯವಸಾಯ ಸಂಬಂಧಿ ಲೆಕ್ಕಾಚಾರ ಅನೇಕ ಬಾರಿ ಏರು-ಪೇರಾಗವುದುಂಟು. ಹಾಗಾಗಿಯೇ 'ಮಂಡಿ ಉದ್ದ ಬೆಳೆ, ಎದೆಯುದ್ದ ಸಾಲ' ಎಂಬ ಮಾತು ಈ ನೆಲದ ರೈತಾಪಿ ಜನರ ಆರ್ಥಿಕ ಸ್ಥಿತಿ-ಗತಿಗಳ ಮಾಪನವೂ ಆಗಿದೆ. ಈ ಸ್ಥಿತಿಗೆ ಕಾರಣಗಳೂ ಇಲ್ಲದಿಲ್ಲ. ಇಲ್ಲಿನ ಬಹುತೇಕ ರೈತರು ಬೇಸಾಯದಲ್ಲಿ ಸುಧಾರಣೆಯನ್ನು ಕಂಡುಕೊಳ್ಳದೆ ಹಳೆಯ ಕಾಲದ ವ್ಯವಸಾಯ ಪದ್ಧತಿಯನ್ನೇ ಮುಂದುವರೆಸಿರುವುದು. ದುರದೃಷ್ಟವಶಾತ್ ಜಿಲ್ಲೆಯ ಜನರಲ್ಲಿ ಇತ್ತೀಚೆಗೆ ಕೃಷಿ ಭೂಮಿಯ ಮೇಲಿನ ಮಮತೆ ಕಡಿಮೆಯಾಗುತ್ತಿದೆ. ಮೇಣಿಯ ಮೇಲೆ ಕೈಯೂರಿ ಮಣ್ಣಿನತ್ತ ಮುಖ ಮಾಡುವ ಮಂದಿ ವಿರಳವಾಗುತ್ತಿದ್ದಾರೆ. ಕಲಿತ ರೈತ ಯುವಕರು ತನ್ನ ಊರಿನಲ್ಲಿ ವ್ಯವಸಾಯದ ಮೂಲಕ ಅಸ್ತಿತ್ವ ಕಂಡುಕೊಳ್ಳಲು ತೊಳಲಾಡುತ್ತಿದ್ದಾರೆ.

ನೂರಾರು ವರ್ಷಗಳಿಂದ ಮಂಡ್ಯ ಜಿಲ್ಲೆಯ ಜನಪ್ರಿಯವೂ ಪ್ರಧಾನವೂ ಆದಂತಹ ಆಹಾರವೆಂದರೆ ರಾಗಿಮುದ್ದೆ-ಸೊಪ್ಸಾರು. ಆರ್ಥಿಕವಾಗಿ ಮುಂದುವರೆದಿರುವ ಮನೆಗಳಲ್ಲೂ ಇದೇ ಊಟ ಸಾಮಾನ್ಯ. 'ರಾಗಿಯನು ತಿಂಬುವನು ನಿರೋಗಿ' ಎಂಬ ಕವಿವಾಣಿ ರಾಗಿಯ ಪೌಷ್ಠಿಕತೆ ಮತ್ತು ಶಕ್ತಿವರ್ಧನೆಯನ್ನು ಶ್ರುತಪಡಿಸುತ್ತದೆ. ದಾಸವರೇಣ್ಯರಾದ ಕನಕದಾಸರು ರಾಗಿಯನ್ನು 'ರಾಮಧಾನ್ಯ' ಎಂದು ಕರೆದು ದೈವೀಕ ಸ್ಪರ್ಶವನ್ನೇ ನೀಡಿರುವರು. ಅದರಿಂದಾಗಿ ರೈತಾಪಿ ಜನ ರಾತ್ರಿ ಉಳಿದ ರಾಗಿಮುದ್ದೆಯನ್ನು ಬೆಳ್ಳಂಬೆಳಗ್ಗೆ ಮೊಸರು, ಮಜ್ಜಿಗೆ ಕೊನೆಗೆ ನೀರಿನಲ್ಲಾದರೂ ಸರಿಯೇ ಉಪ್ಪು ಹಾಕಿ ಕಲಸಿ

ಕುಡಿಯುತ್ತಾ ಜೊತೆಗೆ ಈರುಳ್ಳಿ ನಂಚುತ್ತಾ ಹೊತ್ತು ನೆತ್ತಿಯ ಮೇಲೆ ಬರುವ ತನಕ ಉತ್ಸಾಹದಿಂದ ದುಡಿಯುತ್ತಾರೆ. ಉಪ್ಪು ಕಾರದ ಜೊತೆ ತಂಗಳು ಮುದ್ದೆಯನ್ನು ಮಿದ್ದು ತಿನ್ನುವ ಆ ಆನಂದ ಅವರ್ಣನೀಯ. ಜಿಲ್ಲೆಯ ಪಟ್ಟಣ ಪ್ರದೇಶಗಳ ಜನರ ನಿತ್ಯದ ಊಟದಲ್ಲಿಯೂ ರಾಗಿ ಮುದ್ದೇಯೇ ಪ್ರಧಾನ ಪಾತ್ರ.

ಜಿಲ್ಲೆಯ ಮತ್ತೊಂದು ಮುಖ್ಯ ಆಹಾರ ಅನ್ನ. ಹಿಂದೆ ಹಾರಕ, ಸಾಮೆ, ನವಣೆ ಬೆಳೆದು ಅನ್ನವಾಗಿ ಬಳಸುತ್ತಿದ್ದರು. ಅದೂ ವರುಣನ ಕೃಪೆ ಇದ್ದರೆ ಮಾತ್ರ. ಹಿಂದೆ ಮಂಡ್ಯ ಜಿಲ್ಲೆಯ ರೈತರು ತಾವು ಬೆಳೆದ ರಾಗಿ ಮತ್ತು ಕಾಳುಗಳನ್ನು ಮಾರಾಟ ಮಾಡಿ ಅಕ್ಕಿ ತರುತ್ತಿದ್ದರು. ಇಷ್ಟಾದರೂ ಹಬ್ಬ, ಹರಿದಿನಗಳನ್ನು ಹೊರತು ಪಡಿಸಿದರೆ ಊಟದಲ್ಲಿ ಅನ್ನ ಧಾರಾಳವಾಗಿರಲಿಲ್ಲ. 'ಹೊಟ್ಟೆ ತುಂಬಾ ಹಿಟ್ಟು, ಬಾಯಿ ತುಂಬಾ ಅನ್ನ' ಎನ್ನುವ ಮಾತು ಚಾಲ್ತಿಯಲ್ಲಿತ್ತು. ಆದರೆ, ಕೃಷ್ಣರಾಜಸಾಗರ ಅಣೆಕಟ್ಟೆಯ ಕೃಪೆಯಿಂದ ಇಂದು ಮಂಡ್ಯ ಜಿಲ್ಲೆ 'ಭತ್ತದ ಕಣಜ' ಎನಿಸಿಕೊಂಡಿದೆ.

ಮಂಡ್ಯ ಜಿಲ್ಲೆಯ ಸಾರುಗಳಲ್ಲಿ ಪ್ರಧಾನ ಸ್ಥಾನ ಆಕ್ರಮಿಸಿರುವುದು 'ಸೊಪ್ಸಾರು', ಇದಕ್ಕೆ 'ಉಪ್ನೀರು', 'ಉಪ್ಪೆಸರು' ಎಂದೂ ಕರೆಯುತ್ತಾರೆ. ವರ್ಗಭೇದವಿಲ್ಲದೆ ಸಮಾನ ಪ್ರೀತಿಯಿಂದ ಒಪ್ಪಿ ಉಣ್ಣುತ್ತಿರುವ ಸಾರು. ನಿತ್ಯ ಬಗೆಬಗೆಯ ತರಕಾರಿ ಬಳಸಿ ಸಾಂಬಾರು ಮಾಡಿ ಉಣ್ಣಲು ಆರ್ಥಿಕ ಬಲವಿಲ್ಲದ ಬಹು ಸಂಖ್ಯಾತ ಬಡಜನರ ಒಪ್ಪಿತ ಸಾರು; ನಿತ್ಯಬಳಕೆಯ ಸಾರು. ಸಿರಿವಂತರೂ ಸಹ ಕೆಟ್ಟಿರುವ ತಮ್ಮ ನಾಲಗೆಯ ರುಚಿಯನ್ನು ಸರಿಪಡಿಸಿಕೊಳ್ಳುವ, ಆರೋಗ್ಯವನ್ನು ಸುಸ್ಥಿತಿಯಲ್ಲಿಟ್ಟುಕೊಳ್ಳಲು ಅನಿವಾರ್ಯವಾಗಿ ಇಚ್ಛಿಸಿ ಆಧರಿಸಿರುವ ಸಾರು. ಆರ್ಥಿಕ ಪ್ರಗತಿಯ ಕುರುಹಾಗಿ ಗ್ರಾಮ್ಯ ಮತ್ತು ನಗರ ಪ್ರದೇಶಗಳೆರಡರಲ್ಲೂ ಬಳಕೆಯಾಗುತ್ತಿದೆ.

ಹಬ್ಬ-ಹರಿದಿನಗಳು ಗ್ರಾಮ್ಯ ಜನಪದ ಸಂಸ್ಕೃತಿಯ ಅವಿಭಾಜ್ಯ ಅಂಗಗಳು. ಸೌಹಾರ್ದಯುತ ಬದುಕಿಗೆ, ಸಹಕಾರಿ ಮನೋಭಾವಕ್ಕೆ ಪರಸ್ಪರ ಪ್ರೀತಿ ವಿಶ್ವಾಸಕ್ಕೆ ನಾಂದಿಯಾಗಿದ್ದವು. ಮಂಡ್ಯ ಜಿಲ್ಲೆಯ ಹಬ್ಬಗಳು. ಗ್ರಾಮೀಣ ಜನರ ಬದುಕಿನಲ್ಲಿ ಹಾಸುಹೊಕ್ಕಾಗಿ ಬೆರೆತುಹೋಗಿದ್ದ ಹಬ್ಬಗಳ ಆಚರಣೆಯಲ್ಲಿ ಇತ್ತೀಚೆಗೆ ಅನಗತ್ಯವಾದ ರಾಜಕೀಯ ಪ್ರವೇಶ, ವ್ಯಕ್ತಿಗತ ಪ್ರತಿಷ್ಠೆ, ಗ್ರಾಮ್ಯ ಬದುಕಿನಲ್ಲಿ ನುಸುಳಿದ ವ್ಯಾವಹಾರಿಕತೆ, ಪರಸ್ಪರ ಸಂಬಂಧಗಳನ್ನು ಸಂಶಯದಿಂದ ನೋಡುವ ಸಣ್ಣತನ, ಗುಂಪುಗಾರಿಕೆ- ಇವೇ ಮೊದಲಾದ ಹತ್ತು ಹಲವು ಸಲ್ಲದ ಗೊಂದಲಗಳಿಂದ ಜಿಲ್ಲೆಯ ಹಬ್ಬಗಳು ಯಾಂತ್ರಿಕವಾಗಿ ನಡೆಯುತ್ತಿವೆ. ಹಿಂದಿನ

ವೈಭವ ಕಣ್ಮರೆಯಾಗಿದೆ. ಪ್ರೀತ್ಯಾದರಗಳು ಮಾಯವಾಗಿವೆ. ಗ್ರಾಮಾಂತರ ಪ್ರದೇಶದ ರೈತಮಕ್ಕಳ ಬದುಕಿನಲ್ಲಿ ಆನಂದಾತಿಶಯಗಳನ್ನು ಉಂಟು ಮಾಡಿದ್ದ ನೆಂಟಸ್ತಿಕೆಯನ್ನು ಪರಸ್ಪರ ಸಂಬಂಧಗಳನ್ನು ಗಟ್ಟಿಗೊಳಿಸುತ್ತಾ ಬಂದಿದ್ದ ಗ್ರಾಮ್ಯ ಸಾಮಾಜಿಕ ಸಂಸ್ಕೃತಿಯ ಬೇರುಗಳು ನಾಗರಿಕತೆಯ ವ್ಯಾಮೋಹಕ್ಕೆ ಸಿಲುಕುತ್ತಿವೆ. ಹೀಗಾಗಿ ತುಂಬು ಪ್ರೀತಿ ಮತ್ತು ಭಕ್ತಿ ಇರಿಸಿಕೊಂಡು ಸಂಭ್ರಮದಿಂದ ಆಚರಿಸುತ್ತಾ ಬಂದಿದ್ದ ಹಬ್ಬ, ಜಾತ್ರೆ, ರಥ, ಉತ್ಸವ ಮೊದಲಾದ ವಿಚಾರಗಳು ತಮ್ಮ ಕಣ್ಣ ಮುಂದೆಯೇ ಕರಗಿ ಹೋಗುತ್ತಿರುವುದನ್ನು ಕಂಡ ಹಿರಿಜೀವಗಳು ಚಡಪಡಿಸುತ್ತಿವೆ. ಇಷ್ಟಾದರೂ ಹಬ್ಬಗಳಿಗೆ ಸಂಬಂಧಿಸಿದಂತೆ ನಂಬಿಕೆ, ಸಂಪ್ರದಾಯ ಆಚರಣೆಗಳು ಪಳೆಯುಳಿಕೆಗಳ ರೂಪದಲ್ಲಾದರೂ ಒಕ್ಕಲು ಮಕ್ಕಳಲ್ಲಿ ಕಂಡುಬರುತ್ತಿರುವುದು ಸಮಾಧಾನಕರ ಸಂಗತಿ.

ಕರ್ನಾಟಕ ಜಾನಪದದ ತೊಟ್ಟಿಲು ಎಂದು ಕರೆಸಿಕೊಳ್ಳುವ ಎರಡು ಜಿಲ್ಲೆಗಳಲ್ಲಿ ಮಂಡ್ಯ ಜಿಲ್ಲೆ ಮೊದಲನದು. (ಇನ್ನೊಂದು ಬಿಜಾಪುರ ಜಿಲ್ಲೆ) ಮಂಡ್ಯ ಜಿಲ್ಲೆಯ ಒಳಗೆ ಜಾನಪದ ಸಂಸ್ಕೃತಿಯ ಪ್ರತೀಕವಾದ, ವಿಶಿಷ್ಟ ಭಾಗವೇ ಆದ 'ಜಾತ್ರೆ' ಇವತ್ತಿಗೂ ತನ್ನ ಅಸ್ತಿತ್ವವನ್ನು ಜೋಪಾನವಾಗಿ ಕಾಯ್ದುಕೊಂಡು ಬಂದಿದೆ. ಹಬ್ಬ ಮತ್ತು ಜಾತ್ರೆ ಸಾಮಾನ್ಯವಾಗಿ ಒಂದೇ ಎಂಬಂತೆ ಕಂಡುಬಂದರೂ ಹಬ್ಬದ ಸಂದರ್ಭದಲ್ಲೆಲ್ಲಾ ಜಾತ್ರೆ ಇರುವುದಿಲ್ಲ. ಆದರೆ ಜಾತ್ರೆಯ ಸಂದರ್ಭದಲ್ಲಿ ಹಬ್ಬ ಇದ್ದೇ ಇರುತ್ತದೆ. ಮಂಡ್ಯ ಜಿಲ್ಲೆಯ ಬಹುಪಾಲು ಜಾತ್ರೆಗಳು ಸುಗ್ಗಿಯ ಕಾಲದಲ್ಲಿ ನಡೆಯುತ್ತವೆ. ಈ ಸಂದರ್ಭದಲ್ಲಿ ಭಕ್ತಿ ಸ್ಥಾಯಿಯಾಗಿದ್ದು ದುಡ್ಡಿನ ಓಡಾಟ ಬಹಳ ಮುಖ್ಯವಾಗಿರುತ್ತದೆ. ಜನಗಳ ಜಾತ್ರೆ ಜೊತೆಗೆ ದನಗಳ ಪರಿಷೆ ನಡೆಯುತ್ತದೆ. ತೇರು ಅಥವಾ ರಥೋತ್ಸವ ಜಾತ್ರೆಗಳ ವಿಶೇಷ. ಇಂಥ ಜಾತ್ರೆಗಳು ಅಯಾಯ ದೇವರ ಹೆಸರಿನಿಂದಲೇ ಪ್ರಸಿದ್ಧವಾಗಿವೆ. ಚುಂಚನಗಿರಿ ಜಾತ್ರೆ, ಭೂಮಿ ಸಿದ್ದಪ್ಪನ ಜಾತ್ರೆ, ಕೋಟೆಬೆಟ್ಟದ ಜಾತ್ರೆ, ಕಲ್ಯಾಣ ವೆಂಕಟರಮಣಸ್ವಾಮಿ ಜಾತ್ರೆ, ಮಾದಪ್ಪನ ಜಾತ್ರೆ, ಮದ್ದೂರಮ್ಮನ ಜಾತ್ರೆ, ಅಲಕೆರೆ ವೀರಭದ್ರನ ಜಾತ್ರೆ, ಗಿಡದ ಜಾತ್ರೆ, ಮೈಲಾರಲಿಂಗನ ಜಾತ್ರೆ ಇನ್ನೂ ಮುಂತಾದ ಜಾತ್ರೆಗಳಲ್ಲಿ ಅಪಾರ ಜನಸಂದಣಿ, ಗದ್ದಲ, ಮನರಂಜನೆ, ವ್ಯಾಪಾರ-ವ್ಯವಹಾರ, ಉತ್ಸವ, ಹರಕೆ, ಮುಡಿ, ಬಾಯಿಬೀಗ ಕಾರ್ಯಕ್ರಮಗಳು ನಡೆಯುತ್ತವೆ.

ಮಂಡ್ಯ ಜಿಲ್ಲೆಯ ಹಳ್ಳಿಗಳು ತಮ್ಮ ಸಾಮಾಜಿಕವಾದ ಅಸ್ತಿತ್ವದಲ್ಲಿ ಗಮನಾರ್ಹವಾದ ಬದಲಾವಣೆಗಳನ್ನು ಕಂಡುಕೊಂಡಿವೆ. ಒಂದು ಕಾಲಕ್ಕೆ ಅವಿಭಕ್ತ

ಕುಟುಂಬಗಳ ತವರು ಎನಿಸಿದ್ದ ಮಂಡ್ಯ ಜಿಲ್ಲೆ ಇಂದು ಈ ಹೆಗ್ಗಳಿಕೆಗೆ ಹೊರತಾಗಿರುವುದು ವಿಷಾದನೀಯ. ಮುಪ್ಪಿಡಿದ ಹಿರಿಯರಿಂದ ಹಿಡಿದು ತೊಟ್ಟಿಲಲ್ಲಿ ಮಲಗುವ ಮಗುವಿನ ತನಕ ನೂರಾರು ಜನ ಒಂದೇ ಸೂರಿನಡಿಯಲ್ಲಿ ಬದುಕುತ್ತಾ, ಒಂದೇ ಬಾಗಿಲಲ್ಲಿ ಓಡಾಡುತ್ತಾ, ಒಂದೇ ಅಡುಗೆ ಉಣ್ಣುತ್ತಾ, ಒಬ್ಬ ವ್ಯಕ್ತಿಯ ಆಡಳಿತದ ಅಧೀನದಲ್ಲಿ ಬಾಳುತ್ತಿದ್ದಂತಹ ಅರವತ್ತರ ದಶಕದ ಕೂಡು ಕುಟುಂಬಗಳ ಸುಂದರ ದೃಶ್ಯ ಇಂದು ಕಾಣಲಾಗುತ್ತಿಲ್ಲ. ಜಿಲ್ಲೆಯಲ್ಲಿ ವರದಕ್ಷಿಣೆ ಎಂಬುದು ಬಹು ದೊಡ್ಡ ಪಿಡುಗಾಗಿ ಪರಿಣಮಿಸಿದೆ. ಇದರ ಅಬ್ಬರದ ಮುಂದೆ ಅನೇಕ ಕುಟುಂಬಗಳು ತತ್ತರಿಸಿ ಹೋಗಿವೆ. ಇಲ್ಲಿನ ಬಹುತೇಕ ಕುಟುಂಬಗಳು ಪುರುಷ ಪ್ರಧಾನ ಕುಟುಂಬಗಳಾಗಿವೆ.

ಮಂಡ್ಯ ಜಿಲ್ಲೆಯ ಭಾಷೆಗೆ ತನದೇ ಆದ ಒಂದು ವೈಶಿಷ್ಟ್ಯವಿದೆ. ಇದು ಮಂಡ್ಯದ ಕನ್ನಡ ಎಂದು ಗುರುತಿಸುವಷ್ಟರಮಟ್ಟಿಗೆ ಪ್ರಾದೇಶಿಕ ಪ್ರಭೇದವಾಗಿ ಇಲ್ಲಿನ ಭಾಷೆ ಗೋಚರಿಸುತ್ತದೆ. ಜಿಲ್ಲೆಯ ಶೇ.೭೦ರಷ್ಟು ಜನ ಗ್ರಾಮೀಣ ಪ್ರದೇಶಗಳಲ್ಲಿ ವಾಸ ಮಾಡುತ್ತಿದ್ದಾರೆ. ನೆಲದ ಸೊಗಡು ಈ ಜಿಲ್ಲೆಯ ಆಡುಮಾತಿನಲ್ಲಿ ತುಂಬಿದೆ. ಇಲ್ಲಿನ ಜನರ ಭಾಷಾ ಪ್ರೇಮ ಅನನ್ಯವಾದುದು. ಶೇ.೯೩ರಷ್ಟು ಕನ್ನಡ ಮಾತನಾಡುವ ಜನ ಇಲ್ಲಿದ್ದಾರೆ. ಅನ್ಯಭಾಷೆ, ಅನ್ಯ ಸಂಸ್ಕೃತಿಯ ಯಾವುದೇ ರೀತಿಯ ಪ್ರಭಾವವಿಲ್ಲದೆ ಅಚ್ಚಗನ್ನಡದ ಸ್ವಚ್ಛ ನೆಲೆಯಾಗಿ ಉಳಿದು ಬಂದಿದೆ. ಇಲ್ಲಿ ಕನ್ನಡದ್ದೇ ಸರ್ವಾಧಿಕಾರ. ಅನ್ಯಭಾಷೆಗಳು ಕನ್ನಡದ ಮುಂದೆ ತಲೆಬಾಗಿ ನಿಂತಿವೆ. ಇಲ್ಲಿನ ಜನರ ನಡೆನುಡಿ ಎಲ್ಲವೂ ಕನ್ನಡಮಯ. ಹೀಗಾಗಿ ನೆಲದ ಭಾಷೆ ಬಹುತೇಕ ಜೀವಂತವಾಗಿದೆ. ಮಳವಳ್ಳಿ ತಾಲ್ಲೂಕಿನ ಕನ್ನಡವನ್ನು ಹೊರತು ಪಡಿಸಿದರೆ ಮಂಡ್ಯ ಜಿಲ್ಲೆಯ ಉಳಿದೆಲ್ಲ ತಾಲ್ಲೂಕುಗಳ ಕನ್ನಡದಲ್ಲಿ ಅಂತಹ ಭಿನ್ನತೆ ಎದ್ದು ಕಾಣುವುದಿಲ್ಲ. ಮಳವಳ್ಳಿ ಕನ್ನಡದಲ್ಲಿ ಸ್ವಲ್ಪ ವ್ಯತ್ಯಾಸವಿದೆ. ಇನ್ನೂ ಸೂಕ್ಷ್ಮವಾಗಿ ಅವಲೋಕಿಸಿದರೆ ಕೃಷ್ಣರಾಜಪೇಟೆ, ನಾಗಮಂಗಲ, ಶ್ರೀರಂಗಪಟ್ಟಣ, ಪಾಂಡವಪುರ ಹಾಗೂ ಮಂಡ್ಯ-ಮದ್ದೂರು ತಾಲ್ಲೂಕುಗಳ ಕನ್ನಡ ಬಳಕೆಯಲ್ಲಿ ನಿಕಟತೆಯನ್ನು ಗುರುತಿಸಬಹುದು. ಒಟ್ಟಾರೆ, ಮಂಡ್ಯ ಜಿಲ್ಲೆಯ ಕನ್ನಡದಲ್ಲಿ ಶಿಷ್ಟ ಭಾಷೆಗಿಂತ ಭಿನ್ನವಾಗಿ ಗೋಚರಿಸುವ ಉಚ್ಚಾರಣೆ, ಪದಪ್ರಯೋಗ, ವಾಕ್ಯ ರಚನೆಯನ್ನು ಮೇಲ್ನೋಟಕ್ಕೆ ಪತ್ತೆ ಹಚ್ಚಬಹುದು. ಯಾವುದೇ ಆಡುನುಡಿ ಅಯಾ ಜನರ ಸಮಾಜ, ಸಂಸ್ಕೃತಿ, ಆಚಾರ-ವಿಚಾರಗಳನ್ನು ಅನಾಮತ್ತಾಗಿ ಅಭಿವ್ಯಕ್ತಿಸುತ್ತದೆ. ಮಂಡ್ಯದ ಭಾಷೆಯಲ್ಲಿ

ಕೂಡ ಇಂಥ ಸಾಂಸ್ಕೃತಿಕ ಬೇರು ಸುಭದ್ರವಾಗಿದೆ. ನೋಡುವಾಗ, ಮಾತಾಡುವಾಗ ಒರಟುತನ ಕಂಡುಬಂದರೂ ಈ ಜನರ ಸಾಂಸ್ಕೃತಿಕ ಸಂಪನ್ನತೆ, ಮಾನವೀಯ ಅನುಕಂಪ, ಹೃದಯ ಶ್ರೀಮಂತಿಕೆ ಆಡುಮಾತಿನಲ್ಲಿ ಮಡುಗಟ್ಟಿರುವುದನ್ನು ಕಾಣಬಹುದು.

ಜೀವಂತ ಭಾಷೆ, ಕಾಲ, ದೇಶ, ವ್ಯಕ್ತಿಗಳನ್ನಾಧರಿಸಿ ಬದಲಾಗುತ್ತ ತನ್ಮೂಲಕ ಬೆಳೆಯುತ್ತ ಹೋಗುತ್ತದೆ ಎಂಬುದು ಐತಿಹಾಸಿಕ ವಿವರಣಾತ್ಮಕ ಭಾಷಾಧ್ಯಯನಗಳು ಸಾರುತ ಬಂದಿರುವ ಸಂಗತಿ. ಐತಿಹಾಸಿಕ ವಿಜ್ಞಾನಿಗಳು ವ್ಯಕ್ತಿಯಿಂದ ವ್ಯಕ್ತಿಗೆ, ಸ್ಥಳದಿಂದ ಸ್ಥಳಕ್ಕೆ ಕಾಲಾನುಗುಣವಾಗಿ ಕಂಡುಬರುವ ಭಾಷಿಕ ವ್ಯತ್ಯಯಗಳಿಗೆ ಇಂಥ ಬದಲಾವಣೆಗಳನ್ನು ಒಬ್ಬ ವ್ಯಕ್ತಿಯ ಒಂದು ಸ್ಥಳದ ಇಲ್ಲವೇ ಒಂದು ಕಾಲಕ್ಕೆ ಸೀಮಿತಗೊಳಿಸಿ ಭಾಷೆಯ ಯಥಾವತ್ತಾದ ಅಧ್ಯಯನಕ್ಕೆ ಮುಂದಾದರು. ಆದರೆ ಈಗ ಸಾಮಾಜಿಕ ಭಾಷಾ ವಿಜ್ಞಾನಿಗಳು ಭಾಷೆಯ ಸಾಮಾಜಿಕ ಹಾಗೂ ಸಾಂಸ್ಕೃತಿಕ ನೆಲೆಬೆಲೆಗೆ ಹೆಚ್ಚು ಆಧ್ಯತೆಯನ್ನು ಕೊಡುತ್ತಿದ್ದಾರೆ.

ಸಾಮಾಜಿಕ ಪ್ರಜ್ಞೆ ಮತ್ತು ಸಾಮಾಜಿಕ ನಿಲುವು ಎಂಬ ಪದಗಳ ನಡುವಿನ ವ್ಯತ್ಯಾಸವನ್ನು ಗಮನದಲ್ಲಿಟ್ಟುಕೊಳ್ಳುವುದು ಮುಖ್ಯ. ಒಬ್ಬ ಕವಿಯು ತನ್ನ ಬದುಕಿನ ಸನ್ನಿವೇಶದಲ್ಲಿ ಕೆಲಸ ಮಾಡುತ್ತಿರುವ ಹಲವಾರು ಶಕ್ತಿಗಳನ್ನು ಕುರಿತಂತೆ ಮೊದಲೇ ಹೊಂದಿರುವ ಅಥವಾ ಕೃತಿರಚನೆಯ ಮೂಲಕವೇ ಕಂಡುಕೊಳ್ಳುವ ವೈಚಾರಿಕವಾದ ತಿಳುವಳಿಕೆಯನ್ನು ಸಾಮಾಜಿಕ ಪ್ರಜ್ಞೆಯೆಂದು ಕರೆಯಬಹುದು.

ಸಾಮಾಜಿಕ ನಿಲುವು ಎನ್ನವುದು ಸಾಮಾಜಿಕ ಪ್ರಜ್ಞೆಯ ಮುಂದುವರಿದ ಹಂತ. ಕಥೆ ಯಾವುದೇ ಇರಲಿ, ಅದನ್ನು ರೂಪಿಸುವ ಮನಸ್ಸು ಸಮಕಾಲೀನವಾಗಿರಲೇಬೇಕು. ಸಾಮಾಜಿಕ ಪ್ರಜ್ಞೆಯ ಸ್ವರೂಪವು ಅನಿವಾರ್ಯವಾಗಿಯೇ ಬರೆಯುತ್ತಿರುವ ಕವಿಯ ವರ್ಗ, ವರ್ಣ ಹಾಗೂ ಜೀವನ ವಿಧಾನಗಳಿಂದ ಸೀಮಿತವಾಗಿರುತ್ತದೆ. ಅದರೊಂದಿಗೆ ತನ್ನ ಸಮುದಾಯದ ಹಾಗೂ ಕಲಾ ಮಾಧ್ಯಮದ ಐತಿಹಾಸಿಕವಾದ ಬೆಳವಣಿಗೆಯ ಯಾವ ಖಚಿತವಾದ ಹಂತದಲ್ಲಿ ಅವನು ಬರೆಯುತ್ತಿರುವನೆಂಬ ಅಂಶವು ಸ್ವಲ್ಪ ಮಟ್ಟಿಗಾದರು ಅವನ ಬರವಣಿಗೆಯ ಸ್ವರೂಪವನ್ನು ತೀರ್ಮಾನಿಸುತ್ತದೆ. ಅಲ್ಲೊಮ್ಮೆ-ಇಲ್ಲೊಮ್ಮೆ ಕವಿಯ ವೈಯಕ್ತಿಕ ಪ್ರತಿಭೆಯು ಮೇಲೆ ಹೇಳಿದ ಸೀಮಿತಗಳನ್ನು ದಾಟಬಹುದು. ಆದರೆ ಆ ದಾಟುವಿಕೆಯ ಸ್ವರೂಪ ಕೂಡ ಮತ್ತೆ ಆ ವರ್ಗ-ವರ್ಣಗಳನ್ನೇ ಅವಲಂಬಿಸಿರುತ್ತದೆ. ಅಲ್ಲದೆ ಈವರೆಗೆ ಹೇಳಿದ ಎಲ್ಲ ಮಾತುಗಳೂ, ಕಥಾ ರಚನೆಯಲ್ಲಿ ತೊಡಗುವ

ಕವಿಯ ಒಳಮನ ಹಾಗೂ ವೈಚಾರಿಕ ಕ್ರಿಯೆಯಲ್ಲಿ ತೊಡಗುವ ಹೊರಮನಗಳೆರಡರ ದೃಷ್ಟಿಯಿಂದಲೂ ಪರಿಶೀಲಿಸಬೇಕಾದುವು.

ಮಂಡ್ಯ ಜಿಲ್ಲೆಗೆ ಸಂಬಂಧಿಸಿದಂತೆ ಸಾಮಾಜಿಕ ಪ್ರಜ್ಞೆಯ ವಿಚಾರವನ್ನು ಅವಲೋಕಿಸುವಾಗ ಅದು ತನ್ನದೇ ವೈಶಿಷ್ಟ್ಯತೆ ಪಡೆದಿರುವುದನ್ನು ಕಾಣಬಹದು. ಏಕೆಂದರೆ ಮಂಡ್ಯ ಜಿಲ್ಲೆಯ ಸ್ವಾತಂತ್ರ್ಯ ಪೂರ್ವ ಹಾಗೂ ಸ್ವಾತಂತ್ರ್ಯ ನಂತರದ ಗ್ರಾಮೀಣ ಬದುಕಿನಲ್ಲಿ ಹಲವಾರು ಮಾರ್ಪಾಡುಗಳು ಆಗಿವೆ. ಈ ಎರಡು ಕಾಲಾವಧಿಯಲ್ಲಿ ದೇಶದ ಮಟ್ಟದಲ್ಲಿ ಆದಂತಹ ಹಲವು ರಾಜಕೀಯ ಬೆಳವಣಿಗೆಗಳು ನಾಡಿನಾದ್ಯಂತ ಸಾಮಾಜಿಕ ವ್ಯವಸ್ಥೆಯ ಮೇಲೂ ಪರಿಣಾಮ ಬೀರಿತು. ಅದೇ ರೀತಿ ಮಂಡ್ಯ ಜಿಲ್ಲೆಯ ಸಾಮಾಜಿಕ ಜೀವನವೂ ಪರಿವರ್ತನೆಯ ಹಾದಿ ಹಿಡಿದು ತನ್ನದೇ ಆದ ಸಂರಚನೆಯ ಆಯಾಮವನ್ನು ಪ್ರಗತಿದಾಯಕವಾದ ದಿಕ್ಕಿಗೆ ಬದಲಾಯಿಸಿಕೊಂಡಿತು. ಹೀಗೆ ಪರಿವರ್ತನೆಗೆ ಒಳಗಾದ ಸಾಮಾಜಿಕ ಜೀವನವು ಹಲವಾರು ಕಥೆಗಾರರ ಬರವಣಿಗೆಗೆ ವಸ್ತುವನ್ನು ಒದಗಿಸಿಕೊಟ್ಟಿತ್ತು.

ಮಂಡ್ಯ ಜಿಲ್ಲೆಯ ಕಥೆಗಾರರು ತಮ್ಮ ಕಥೆಗಳಿಗೆ ಬಹುತೇಕ ಆರಿಸಿಕೊಂಡಿದ್ದು ಹಳ್ಳಿಗಾಡಿನ ಬದುಕನ್ನು. ಅಂಥ ವಾತಾವರಣ ಆ ಕಾಲಕ್ಕಿತ್ತು. ಅದು ೧೯೬೦-೭೦ರವೆಗೂ ಮುಂದುವರಿದಿತ್ತು. ಇವತ್ತು ಆ ಪ್ರದೇಶಗಳಿಗೆ ಹೋದರೆ ಆ ಕಥಾ ವಸ್ತುವಿನ ಸೊಗಡು ಎಲ್ಲೋ ಕಳೆದುಹೋದಂತೆ ತೋರುತ್ತದೆ. ಅಷ್ಟೊಂದು ಬದಲಾವಣೆ ಹಳ್ಳಿಗಾಡಿನಲ್ಲಿ ಆಗಿದೆ. ಕಥಾ ಸಾಹಿತ್ಯ ಪ್ರಕಾರದ ಮೂಲಕ ಚಿಗುರೊಡೆಯುತ್ತಿದ್ದ ನವ್ಯ ಕಾಲದಲ್ಲಿ ಕಥೆಗಳು ರಚನೆಯಾದರೂ ಹಳ್ಳಿಗಾಡಿನ ದಟ್ಟ ಅನುಭವದ ಮೂಸೆಯಿಂದ ಎದ್ದು ಬಂದಿರುವ ಮಂಡ್ಯ ಜಿಲ್ಲೆಯ ಕಥೆಗಾರರು ನವ್ಯ ಮಾರ್ಗವನ್ನು ಅನುಸರಿಸದೆ ನವೋದಯ ಪ್ರಗತಿಶೀಲ ಮಾರ್ಗದ ನೆಲೆಯಲ್ಲಿ ತಾವು ಕಂಡುಂಡ ಗ್ರಾಮೀಣ ಬದುಕನ್ನು ಚಿತ್ರಿಸುತ್ತಾ ಬಂದಿದ್ದಾರೆ. ಮೇಲಾಗಿ 'ಮಂಡ್ಯ ಕನ್ನಡ' ಭಾಷೆಯಲ್ಲಿಯೆ ತಮ್ಮ ಸಾಹಿತ್ಯ ರಚಿಸಿದ್ದು ವಿಶೇಷ.

ಮಂಡ್ಯ ಜಿಲ್ಲೆಯ ಕಥೆಗಾರರರಲ್ಲಿ ಬಹುಪಾಲು ಹಳ್ಳಿಗಾಡಿನಲ್ಲಿ ಜನಿಸಿ ಅಲ್ಲಿಯ ಬದುಕನ್ನು ಅನುಭವಿಸಿ ಕಂಡು ಕೇಳಿದವರೇ ಆಗಿದ್ದಾರೆ. ಹೀಗಾಗಿ ಅವರ ಕಥೆಗಳ ವಸ್ತುಗಳಲ್ಲಿ ಹೆಚ್ಚಿನ ಪಾಲು ಗ್ರಾಮೀಣ ಚಿತ್ರಣಗಳೇ ಆಗಿವೆ. ಕ್ರಿ.ಶ. ೧೯೦೦ ರಿಂದ ೧೯೭೦ರವರೆಗೆ ಹಳ್ಳಿಗಾಡಿನ ಬದುಕಿನಲ್ಲಿ ಅಂಥ ತೀವ್ರತರವಾದ ಬದಲಾವಣೆ ಕಾಣದೆ ಗ್ರಾಮೀಣ ಸೊಗಡು ಜೀವಂತವಾಗಿತ್ತು. ಕಥೆಗಳನ್ನು ಅವಲೋಕಿಸಿದಾಗ

ಕಳೆದ ಶತಮಾನದ ನಡು ಅಥವಾ ಅದರ ಹಿಂದಿನ ಕಾಲಕ್ಕೆ ಕರೆದೊಯ್ಯುತ್ತವೆ. ಭಾಷಾ ದೃಷ್ಟಿಯಲ್ಲಿ ಒಟ್ಟಾರೆ 'ಮಂಡ್ಯ ಕನ್ನಡ'ವನ್ನು ದುಡಿಸಿಕೊಂಡಿರುವುದು ಒಂದು ದಾಖಲೆಯಂತಿದೆ. ಇದೊಂದು ರೀತಿಯಲ್ಲಿ ಮಂಡ್ಯದ 'ರಾಗಿಯ ಬನಿ' ಎಂದೇ ಹೇಳಬಹುದಾಗಿದೆ. ಇನ್ನು ಕಥಾವಸ್ತುವಿನೊಂದಿಗೆ ವರ್ಗ ಸಂಘರ್ಷ, ಜಾತಿಸಂಘಟನೆ, ಕೌಟುಂಬಿಕ ಸಂಘರ್ಷ ಇತ್ಯಾದಿ ಘಟನಾವಳಿಗಳೊಂದಿಗೆ ನೋವು-ನಲಿವುಗಳನ್ನು ಕಾಣಬಹುದು. ಪ್ರಾದೇಶಿಕ ವೈವಿಧ್ಯತೆಯಿಂದ ಕೂಡಿರುವ ಇಲ್ಲಿನ ಸಂಕೀರ್ಣ ಬದುಕಿನಲ್ಲಿ ಮಣ್ಣಿನ ವಾಸನೆ, ಹೆಣ್ಣಿನ ವಾಸನೆ, ಹೆಂಡದ ವಾಸನೆ, ಬಾಡಿನ ವಾಸನೆ, ಜಗಳ-ಬೋರಂಟಿ ಎಲ್ಲವೂ ಇದ್ದು ಕಥೆಗಳಲ್ಲಿ ವಿಶೇಷವಾದ ಗಮ್ಮತ್ತು ತುಂಬಿದೆ. ಹಳತು-ಹೊಸತರ ಸಂಘರ್ಷದ ಸಂಕ್ರಮಣಾವಸ್ಥೆಯ ಮಜಲಿನಲ್ಲಿ ಇಲ್ಲಿಯ ಜನಜೀವನದ ಏರಿಳಿತಗಳು ಸಹಜವಾಗಿ ಚಿತ್ರಿತವಾಗಿವೆ. ಒಂದೆಡೆ ಸ್ವಾರ್ಥಮೂಲದ ಕ್ರಿಯೆಗಳು, ಮತ್ತೊಂದೆಡೆ ನಿಸ್ವಾರ್ಥ ದುಡಿಮೆ-ಹೀಗೆ ಮಾನವ ಪ್ರವೃತ್ತಿಯ ನಾನಾ ಸ್ವಭಾವಗಳಿಂದ ಆಯಾ ಸಾಮಾಜಿಕ ಪರಿಸರದಲ್ಲುಂಟಾಗುವ ಸಾಂಗತ್ಯ ಮತ್ತು ಅಸಾಂಗತ್ಯದ ಪರಿಣಾಮವನ್ನು ಮಂಡ್ಯ ಜಿಲ್ಲೆಯ ಕಥೆಗಾರರು ಸಮರ್ಥವಾಗಿ ಚಿತ್ರಿಸಿದ್ದಾರೆ. ಹಲವು ಕಥೆಗಳಲ್ಲಿ ಜಮೀನ್ದಾರಿ ಪದ್ಧತಿ ವಿರುದ್ಧ, ಪುರೋಹಿತಶಾಹಿಯ ವಿರುದ್ಧ, ಮೌಢ್ಯತೆಯ ವಿರುದ್ಧ, ಅಜ್ಞಾನದ ವಿರುದ್ಧ ಸಿಡಿದೆದ್ದಿವೆ. ಜತೆಜತೆಗೆ ಹಾಸ್ಯ ವಿಡಂಬನೆಗಳು, ಬೈಗುಳಗಳು ಮಂಡ್ಯ ಪ್ರಾದೇಶಿಕ ಭಾಷಾಶೈಲಿ ಬೇರೆ ಭಾಗದ ಪ್ರಾದೇಶಿಕ ಓದುಗರಿಗೆ ಅಥವಾ ಜನರಿಗೆ ಬೆರಗು ಉಂಟು ಮಾಡುವಂತಿವೆ. ಬಂಡಾಯ ಸಾಹಿತ್ಯವೂ ಪ್ರತಿಬಿಂಬಿತವಾಗಿದೆ.

ದಲಿತ ಪ್ರಜ್ಞೆ, ದಲಿತ ಸಾಹಿತ್ಯ ಎಂಬ ಪ್ರತ್ಯೇಕತೆ, ಪಂಥಗಳ ಅರಿವಿಲ್ಲದೆ ದಲಿತ ಚಳುವಳಿಗೂ ಮೊದಲು ದಲಿತರ ನೋವು-ನಲಿವು, ಅನುಭವಗಳನ್ನು ಸ್ವಾತಂತ್ರ್ಯ ಪೂರ್ವದಲ್ಲಿಯೇ ತಮ್ಮ ಕೃತಿಗಳಲ್ಲಿ ತಂದವರು ಮದ್ದೂರು ತಾಲ್ಲೂಕಿನ ಹೆಮ್ಮನಹಳ್ಳಿಯ ಜಿ. ವೆಂಕಟಯ್ಯನವರು. ಇವರು ಹಲವು ಕೃತಿಗಳನ್ನು ರಚಿಸಿದ್ದು 'ಕಂಚಿಬೇಲದ ಹಣ್ಣು', 'ನೊಂದಜೀವ' ಒಂದು ವರ್ಗದ ಜನ ಮತ್ತೊಂದು ವರ್ಗದ ಜನರನ್ನು ಶೋಷಿಸುವ ಕಥಾವಸ್ತುವಾಗಿದೆ. ಆಗಿನ ಕಾಲಕ್ಕೆ ದಲಿತ ಪ್ರಜ್ಞೆಯನ್ನು ಮೂಡಿಸಿದ ಮೊದಲ ಕಥೆಗಾರರು ಜಿ. ವೆಂಕಟಯ್ಯನವರು.

ಮನುಷ್ಯ ಮತ್ತು ಸಮಾಜವನ್ನು ಕೇಂದ್ರವನ್ನಾಗಿಟ್ಟುಕೊಂಡು, ಬರೆಯುವವರ ಜಾತಿಯನ್ನು ಆಧರಿಸದೆ, ದಲಿತರು ಮತ್ತು ದಲಿತೇತರರು, ದಲಿತ ಪರ ಕಾಳಜಿಯಿಂದ ಅಥವಾ ದಲಿತ ಪರ ಪ್ರಜ್ಞೆಯಿಂದ ಬರೆದಿರುವುದನ್ನು ದಲಿತ

ಬಂಡಾಯ ಸಾಹಿತ್ಯ ಎಂದು ಪರಿಗಣಿಸಲಾಗಿದೆ. ಇಂಥ ನಿಟ್ಟಿನಲ್ಲಿ ದಲಿತೇತರರಾಗಿಯೂ ದಲಿತ-ಬಂಡಾಯಗಳ ಬರಹಗಾರರೆಂದು ಶಿವಳ್ಳಿ ಕೆಂಪೇಗೌಡ ಹಾಗೂ ಬೆಸಗರಹಳ್ಳಿ ರಾಮಣ್ಣನವರನ್ನು ಗುರುತಿಸಬಹುದಾಗಿದೆ. ಬೆಸಗರಹಳ್ಳಿ ರಾಮಣ್ಣನವರು ಮಂಡ್ಯ, ಮದ್ದೂರು ಭಾಗದ ಪರಿಸರ ಭಾಷಾ ಶೈಲಿಯನ್ನು ಚೆನ್ನಾಗಿ ದುಡಿಸಿಕೊಂಡಿದ್ದಾರೆ.

ಸ್ವಾತಂತ್ರ ಪೂರ್ವದ ಗ್ರಾಮೀಣ ಬದುಕನ್ನು ನೋಡಿದ ಹಿರಿಯ ತಲೆಮಾರಿನ ಎಚ್.ಎಲ್. ನಾಗೇಗೌಡರು ತಮ್ಮ ಸಣ್ಣ ಕಥೆಗಳೊಂದಿಗೆ, 'ನನ್ನೂರು', 'ದೊಡ್ಡಮನೆ', 'ಸೊನ್ನೆಯಿಂದ ಸೊನ್ನೆಗೆ' ಕಾದಂಬರಿಗಳನ್ನು ರಚಿಸಿದರು. ಕಾದಂಬರಿಯಲ್ಲಿ ಬರುವಂತೆಯೇ ಇವರ **'ಕಂಡು ಕೇಳಿದ'** ಕಥಾಸಂಕಲನದಲ್ಲಿ ನಾಗಮಂಗಲ ಬಯಲುಸೀಮೆಯ ಭೌಗೋಳಿಕ ಪರಿಸರ, ಪ್ರಾದೇಶಿಕ ಭಾಷಾ ಶೈಲಿ, ಜನಜೀವನದ ರೀತಿ-ರಿವಾಜುಗಳು ಹಾಸುಹೊಕ್ಕಾಗಿವೆ. ಆ ಪರಿಸರದ ಅಂದಿನ ಸಾಮಾಜಿಕ ಪ್ರಜ್ಞೆಯ ವಿವಿಧ ಮುಖಗಳನ್ನು ತಮ್ಮ ಸಾಹಿತ್ಯದಲ್ಲಿ ನಿರೂಪಿಸಿದ್ದಾರೆ. ಇವರೊಂದಿಗೆ ರಮೇಶ್ ಹುಲ್ಲುಕೆರೆ, ಕ್ಯಾತನಹಳ್ಳಿ ರಾಮಣ್ಣ, ಮಾರ್ಲಾಮಿ ದೊಡ್ಡಿ ರಾಮಕೃಷ್ಣ ಅವರುಗಳ ಕಥೆಗಳಲ್ಲಿ ಪ್ರಾದೇಶಿಕ ಭಾಷೆ, ಜನಜೀವನದ ಸಾಮಾಜಿಕ ಚಿಂತನೆಗಳು ಗಮನಾರ್ಹವಾಗಿವೆ. ಜಾನಪದ ತಜ್ಞರಾದರೂ ಕಥಾ ರಚನೆಯಲ್ಲಿ ತಮ್ಮ ಸ್ವಂತಿಕೆಯನ್ನು ಕಾಪಾಡಿಕೊಂಡಿರುವ ಕಥೆಗಾರರು ಜೀ. ಶಂ. ಪರಮಶಿವಯ್ಯ ಮತ್ತು ಡಿ. ಲಿಂಗಯ್ಯ ಅವರುಗಳು.

ಒಟ್ಟಾರೆ ಯಾವುದೇ ಸಾಹಿತ್ಯ ಕೃತಿಯ ಅಸ್ತಿತ್ವದ ಪರಿಧಿಯೊಳಗೇ ಮಾನವನ ಮನಸ್ಸು ಅವನ ಜೀವನ ಕ್ರಮ, ನೋವು, ನಲಿವು ವ್ಯವಹರಿಸುತ್ತವೆ. ಆದರೆ ಒಂದು ನಿಜವಾದ, ಸತ್ವಪೂರ್ಣವಾದ ಸಾಹಿತ್ಯ ಕೃತಿಯು ತನ್ನ ಅಸ್ತಿತ್ವದೊಳಗೆ ವಸ್ತು ಬೇರೆ, ಭಾಷೆ ಬೇರೆ, ಸ್ವರೂಪ ಬೇರೆ, ಪಾತ್ರ ಬೇರೆ ಎಂದು ಬಿಟ್ಟುಕೊಡುವುದಿಲ್ಲ. ಆ ವಸ್ತುವಿನ ಸ್ವರೂಪ ಹಾಗೂ ಅದರ ಬಲಿಷ್ಠತೆಗನುಗುಣವಾಗಿಯೇ ಅದರ ಭಾಷೆ, ಶೈಲಿ, ತಂತ್ರ ರೂಪಕ ಎಲ್ಲವೂ ರೂಪುಗೊಳ್ಳುತ್ತ ಹೋಗುತ್ತದೆ.

ಹೀಗೆ ಸಮಾಜದ ಬಗೆಗಿನ ಅರಿವು ಮೂಡಿಸುವಂಥ ಪ್ರೇರಕ ಶಕ್ತಿಯೇ ಸಾಮಾಜಿಕ ಪ್ರಜ್ಞೆ ಎಂಬುದಾಗಿದೆ. ಮನುಷ್ಯ ಹುಟ್ಟುತ್ತಾ ವ್ಯಕ್ತಿ ಬೆಳೆಯುತ್ತ ಸದಸ್ಯ. ಬೆಳೆಯುತ್ತಿದ್ದಂತೆ ಸಮಾಜದಲ್ಲಿ ನೀತಿಸಂಹಿತೆಗಳು ಅವನನ್ನು ಹಿಂಬಾಲಿಸುತ್ತವೆ. 'ಮಾನವ ಸಮಾಜಜೀವಿ' ಎಂಬುದು ಸರ್ವವಿಧಿತ. "ಸರ್ವೇಜನೋ ಸುಖಿನೋ

ಭವಂತು", "ಬಹುಜನಹಿತಾಯ, ಬಹುಜನಸುಖಾಯ" ಎಂದೆಲ್ಲಾ ನಮ್ಮ ಪ್ರಾಚೀನ ಹಿತೋಕ್ತಿಯಲ್ಲಿ ಸಾಮಾಜಿಕ ಪ್ರಜ್ಞೆ ತುಂಬಿದೆ. ಬದಲಾವಣೆಯನ್ನು ಬಯಸುವುದು ಮನೋಧರ್ಮವೂ ಹೌದು, ಮಾನವ ಧರ್ಮವೂ ಹೌದು. ಇಂಥ ಬದಲಾವಣೆಯಲ್ಲಿಯೂ ಮಾನವನಿಗೆ ಇರಬೇಕಾದ ಮಾನವೀಯತೆ ಅಥವಾ ಮನುಷ್ಯನಿಗೆ ಇರಬೇಕಾದ ಸಹಜಧರ್ಮ, ಮನುಷ್ಯತ್ವ ಇರಲೇಬೇಕು. "ಮಾನವ ಜನ್ಮ ದೊಡ್ಡದು" ಎಂದ ಮೇಲೆ ಅಂಥ ಜನ್ಮವನ್ನು ನಡೆಸಲು ಬೇಕಾದ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಪರಿಕರಗಳೂ ಶುದ್ಧವಾಗಿರಬೇಕು. ಇದುವೇ ಸಾಮಾಜಿಕ ಪ್ರಜ್ಞೆಯ ದೊಡ್ಡಗುಣ ಎಂದು ನಮ್ಮ ಪ್ರಾಚೀನ ಋಷಿವರ್ಯರಿಂದ ಹಿಡಿದು ನಮ್ಮ ವಚನಕಾರರು, ಹರಿದಾಸರಾದಿಯಾಗಿ ಎಲ್ಲರೂ ಸ್ಪಷ್ಟಪಡಿಸಿದ್ದಾರೆ. ಜಗತ್ತಿನ ಅತಿ ಪ್ರಾಚೀನ ಕಾವ್ಯಗಳಾದ ವಾಲ್ಮೀಕಿ ರಚಿತ ರಾಮಾಯಣ, ವ್ಯಾಸ ರಚಿತ ಮಹಾಭಾರತಗಳಲ್ಲಿ ಕಾಣಬರುವ ಜನಜೀವನದ ಸಾಮಾಜಿಕ ಪ್ರಜ್ಞೆ ಇಂದಿಗೂ ನಮಗೆ ದಾರಿದೀಪವಾಗಿದೆ.

## ಜಾತಿ ಸಂಘರ್ಷದ ನೆಲೆಗಳು

ಭಾರತದಲ್ಲಿ ಜಾತಿ ಪದ್ಧತಿ ಎಲ್ಲ ಪ್ರಾಂತ್ಯಗಳಲ್ಲಿಯೂ ಒಂದೇ ರೀತಿಯಲ್ಲಿಲ್ಲ. ಒಂದೊಂದು ಪ್ರಾಂತ್ಯದಲ್ಲೂ ವೈಶಿಷ್ಟ್ಯಗಳಿವೆ. ಕಾಲದಿಂದ ಕಾಲಕ್ಕೆ, ಪ್ರದೇಶದಿಂದ ಪ್ರದೇಶಕ್ಕೆ ಜಾತಿ ಪದ್ಧತಿಯಲ್ಲಿ ಬಗೆಬಗೆಯ ಮಾರ್ಪಾಟುಗಳಾಗಿವೆ. ಈ ಮಾರ್ಪಾಟುಗಳಿಗೆ ಕಾರಣಗಳೇನು ಎಂಬುದರ ಬಗ್ಗೆಯೂ ಸಂಶೋಧನೆ ನಡೆಯಬೇಕಾಗಿದೆ. ನಮಗೆ ಗೊತ್ತಿರುವ ಹಾಗೆ ಜಾತಿ ಪದ್ಧತಿಯಲ್ಲಿ ಇಂದು ತೀವ್ರವಾಗಿ ಬದಲಾವಣೆಗಳಾಗುತ್ತಿವೆ. ಜಾತಿಗೆ ಅನುಗುಣವಾಗಿ ಸಾಂಪ್ರದಾಯಿಕವಾಗಿ ಬಂದ ಕುಲಕಸುಬುಗಳು ಮಾಯವಾಗುತ್ತಿವೆ. ಅಂತರ್ಜಾತೀಯ ವಿವಾಹಗಳಾಗುತ್ತಿವೆ. ಜಾತಿಗಳಲ್ಲಿ ಮೇಲು-ಕೀಳು, ಸ್ಪೃಶ್ಯ-ಅಸ್ಪೃಶ್ಯ ಎಂಬ ಭಾವನೆಗಳು ಕ್ರಮೇಣ ಕಡಿಮೆಯಾಗುತ್ತಿವೆ. ಈ ಮಾರ್ಪಾಟುಗಳೆಲ್ಲ ಆಗುತ್ತಿರುವುದಕ್ಕೆ ಕಾರಣಗಳೇನು ಎನ್ನುವುದರ ಬಗ್ಗೆ ವಿಮರ್ಶೆ, ಪರಿಶೋಧನೆ ನಡೆದಿದೆ. ಸಮಾಜಶಾಸ್ತ್ರದ ದೃಷ್ಟಿಯಿಂದ ಭಾರತೀಯ ಜಾತಿ ಪದ್ಧತಿ ಬಹಳ ಸಂಕೀರ್ಣವಾದ ವಿಷಯ. ನಿರ್ದಿಷ್ಟವಾದ ಮಾತುಗಳಲ್ಲಿ ಜಾತಿ ಪದ್ಧತಿಯ ಅರ್ಥ ವಿವರಣೆಯನ್ನು ಸಮಗ್ರವಾಗಿ ಕೊಡುವುದು ಎಂದರೆ ಹಲವು ಅಧ್ಯಾಯಗಳಾಗುತ್ತವೆ.

ಜಾತಿ ಪದ್ಧತಿ ಬೆಳೆದದ್ದು ಕಸುಬುಗಳ ಆಧಾರದ ಮೇಲೆ, ಸಮಾಜದ ಬೇಡಿಕೆಗಳು ಹೆಚ್ಚಾಗುತ್ತಾ ಹೆಚ್ಚು ಹೆಚ್ಚು ಕಸುಬುಗಳ ಅಗತ್ಯ ಕಂಡುಬಂದು ಜಾತಿಗಳ ಸಂಖ್ಯೆ ಕ್ರಮೇಣ ಹೆಚ್ಚಾಗುತ್ತಾ ಬಂದಿದೆ. ನಂತರದಲ್ಲಿ ನಾಗರಿಕತೆ ಬೆಳೆದಂತೆ, ಜನಜೀವನ ಹೆಚ್ಚು ಸಂಕೀರ್ಣವಾದಂತೆ ಜಾತಿಗಳ ಸಂಖ್ಯೆ ಹೆಚ್ಚಾಯಿತು. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಅನೇಕ ಕಸುಬುಗಳ, ಜಾತಿಗಳ ಹೆಸರು ಬರುತ್ತದೆ. ಒಂದೊಂದು ಜಾತಿಯವರೂ ತಮ್ಮ ಸಂಪ್ರದಾಯದಲ್ಲಿ ಬಂದ ಕಸುಬುಗಳನ್ನೇ ಅನುಸರಿಸುತ್ತಿದ್ದರು. ಯಾರೇ ಆಗಲಿ ಯಾವುದೇ ಕಸುಬನ್ನು ಆರಿಸಿಕೊಳ್ಳುವ ಸ್ವಾತಂತ್ರ್ಯವಿತ್ತೇ ಇಲ್ಲವೇ ಎನ್ನುವ ಪ್ರಶ್ನೆ ಬೇರೆ. ಬಹುಶ: ಈ ಸ್ವಾತಂತ್ರ್ಯವಿತ್ತೇ ಇಲ್ಲವೇ ಎನ್ನುವುದಕ್ಕೆ ಕಸುಬುಗಳ ಬದಲಾವಣೆ ಸಾಧ್ಯವಾಗುತ್ತಿತ್ತೇ ಎನ್ನುವುದು ಮುಖ್ಯ. ಹುಟ್ಟಿದಾಗಿನಿಂದ ಯಾವುದೇ ಒಂದು ಕಸುಬನ್ನು ಮಾಡುವ ಕುಟುಂಬದ ವ್ಯಕ್ತಿಗೆ ಆ ಕಸುಬು ಮಾಡುವುದು ಸುಲಭವಾಗತ್ತಿತ್ತೇ ವಿನ: ಅನ್ಯಜಾತಿಯ ಕಸುಬು ಮಾಡುವುದು ಬಹುಶ: ಸಾಧ್ಯವಾಗುತ್ತಿರಲಿಲ್ಲ.

ಅಂದಮೇಲೆ ಕಸುಬುಗಳನ್ನು ಆಶ್ರಯಿಸಿ ಬೆಳೆದ ಜಾತಿಗಳು ಮೊದಲಿಂದಲೂ ಪರಸ್ಪರ ಪ್ರತ್ಯೇಕವಾಗಿಯೇ ಇದ್ದವು ಎಂದು ಹೇಳಿದರೆ ತಪ್ಪಾಗುವುದಿಲ್ಲ.

ಹುಟ್ಟಿನಿಂದ, ವೃತ್ತಿಯಿಂದ ಬ್ರಾಹ್ಮಣರಾದವರೆಲ್ಲ ಇತರ ಜಾತಿಗಳಿಗಿಂತ ಶ್ರೇಷ್ಠರೆನಿಸಿಕೊಂಡರು. ಅವರ ಅನಂತರ ಕ್ಷತ್ರಿಯರು. ಅವರಿಗಿಂತ ಕೆಳಮಟ್ಟದಲ್ಲಿ ವೈಶ್ಯರು. ಶೂದ್ರ ವರ್ಗದ ಜಾತಿಗಳು ಎಲ್ಲಕ್ಕಿಂತ ತೀರ ಕೆಳ ಮಟ್ಟದವು ಎನ್ನಿಸಿಕೊಂಡವು. ಈ ಉಚ್ಚ-ನೀಚ ಭಾವನೆಗಳನ್ನು ಆಯಾ ಜಾತಿಗಳು ಮಾಡುವ ಕಸುಬುಗಳಿಗೂ ಅನ್ವಯಿಸಲಾಯಿತು. ಆಯಾ ಕಸುಬಿನ ಅಂತಸ್ತಿನಂತೆ ಆಯಾ ಜಾತಿಯ ಅಂತಸ್ತನ್ನು ನಿರ್ಣಯಿಸಲಾಯಿತು. ಅನೇಕ ಜಾತಿಗಳಿಂದ ಕೂಡಿದ ಶೂದ್ರ ವರ್ಗದಲ್ಲಿಯೇ ಒಂದು ಜಾತಿ ಇನ್ನೊಂದು ಜಾತಿಗಿಂತ ಮೇಲು ಎನ್ನುವಂತಾಯಿತು. ಉದಾಹರಣೆಗೆ ಕಮ್ಮಾರನ ಜಾತಿ ಅಕ್ಕಸಾಲಿಗನ ಜಾತಿಗಿಂತ ಕೀಳು-ಎಂಬ ಭಾವನೆ ಬೆಳೆಯಿತು. ಅವರವರ ಜಾತಿ ಅಂತಸ್ತಿನ ಪ್ರಕಾರ, ಊರಿನಲ್ಲಿ ಅವರವರಿಗೆ ಯೋಗ್ಯವಾದ ಬೇರೆ ಬೇರೆ ಕೇರಿಗಳಲ್ಲಿ ವಾಸಿಸತೊಡಗಿದರು. ಹೀಗೆ ಚತುರ್ವರ್ಣ ವಿಭಾಗದ ಹೆಸರಿನಲ್ಲಿ ಕ್ರಮಾನುಗತ ಜಾತಿ ಪದ್ಧತಿ ನಮ್ಮ ದೇಶದಲ್ಲಿ ನೆಲೆಗೊಂಡಿತು. ಸಂಪ್ರದಾಯವಾಗಿ ಬೆಳೆದುಬಂದ ಈ ಜಾತಿ ಪದ್ಧತಿ ಮತ್ತು ಅಸ್ಪೃಶ್ಯತೆಯಿಂದ ಭಾರತೀಯ ಸಮಾಜ ಒಂದು ರೀತಿಯ ಗೊಂದಲಕ್ಕೆ ಈಡಾಯಿತು. ಭಾರತ ಪ್ರಗತಿ ಹೊಂದಬೇಕಾದರೆ ಜಾತಿ ಭೇದ, ಅಸ್ಪೃಶ್ಯತೆ ಇವುಗಳ ಬಗ್ಗೆ ಇರುವ ಅಂಧಶ್ರದ್ಧೆ ತೊಲಗಬೇಕು. ಈ ಅಂಧಶ್ರದ್ಧೆ ಮತ್ತು ಕಂದಾಚಾರಗಳನ್ನು ಹೋಗಲಾಡಿಸುವುದಕ್ಕಾಗಿ ಕಾಲಕಾಲಕ್ಕೆ ಪ್ರಾಜ್ಞರ ಮುಂದಾಳತ್ವದಲ್ಲಿ ಪ್ರಯತ್ನಗಳು ನಡೆದವು. ನಾಗರಿಕತೆಯಲ್ಲಿ ಮುಂದುವರಿದ ಜಪಾನಿನಲ್ಲಿಯೂ ಕೂಡ ಅಸ್ಪೃಶ್ಯತೆ ನಿವಾರಣೆಯ ಬಗ್ಗೆ ಆಂದೋಳನ ಪ್ರಾರಂಭವಾದದ್ದು ಕೇವಲ ಆರು ದಶಕಗಳ ಹಿಂದೆ. ನಮ್ಮ ದೇಶದಲ್ಲಾದಂತೆ ಅಲ್ಲಿಯೂ ಆ ಆಂದೋಳನ ಸಂಪೂರ್ಣವಾಗಿ ಯಶಸ್ವಿಯಾಗಿಲ್ಲ. ಅಮೆರಿಕಾದಲ್ಲಿಯೂ ಕರಿಯರು-ಬಿಳಿಯರು ಎಂಬ ವರ್ಣಭೇದ ಇನ್ನೂ ಜೀವಂತವಾಗಿದೆ!.

ಭಾರತದಲ್ಲಿ ಜಾತಿ ಮತ್ತು ಕುಲಗಳು ಬೆಳೆದದ್ದು ಬೇರೆ ಬೇರೆ ವೃತ್ತಿಗಳ ಆಧಾರದ ಮೇಲೆ. ಕುಲಕಸುಬನ್ನು ಮಾಡದವನು ಇಡೀ ಕುಲಕ್ಕೆ ಕಳಂಕ ಎಂಬ ಭಾವನೆಯಿತ್ತು. ಹಿಂದೆ ಬ್ರಿಟಿಷರ ಆಡಳಿತದ ಪರಿಣಾಮ ನಂತರದಲ್ಲಿ ಶೈಕ್ಷಣಿಕ ಪ್ರಭಾವದಿಂದ ಅಥವಾ ಮಾಯವಾಗುತ್ತಿರುವುದನ್ನು ಈಗ ಕಾಣುತ್ತಿದ್ದೇವೆ.

ಜೊತೆಗೆ ಜಾಗತೀಕರಣವು ಸೇರಿಕೊಂಡಿತ್ತು. ಕುಲಕಸುಬುಗಳು ಬದಲಾವಣೆಗಳಾಗುತ್ತಿರುವುದು ಸಾಮಾಜಿಕ ಸ್ಥಿತಿಯಲ್ಲಿ ತೀವ್ರ ಬದಲಾವಣೆಗಳಾದ ಮೇಲೆ ಹೊಸ ಸಮಾಜ ತತ್ತ್ವ, ಹೊಸ ಸಾಮಾಜಿಕ ದೃಷ್ಟಿ ಮೂಡುತ್ತದೆ.

ಭಾರತೀಯ ಸಾಮಾಜಿಕ ಇತಿಹಾಸದಲ್ಲಿ ವರ್ಣ ಮತ್ತು ಜಾತಿ ಎಂಬ ಶಬ್ದಗಳು ಪರಸ್ಪರ ಬೆರೆತು ವರ್ಣ, ಜಾತಿ ಒಂದೇ ಎನ್ನುವಷ್ಟರ ಮಟ್ಟಿಗೆ ಆಗಿಹೋಗಿದೆ. ಯಾವುದೇ ಸಾಮಾಜಿಕ ಇತಿಹಾಸದಲ್ಲಿ ಇಂತಹ ಅಸಂಬದ್ಧವಾದ ಘಟನೆಗಳು ನಡೆಯುತ್ತವೆ. ಇದರಲ್ಲಿ ವಿಶೇಷವೇನಿಲ್ಲ. ಅಸ್ಪೃಶ್ಯತೆಗೆ ಶಾಸ್ತ್ರದಲ್ಲಿ ಆಧಾರವೇ ಇಲ್ಲದಿದ್ದರೂ ನಮ್ಮ ಸಮಾಜದಲ್ಲಿ ಅಸ್ಪೃಶ್ಯತೆ ಬೆಳೆದುಬಂದಿದೆ. ಇದು ಹೇಗೆ ಆಯಿತು, ಯಾವಾಗ ಆಯಿತು ಎನ್ನುವುದನ್ನು ನಿರ್ಣಯಿಸುವುದು ಕಷ್ಟ. ಹಾಗೆಯೇ ಜಾತಿ ಮತ್ತು ವರ್ಣಗಳ ಅಸಂಬದ್ಧವಾದ ಕಲಬೆರಕೆ ಯಾವಾಗ, ಹೇಗೆ ಆಯಿತು ಎಂಬುದನ್ನು ಹೇಳಲಾಗುವುದಿಲ್ಲ. ಹೇಗೋ ಕಲಬೆರಕೆ ಯಾಗಿರುವುದರಿಂದ ವರ್ಣ ಜಾತಿಗಳ ಸಂಬಂಧಗಳ ಬಗ್ಗೆ ನಾನಾ ಬಗೆಯ ತಪ್ಪು ಅಭಿಪ್ರಾಯಗಳು ಬೆಳೆಯುವುದಕ್ಕೆ ಅವಕಾಶವಾಗಿದೆ. ಕೆಲವು ಅಭಿಪ್ರಾಯಗಳಂತೂ ಹಾಸ್ಯಾಸ್ಪದವಾಗಿವೆ. ಜನರನ್ನು ನಾಲ್ಕು ವರ್ಣಗಳನ್ನಾಗಿ ಮನು ವಿಭಾಗ ಮಾಡಿದ. ಅವನ ಕಾಲದಿಂದೀಚೆಗೆ ಅವುಗಳಲ್ಲಿ ಸಾವಿರಾರು ಒಳವಿಭಾಗಗಳಾಗಿ ಅವೇ ಸಾವಿರಾರು ಜಾತಿಗಳಾಗಿ ಪರಿಣಮಿಸಿದವು ಎಂಬ ಅಭಿಪ್ರಾಯವಿದೆ. ಈ ರೀತಿ ವರ್ಣ ವಿಭಾಗ ಮಾಡದಿದ್ದರೆ ನಮ್ಮ ದೇಶದಲ್ಲಿ ಈ ಬಗೆಯ ಜಾತಿಯ ಸಮಸ್ಯೆ ಇರುತ್ತಿರಲಿಲ್ಲ ಎಂದು ಹೇಳುವವರೂ ಇದ್ದಾರೆ. ಅಂತೂ ಭಾರತೀಯ ಸಾಮಾಜಿಕ ಇತಿಹಾಸದಲ್ಲಿ ಈ ಕಲಬೆರಕೆ ನಡೆದುಹೋಗಿದೆ. ಪೌರೋಹಿತ್ಯವನ್ನು ಕುಲಕಸುಬಾಗಿ ಉಳ್ಳವರನ್ನು ಬ್ರಾಹ್ಮಣರೆಂದೂ, ರಾಜ್ಯಾಡಳಿತ ಮಾಡುವವರನ್ನು ಕ್ಷತ್ರಿಯರೆಂದೂ, ವಾಣಿಜ್ಯ ಮುಂತಾದ ವ್ಯಾಪಾರೀ ಕಸುಬುಗಳನ್ನು ಮಾಡುವವರನ್ನು ವೈಶ್ಯರೆಂದೂ, ಕೃಷಿ ಮತ್ತು ಇತರ ಉಪಕಸುಬುಗಳನ್ನು ಮಾಡುವವರನ್ನು ಶೂದ್ರರೆಂದು ಕರೆದರು. ಇವರಲ್ಲಿ ಒಬ್ಬರಿಗಿಂತ ಒಬ್ಬರು ಕೀಳೆನ್ನುವ, ಹಾಗೂ ಬ್ರಾಹ್ಮಣರೇ ಅತ್ಯಂತ ಶ್ರೇಷ್ಠ ಜಾತಿಯವರೆಂಬ, ಶೂದ್ರರು ಕನಿಷ್ಠರೆಂಬ ಭಾವನೆ ಬೆಳೆದುಬಂದಿದೆ. ಶೂದ್ರರೇ ಬಹುಸಂಖ್ಯಾತರು, ವ್ಯವಸಾಯ ಮುಂತಾದ ನೂರಾರು ಕಸುಬುಗಳನ್ನು ಮಾಡುವವರೆಲ್ಲರನ್ನು ಈ ಶೂದ್ರ ಜಾತಿಯಲ್ಲಿ ಸೇರಿಸಲಾಗಿದೆ. ಅವರಲ್ಲಿಯೂ ಪಂಗಡಗಳಿವೆ, ಮೇಲು-ಕೀಳು

ಭಾವನೆಗಳಿವೆ, ಐತಿಹಾಸಿಕವಾಗಿ ಈ ಅಸಂಬದ್ಧವಾದ ಸಂಪ್ರದಾಯದಿಂದ ವರ್ಣ, ಕುಲಗಳ ಕಲಬೆರಕೆ ನಡೆದು ಹೋಗಿದೆ.

ಆರ್ಯರು ಭಾರತಕ್ಕೆ ಬರುವ ಮುನ್ನವೇ ಸಿಂಧೂ ನದಿಯ ತೀರದಲ್ಲಿ ವಾಸ ಮಾಡುತ್ತಿದ್ದ ಜನರಲ್ಲಿ ಬಗೆಬಗೆಯ ಕಸುಬುಗಳ ಆಧಾರದ ಮೇಲೆ ಕುಲಗಳ ಅಥವಾ ಶ್ರೇಣಿಗಳ ವಿಭಾಗಗಳಿದ್ದುವೆಂಬುದು ಹರಪ್ಪ, ಮೊಹೆಂಜೋದಾರೋ ಸಂಶೋಧನೆಗಳಿಂದ ವ್ಯಕ್ತಪಟ್ಟಿದೆ. ಸಂಶೋಧಕರ ಪ್ರಕಾರ ಪಂಡಿತರು, ಯೋಧರು, ವ್ಯಾಪಾರಗಾರರು, ಕುಶಲ ಕಲೆಗಾರರು ಅಂದರೆ ಗಾರೆಯವರು, ನೇಯ್ಗೆಯವರು, ಅಕ್ಕಸಾಲಿಗರು ಮುಂತಾದವರೂ, ಉಳಿದ ಕೆಲಸಗಳನ್ನು ಮಾಡುತ್ತಿದ್ದ ಚಮ್ಮಾರರು, ಮೇದರು, ರೈತರು, ಬೆಸ್ತರೂ ಮೊದಲಾದ ಪಂಗಡಕ್ಕೆ ಸೇರಿದವರು.

ನಮ್ಮ ಸಮಾಜದ ಇತಿಹಾಸದಲ್ಲಿ ಜಾತಿ ವಿಭಾಗಗಳು ಚತುರ್ವರ್ಣ ವಿಭಾಗದ ಚೌಕಟ್ಟಿನಲ್ಲಿ ಸೇರಿಹೋದ ಕಾರಣ ಬ್ರಾಹ್ಮಣರೆಂದು ಪರಿಗಣಿತರಾದ ಜನರು ಎಲ್ಲ ರೀತಿಯಲ್ಲಿಯೂ ಶ್ರೇಷ್ಠರೆಂದೂ, ಕ್ಷತ್ರಿಯರು ಅವರಿಗಿಂತ ಕೆಳಮಟ್ಟದವರೆಂದೂ, ವೈಶ್ಯರು ವೇದಾಧ್ಯಯನ, ರಾಜ್ಯಾಡಳಿತ ಮುಂತಾದವಕ್ಕೆ ಅನರ್ಹರೆಂದೂ, ಶೂದ್ರರೂ ಎಲ್ಲರಿಗಿಂತ ಕೀಳೆಂದೂ ಇತ್ಯಾದಿ ಭೇದಭಾವನೆಗಳು ಸಂಪ್ರದಾಯಿಕವಾಗಿ ಬೆಳೆದುಬಂದವು. ಇದರಿಂದ ಸಮಾಜದ ಎಲ್ಲ ಉತ್ತಮ ಸೌಲಭ್ಯಗಳನ್ನು ಉತ್ತಮ ಜಾತಿಯವರೇ ಅನುಭವಿಸುವಂತಾಯಿತು. ಶೂದ್ರರು, ಅಸ್ಪೃಶ್ಯರು ತಮ್ಮ ಚೇತನದ ವಿಕಾಸಕ್ಕೆ ಅವಕಾಶವಿಲ್ಲದೆ ವಂಚಿತರಾದರು. ನಮ್ಮ ಸಮಾಜದ ಬಹು ಭಾಗದ ಜನ ಅವಿದ್ಯಾವಂತರಾದದ್ದು, ದರಿದ್ರರಾದದ್ದು ಈ ಕಾರಣದಿಂದಲೇ ಎನ್ನಲಾಗಿದೆ. ಈ ರೀತಿಯ ಜಾತಿ ಪದ್ಧತಿ ನಮ್ಮ ದೇಶದಲ್ಲಿ ಬೆಳೆದುಬಂತು. ಈ ಜಾತಿ ಪದ್ಧತಿ ಎಷ್ಟು ಪ್ರಬಲವಾಗಿ ಬೆಳೆಯಿತೆಂದರೆ ದಲಿತ ವರ್ಗದವರನ್ನು ಮೇಲಕ್ಕೆತ್ತುವ ಪ್ರಯತ್ನಗಳು ಎಷ್ಟೋ ವೇಳೆ ನಡೆದರೂ ಅವೆಲ್ಲ ವಿಫಲಗೊಂಡವು. ದಲಿತವರ್ಗದವರ ಸುಧಾರಣೆ ಪ್ರಾರಂಭವಾದದ್ದು ಬೌದ್ಧ, ಜೈನ ಮತ ಪ್ರವರ್ತಕರಿಂದ. ಮೋಕ್ಷ ಸಾಧನೆಗೆ ಜಾತಿ ಭೇದಗಳ ಅಡ್ಡಿಯಿಲ್ಲವೆಂದು ಮೊಟ್ಟ ಮೊದಲು ಸಾರಿದವರು ಮಹಾವೀರ ಹಾಗೂ ಬುದ್ದ. ಅನಂತರ ವೈಷ್ಣವ, ಶೈವ ಧರ್ಮಗಳಲ್ಲಿ ಹಾಗೂ ವಿಶೇಷವಾಗಿ ಭಕ್ತಿ ಪಂಥಗಳಲ್ಲಿ ಇದೇ ಬಗೆಯ ಸುಧಾರಣಾ ಕಾರ್ಯ ನಡೆಯಿತು. ಆದರೆ ಇವೆಲ್ಲ ವಿಫಲಗೊಂಡವು. ಚತುರ್ವರ್ಣದ ಚೌಕಟ್ಟಿನಲ್ಲಿ ಹಳೆಯ ಜಾತಿ ಪದ್ಧತಿ ನಮ್ಮ ಸಮಾಜದಲ್ಲಿ ಬೇರೂರಿತು. ಇದನ್ನು ತೊಡೆದು

ಹಾಕಲು ಅನೇಕ ಸಮಾಜ ಸುಧಾರಕರು ಪಯತ್ನಿಸುತ್ತಿದ್ದಾರೆ ಎನ್ನುವುದಕ್ಕಿಂತ ಶ್ರಮಿಸುತ್ತಿದ್ದಾರೆ ಎನ್ನುವದೇ ಉಚಿತವಾಗಿದೆ. ಬಸವಣ್ಣ, ಕನಕದಾಸರಿಂದ ಹಿಡಿದು ಕಳೆದ ಶತಮಾನದ ಹಿಂದಿನ ಹಾಗೂ ಆದಿಭಾಗದಿಂದ ರಾಜರಾಮಮೋಹನರಾಯ್, ಕೇಶವಚಂದ್ರಸೇನ, ಸ್ವಾಮಿ ವಿವೇಕಾನಂದ ಮುಂತಾದ ಮಹಾಪುರುಷರ ಪ್ರಭಾವದಿಂದ ಈ ಸುಧಾರಣಾ ಕಾರ್ಯ ಹಿಂದೆಂದಿಗಿಂತ ತೀವ್ರಗತಿಯಲ್ಲಿ ನಡೆಯಿತು. ಗಾಂಧೀಯುಗ ಪ್ರಾರಂಭವಾದ ಮೇಲಂತೂ ಸುಧಾರಣೆಯ ಪ್ರಭಾವ ಇನ್ನೂ ಹೆಚ್ಚಾಯಿತು. ಇಷ್ಟಾದರೂ ಈ ಜಾತಿ ಪದ್ಧತಿಯ ಕಳಂಕ ನಮ್ಮ ಸಮಾಜದಿಂದ ತೊಲಗಿಹೋಗಿದೆ ಎಂದು ಹೇಳುವಂತಿಲ್ಲ. ಇತ್ತೀಚಿನ ದಶಕಗಳಲ್ಲಿ ಜಾತಿ ಪದ್ಧತಿ ಅಳಿಯುವುದೇನೋ ಎಂಬ ಸುಳಿವು ಕಂಡುಬರುತ್ತಿದೆ. ದಲಿತ ಜಾತಿಗಳ ಅಭಿವೃದ್ಧಿಗೆ ಬಹುಮುಖ ಪ್ರಯತ್ನಗಳು ನಡೆಯುತ್ತಿವೆ, ಮಡಿ–ಮೈಲಿಗೆ ಮುಂತಾದ ಭಾವನೆಗಳು ಕೂಡ ದೂರವಾಗುತ್ತಿವೆ. ವಿದ್ಯೆಯ ಬೆಳಕು ಚೆಲ್ಲಿದಾಗ ಮೌಢ್ಯ ಮತ್ತು ಮೌಢ್ಯದ ಆಧಾರದ ಮೇಲೆ ಬೆಳೆದ ಕಂದಾಚಾರಗಳು ಮಾಯವಾಗಲೇಬೇಕು. ಬಹುಶ: ಮುಂದಿನ ದಶಕಗಳಲ್ಲಿ ಈ ಜಾತಿ ಪದ್ಧತಿ ನಮ್ಮ ದೇಶದಿಂದ ಸಂಪೂರ್ಣವಾಗಿ ತೊಲಗಿ ಎಲ್ಲರ ಅಭಿವೃದ್ಧಿಗೆ ಸಮಾನ ಅವಕಾಶವುಂಟಾಗುವುದೆಂದು ನಿರೀಕ್ಷಿಸಬಹುದಾಗಿದೆ. ಮಹಾಕವಿ ಕುವೆಂಪುರವರ 'ಸರ್ವೋದಯ, ಸಮನ್ವಯ ವಿಶ್ವಕ್ಕೆ ಮಾದರಿಯಾಗಿ ವಿಶ್ವಮಾನ್ಯತೆ' ಆಗಬೇಕಾಗಿದೆ.

ಭಾರತೀಯ ಜನತೆ ಆರ್ಥಿಕವಾಗಿ, ಸಾಮಾಜಿಕವಾಗಿ ಹಿಂದುಳಿದಿರುವುದಕ್ಕೆ ಅಸ್ಪೃಶ್ಯತೆಯೂ ಒಂದು ಮುಖ್ಯ ಕಾರಣವೆನ್ನಬಹುದು. ಅಸ್ಪೃಶ್ಯತೆಯ ನಿವಾರಣೆಗೆ ಭಾರತದ ಇತಿಹಾಸದಲ್ಲಿ ಹಿಂದಿನಿಂದ ಪ್ರಯತ್ನಗಳು ನಡೆದಿವ. ಬುದ್ಧನ ತತ್ತ್ವದ ಪ್ರಕಾರ ಮೋಕ್ಷ ಸಾಧನೆಗೆ ಶೂದ್ರತ್ವವಾಗಲೀ, ಅಸ್ಪೃಶ್ಯತೆಯಾಗಲೀ, ಸ್ತ್ರೀತ್ವವಾಗಲೀ ಯಾವುದೂ ಅಡ್ಡಿಯಾಗಿರಲಿಲ್ಲ, ಬುದ್ಧನ ಪಥವನ್ನು ಸ್ತ್ರೀಪುರುಷ ಭೇದವಿಲ್ಲದೆ, ಜಾತಿಬೇಧವಿಲ್ಲದೆ ಎಲ್ಲರೂ ಅನುಸರಿಸಬಹುದಾಗಿತ್ತು. ಮಹಾವೀರರ ತತ್ತ್ವವೂ ಇದೇ ರೀತಿಯದೇ. ಈ ಕಾರಣದಿಂದಲೇ ನಮ್ಮ ದೇಶದ ಭಕ್ತಿ ಪಂಥದಲ್ಲಿನ ಅನೇಕ ಸಾಧುಸಂತರು ಎಲ್ಲ ಜಾತಿಗಳಿಗೂ ಸೇರಿದವರಾಗಿದ್ದರು. ಉದಾಹರಣೆಗೆ, ಚೌಕಮೇಳನೆಂಬುವನು ಮಹಾರಾಷ್ಟ್ರದ ಮಾದಿಗರವನು, ಜನಾಭಾಯಿ ಕಸಗುಡಿಸುವವಳು, ನಾಮದೇವ ದರ್ಜಿಯವನು, ಕನಕದಾಸ ಕುರುಬರವನು, ಕಬೀರ ನೇಯ್ಗೆಯವನು, ತಿರುಪ್ಪಾಣಿ ತಮಿಳು ದೇಶದ ಪರಯಾ, ಆಂಡಾಳ್ ಸ್ತ್ರೀ, ನಮ್ಮಾಳ್ವಾರ್ ತಮಿಳು ದೇಶದ ಶೂದ್ರ. ಭಕ್ತಿಮಾರ್ಗ ನಮ್ಮ ದೇಶದ ಇತಿಹಾಸದಲ್ಲಿ

ಅನೇಕ ಶತಮಾನಗಳ ಕಾಲ ಬೆಳೆಯಿತು. ಇದರಲ್ಲಿ ಮುಖ್ಯವಾಗಿ ವೈಷ್ಣವ ಭಕ್ತಿಮಾರ್ಗ ಮತ್ತು ಶೈವ ಭಕ್ತಿಮಾರ್ಗ ಎಂಬ ಎರಡು ಬಗೆಗಳು. ಶಿವಶರಣರಲ್ಲಿಯೂ ಮಾದಿಗರ ಚೆನ್ನಯ್ಯ ಮುಂತಾದ ಅಸ್ಪೃಶ್ಯರೂ, ಅಕ್ಕಮಹಾದೇವಿ ಮುಂತಾದ ಸ್ತ್ರೀಯರೂ ಹಾಗೂ ಶೂದ್ರ ಜಾತಿಗೆ ಸೇರಿದ ಅನೇಕ ಭಕ್ತರೂ ಇದ್ದರು. ವೈಷ್ಣವ ಭಕ್ತಿ ಮಾರ್ಗದಲ್ಲಿ ಅನೇಕ ವಿಭಾಗಗಳಿವೆ. ಬಂಗಾಳದ ವೈಷ್ಣವ ಭಕ್ತಿಮಾರ್ಗ, ಗುಜರಾತಿನ ಹಾಗೂ ಮಹಾರಾಷ್ಟ್ರದ ವೈಷ್ಣವ ಭಕ್ತಿಮಾರ್ಗ, ಕರ್ನಾಟಕದ ಹರಿದಾಸ ಪಂಥ, ತುಳಸೀದಾಸರ ವೈಷ್ಣವ ಭಕ್ತಿಮಾರ್ಗ ಮುಂತಾದವು. ವೈಷ್ಣವ ಭಕ್ತಿಮಾರ್ಗದಲ್ಲಿಯೂ ಸ್ತ್ರೀಯರೂ, ಶೂದ್ರರೂ, ಅಸ್ಪೃಶ್ಯರೂ ಇದ್ದರು. ಎಲ್ಲರ ಕ್ಷೇಮವೇ ವೈಷ್ಣವ ಧರ್ಮದ ತಿರುಳು. ಇಂತಿರಲು ಭಾರತೀಯ ಸಮಾಜದಲ್ಲಿ ಅಸ್ಪೃಶ್ಯತೆ ಹುಟ್ಟಿಕೊಂಡು ಇಡೀ ಸಮಾಜವನ್ನೇ ವಿಕೃತಗೊಳಿಸಿರುವುದನ್ನು ನೋಡಿ ಸಹಿಸಲಾರದ ಕೆಲವು ಮಹಾನುಭಾವರು ಬ್ರಹ್ಮಸಮಾಜ, ಆರ್ಯಸಮಾಜ ಮುಂತಾದ ಹೊಸ ಸಮಾಜಗಳನ್ನು ನಿರ್ಮಾಣ ಮಾಡಿದರು.

ಹನ್ನೆರಡನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಅಸ್ಪೃಶ್ಯತೆಯ ನಿವಾರಣೆಗೆ ಅನೇಕ ಪ್ರಯತ್ನಗಳಾಗಿವೆ. ಬಸವಣ್ಣನವರು ಜಾತಿ, ಮತ, ಕುಲ, ಗೋತ್ರ, ಪಂಥ, ಉದ್ಯೋಗ ಮುಂತಾದವುಗಳಲ್ಲಿ ಭೇದವೆಣಿಸದೆ ಸರ್ವ ಸಮಾನತೆ, ಸ್ವಾತಂತ್ರ್ಯ ಹಾಗೂ ನೈತಿಕ ಜೀವನದ ತಳಹದಿಯ ಮೇಲೆ ಸಮಾಜ ನಿರ್ಮಾಣವನ್ನು ಗುರಿಯಾಗಿಟ್ಟುಕೊಂಡು ಜಾತಿಗತವಾಗಿ ಬಂದ ಎಲ್ಲ ಭೇದಗಳನ್ನೂ ಕಡೆಗಾಣಿಸಿದರು. ಅವರು ಯಾವುದೇ ಕಾಯಕಕ್ಕೆ ಒಂದು ಗೌರವ ಸ್ಥಾನವನ್ನು ಕಲ್ಪಿಸಿ "ಕಾಯಕವೇ ಕೈಲಾಸ" ಎಂದು ಬೋಧಿಸುತ್ತಾ ನಿರುದ್ಯೋಗ ಸಮಸ್ಯೆಯನ್ನು ನಿವಾರಿಸಲು ಯತ್ನಿಸದುದಲ್ಲದೆ, ಆತ್ಮ ಪರಿಶುದ್ಧತೆಯಿಂದ ಮಾಡಿದ ಯಾವ ಉದ್ಯೋಗವೇ ಆದರೂ ಅದರಲ್ಲಿ ತಿರಸ್ಕಾರ ಭಾವನೆ ಇರಕೂಡದೆಂದು ತಿಳಿಸಿದರು. ಉದ್ಯೋಗದ ಮೂಲಕವಾಗಿ ಬಂದ ಮೇಲು-ಕೀಳು ಭಾವನೆಗಳನ್ನು ಬದಿಗೊತ್ತಿ ಸಮಾಜ ಹಿತಕ್ಕಾಗಿ, ಮಾನವಕಲ್ಯಾಣಕ್ಕಾಗಿ ಎಲ್ಲಾ ಉದ್ಯೋಗಗಳೂ ಸರಿಸಮಾನವೆಂದು ಸಾರಿದರು. ಯಾವ ಉದ್ಯೋಗವೂ ಮೋಕ್ಷಕ್ಕೆ ಪ್ರತಿಬಂಧಕವಲ್ಲವೆಂದು ಬೋಧಿಸಿ ನ್ಯಾಯ ಹಾಗೂ ಪ್ರಾಮಾಣಿಕ ಉದ್ಯೋಗಗಳಿಗೆಲ್ಲ ಧಾರ್ಮಿಕ ಗೌರವವನ್ನು ಕಲ್ಪಿಸಿದರು.

೧೯ನೆಯ ಶತಮಾನದ ಮಧ್ಯಭಾಗದ ಸಮಾಜ ಸುಧಾರಣೆಯಲ್ಲಿ ಅಸ್ಪೃಶ್ಯತೆ ಕಳಂಕಪ್ರಾಯವಾದದ್ದು ಎಂಬ ಗಂಭೀರ ಅರಿವು ಹಾಗೂ ಅದರ ನಿವಾರಣೆಗೆ ಧೃಡ ಸಂಕಲ್ಪ ಮೂಡಿತು. ಸತಿಸಹಗಮನದ ರಾಜಾರಾಮಮೋಹನರಾಯರು ಇದರ ಮಾರ್ಗದರ್ಶಕರು; ಪ್ರಥಮ ಪ್ರವರ್ತಕರು. ಅವರ ಕಾಲದಿಂದೀಚೆಗೆ ತಲೆಮಾರಿನಿಂದ ತಲೆಮಾರಿಗೆ ಈ ಹೊಸ ದೃಷ್ಟಿ ಬೆಳೆಯುತ್ತಲೇ ಬಂದಿದೆ. ಗಾಂಧೀಯುಗದಲ್ಲಿ ಈ ಹೊಸ ದೃಷ್ಟಿ ಕೇವಲ ತತ್ತ್ವವಾಗಿ ಉಳಿಯದೆ ಕಾರ್ಯರೂಪಕ್ಕೆ ಬಂದು ಅಸ್ಪೃಶ್ಯತಾ ನಿವಾರಣೆಗಾಗಿ ಒಂದು ವಿಶೇಷವಾದ ಚಳವಳಿಯೇ ನಡೆಯಿತು. ಮಹಾತ್ಮಗಾಂಧಿ ಮತ್ತು ಅವರ ಅನುಯಾಯಿಗಳೇ ಈ ಚಳವಳಿಯ ಮಾರ್ಗದರ್ಶಕರು. ಈ ಚಳವಳಿ ದೇಶಾದ್ಯಂತ ಅಸ್ಪೃಶ್ಯರ ಬಗ್ಗೆ ಸವರ್ಣೀಯರ ಹೃದಯ ಪರಿವರ್ತನೆ ಮಾಡುವುದಕ್ಕೆ ತೀವ್ರವಾದ ಹಾಗೂ ಬಹುಮುಖವಾದ ಪ್ರಚಾರ ಕಾರ್ಯ ನಡೆಯಿತು. ಅದರ ಮುಖಂಡತ್ವವನ್ನು ಗಾಂಧಿಜೀಯವರೇ ವಹಿಸಿ ಕೊಂಡಿದ್ದರು. ಅವರ ಸಮಾಜ ಸುಧಾರಣಾ ಯೋಜನೆಯಲ್ಲಿ ಅಸ್ಪೃಶ್ಯತಾ ನಿವಾರಣೆಗೆ ಪ್ರಥಮ ಸ್ಥಾನ. ದೇಶದ ಆರ್ಥಿಕ ಸ್ವಾತಂತ್ರ್ಯವನ್ನುಗಳಿಸುವುದಕ್ಕೆ ಚರಕ ಹೇಗೆ ಸಾಧನವೋ ಸಮಾಜದ ಉನ್ನತಿಯ ಸಾಧನೆಗೆ ಅಸ್ಪೃಶ್ಯತಾ ನಿವಾರಣೆಯೇ ಕೀಲಿ ಕೈ ಎಂಬುದು ಗಾಂಧಿಜೀಯವರ ದೃಷ್ಟಿಯಾಗಿತ್ತು. ಸವರ್ಣೀಯರ ಹೃದಯ ಪರಿವರ್ತನೆ ಮಾಡುವುದಕ್ಕಾಗಿ, ಸವರ್ಣೀಯರಲ್ಲಿ ಅಸ್ಪೃಶ್ಯರ ಬಗ್ಗೆ ಒಂದು ಹೊಸ ದೃಷ್ಟಿ ಮೂಡಲಿ ಎಂದು "ಗಾಂಧೀಜಿಯವರು ಅಸ್ಪೃಶ್ಯರನ್ನು ಹರಿಜನರೆಂದು ಕರೆದರು. ಅಸ್ಪೃಶ್ಯರು ಸಮಾಜದಲ್ಲಿ ಕನಿಷ್ಠರಲ್ಲ ಅವರು ಸವರ್ಣೀಯರಂತೆಯೇ ಹರಿಯ ಮಕ್ಕಳು ಎಂಬ ಅರಿವನ್ನು ಉಂಟುಮಾಡುವುದಕ್ಕಾಗಿ ಗಾಂಧೀಜಿ ಶ್ರಮಿಸಿದರು. ಅಸ್ಪೃಶ್ಯರೂ ಹರಿಯ ಮಕ್ಕಳು ಎಂದ ಮೇಲೆ ಇತರರಿಗೆ ಇರುವ ಎಲ್ಲ ಸೌಲಭ್ಯ ಸದವಕಾಶಗಳೂ ಇವರಿಗೆ ಇರಲೇಬೇಕು. ಈ ರೀತಿ ಹೃದಯ ಪರಿವರ್ತನೆ ಮಾಡುವ ಮೂಲಕ ಅಸ್ಪೃಶ್ಯತೆ ಎಂಬ ಕಳಂಕವನ್ನು ನಮ್ಮ ಜನತೆಯಿಂದ ತೊಡೆದುಹಾಕಲು ಗಾಂಧೀಜಿಯವರು ಮಾಡಿದ ಪ್ರಯತ್ನ ವಿಶ್ವದ ಇತಿಹಾಸದಲ್ಲೇ ವಿಶೇಷವಾದದ್ದು ಮತ್ತು ಅತ್ಯಂತ ಪರಿಣಾಮಕಾರಿಯಾದದ್ದು".

ಅನೇಕ ಶತಮಾನಗಳ ಕಾಲ ಭಕ್ತಿ ಪಂಥಗಳು ಬೆಳೆದು ಬಂದಿದ್ದರೂ, ಅಸ್ಪೃಶ್ಯರಲ್ಲಿ ಅನೇಕ ಭಕ್ತರು ಅವತರಿಸಿ ಬಂದಿದ್ದರೂ ಭಕ್ತಿ ಪಂಥದಿಂದ ಅಸ್ಪೃಶ್ಯತೆ ನಿವಾರಣೆಯಾಗಿರಲಿಲ್ಲ. ಇಂತಹ ಅಸಾಧ್ಯವಾಗಿದ್ದ ಕಾರ್ಯವನ್ನು ಗಾಂಧೀಜಿಯವರು

ತಮ್ಮದೇ ಆದ ಕಾರ್ಯ ರೂಪದಿಂದ ಸಾಧಿಸಿದರು. ಅವರ ಪ್ರಯತ್ನದಿಂದ ಅಸ್ಪೃಶ್ಯತೆಯ ಬಗ್ಗೆ ಜನತೆಯಲ್ಲಿ ಹೊಸ ಅರಿವು ಮೂಡುತ್ತ ಬಂದಿತು. 'ಹರಿಜನ' ಎಂಬ ಪತ್ರಿಕೆಯನ್ನು ಪ್ರಕಟಿಸುತ್ತಿದ್ದರು. ಹರಿಜನರ ಏಳಿಗೆಗಾಗಿ ಮೀಸಲಾಗಿದ್ದ ಪತ್ರಿಕೆಯಾಗಿತ್ತು. ಗಾಂಧೀಜಿ ಅವರ ಕಾಲದಿಂದೀಚೆಗೆ ವಿನೋಬಾಭಾವೆ ಮುಂತಾದ ಮಹಾಪುರುಷರ ಮಾರ್ಗದರ್ಶನದಲ್ಲಿ ಈ ಪ್ರಸಾರಕಾರ್ಯ ಮುಂದುವರಿಯಿತು. ಸಾಮಾನ್ಯ ಜನತೆಯಲ್ಲಿಯೂ ಅಸ್ಪೃಶ್ಯತೆಯ ಬಗ್ಗೆ ಹಿಂದೆ ಇದ್ದ ಮೂಢನಂಬಿಕೆಗಳು, ಕಂದಾಚಾರಗಳು ಕಡಿಮೆಯಾಗತೊಡಗಿದ್ದವು.

ಇಂದು ದೇಶದಲ್ಲಿ ಹರಿಜನಜನೋದ್ಧಾರಕ್ಕಾಗಿ 'ಹರಿಜನ ಸೇವಕ ಸಂಘ', 'ಭಾರತೀಯ ಪರಿಗಣಿತ ವರ್ಗದ ಸಂಘ', 'ಭಾರತ ಸೇವಕ ಸಮಾಜ', 'Tata Institute of Social Sciences', 'ಈಶ್ವರ ಶರಣ ಆಶ್ರಮ' ಮುಂತಾದ ಸಂಘ ಸಂಸ್ಥೆಗಳು ಸ್ವಪ್ರೇರಿತವಾಗಿ ಕಾರ್ಯನಿರತವಾಗಿವೆ. ಈ ಸಂಸ್ಥೆಗಳು ಅಸ್ಪೃಶ್ಯತೆಯನ್ನು ನಿರ್ಮೂಲ ಮಾಡಲು ಪ್ರಚಾರ ಕ್ರಮಗಳನ್ನು ಕೈಗೊಂಡು ಹಲವಾರು ಮೇಳಗಳು, ಕೀರ್ತನೆಗಳು, ಸಹಭೋಜನ ಕೇಂದ್ರಗಳನ್ನು ಏರ್ಪಡಿಸಿ, ಅಸ್ಪೃಶ್ಯತೆಯ ವಿರುದ್ಧ ಚಲನಚಿತ್ರಗಳನ್ನು ಉಚಿತವಾಗಿ ತೋರಿಸಿ, ಪತ್ರಿಕೆಗಳನ್ನೂ, ಪುಸ್ತಕಗಳನ್ನೂ ಉಚಿತವಾಗಿ ಜನರಿಗೆ ಹಂಚಿ ತಮ್ಮತಮ್ಮ ಸಹಕಾರ ಸಹಾಯಗಳನ್ನು ನೀಡುತ್ತಿದ್ದವು.

"ಭಾರತ ಸಂವಿಧಾನ ಶಿಲ್ಪಿಯಾದ" ಡಾ. ಅಂಬೇಡ್ಕರ್‌ರವರು ಈ ವರ್ಗದವರೇ. ತಮ್ಮ ವರ್ಗದವರ ಉನ್ನತಿಗಾಗಿ ತಮ್ಮ ಇಡೀ ಜೀವನಾದ್ಯಂತ ದುಡಿದ ಮಹನೀಯರು ಇವರು. ಶತಶತಮಾನಗಳಿಂದ ಸಮಾಜದಲ್ಲಿ ತುಳಿತಕ್ಕೊಳಗಾದ ಹರಿಜನರ ದೀನ ಹೃದಯಗಳಿಗೆ ಹೊಸ ಕೆಚ್ಚನ್ನು ತುಂಬಿದವರು, ಹೊಸ ಕಿಡಿಯನ್ನು ಹತ್ತಿಸಿದವರು. ಗಾಂಧೀಜಿಯವರ ಹರಿಜನೋದ್ಧಾರ ಕಾರ್ಯಕ್ಕೆ ಹೋಲಿಸಿದರೆ ಡಾ. ಅಂಬೇಡ್ಕರ್ ಅವರ ಮಾರ್ಗ ರಾಜಸವಾದದ್ದು. ಸವರ್ಣೀಯರ ಹೃದಯ ಪರಿವರ್ತನೆಯ ಮೂಲಕ ಹರಿಜನರ ಉದ್ಧಾರವಾಗಬೇಕೆಂಬ ತತ್ತ್ವ ಅಂಬೇಡ್ಕರರಿಗೆ ಹಿಡಿಸಲಿಲ್ಲ. ಪ್ರಜಾರಾಜ್ಯದ ತತ್ತ್ವದ ಪ್ರಕಾರ ಸವರ್ಣೀಯರಿಗೆ ಸಮನಾದ ಸ್ಥಾನವನ್ನು ಪಡೆಯುವುದು ಹರಿಜನರ ಆಜನ್ಮಸಿದ್ಧವಾದ ಹಕ್ಕು ಎಂಬುದು ಅಂಬೇಡ್ಕರ್ ಅವರ ವಾದ. ಸವರ್ಣೀಯರು ಈ ಹಕ್ಕುಗಳನ್ನು ಪರಿಗಣಿಸದೇ ಹೋದರೆ ಇಡೀ ಪರಿಶಿಷ್ಟವರ್ಗ ಹಿಂದೂ ಧರ್ಮವನ್ನೇ ತ್ಯಜಿಸಿ ಇಸ್ಲಾಂ, ಕ್ರೈಸ್ತ ಮತ್ತಿತರ ಧರ್ಮವನ್ನು ಅವಲಂಬಿಸುವುದು ಎಂದು

ಅಂಬೇಡ್ಕರ್ ಅವರು ಸವರ್ಣೀಯರಿಗೆ ಬೆದರಿಕೆ ಹಾಕಿದರು. ಹೀಗೆ ದಲಿತರಾಗಿದ್ದ ಪರಿಶಿಷ್ಟ ವರ್ಗದವರಲ್ಲಿ ಅಂಬೇಡ್ಕರ್ ಕ್ಷಾತ್ರವನ್ನು ತುಂಬಿದರು. ಜೊತೆಗೆ ರಾಜಸವೂ ಬೇಕಾಗುತ್ತದೆ. ಇಂದು ಅಸ್ಪೃಶ್ಯತಾ ನಿವಾರಣೆ ತ್ವರಿತವಾಗಿ ಆಗುತ್ತಿರುವುದಕ್ಕೆ ಈ ಸಾತ್ವಿಕ ರಾಜಸ ಸಮ್ಮಿಳಿತ ಪ್ರಯತ್ನವೇ ಮುಖ್ಯ ಕಾರಣ. ಸವರ್ಣೀಯರಲ್ಲಿ ಹೃದಯ ಪರಿವರ್ತನೆ ಆಗಬೇಕು ನಿಜ. ಆದರೆ ಅಸ್ಪೃಶ್ಯರು ದೀನರಾಗಿಯೇ ಇದ್ದಿದ್ದರೆ ಅವರ ಉದ್ಧಾರದ ಜವಾಬ್ದಾರಿಯನ್ನೆಲ್ಲ ಸವರ್ಣೀಯರಿಗೆ ವಹಿಸಿದ್ದರೆ ಬಹುಶ: ಅವರ ಉದ್ಧಾರವಾಗುತ್ತಿರಲಿಲ್ಲ. ಡಾ. ಅಂಬೇಡ್ಕರ್ ಅವರಂತಹ ಮಾರ್ಗದರ್ಶನದಲ್ಲಿ ಹೋರಾಟ ನಡೆಸಿದ್ದರಿಂದ ಅಸ್ಪೃಶ್ಯತೆ ನಿವಾರಣೆ ಇಂದು ಸಾರ್ಥಕವಾಗುತ್ತಿದೆ.

ಅಸ್ಪೃಶ್ಯರು ತಾವು ಅಸ್ಪೃಶ್ಯರೆಂಬ ಭಾವನೆಯನ್ನು ಹೃದಯದಿಂದ ಕಿತ್ತೊಗೆದು ವಿಚಾರಶೀಲರಾಗಿ, ಹಿಂದಿನ ಕೆಲ ದುಷ್ಟ ಅಭ್ಯಾಸಗಳನ್ನೂ, ಕೀಳರಿಮೆಯ ಭಾವನೆಯನ್ನೂ ಬಿಟ್ಟು ಇತರ ಮಾನವರಂತೆ ಬಾಳಲು ಪ್ರಯತ್ನಿಸಬೇಕು. ಅಧಿಕ ಸಂಖ್ಯೆಯಲ್ಲಿ ವಿದ್ಯಾವಂತರಾಗಿ, ವಿಷಯ ವೈಚಾರಿಕತೆಗಳನ್ನು ಬೆಳೆಸಿಕೊಳ್ಳುವಂತಾಗಬೇಕು. ಸರಕಾರ ಒದಗಿಸಿಕೊಟ್ಟಿರುವ ಸೌಲಭ್ಯಗಳ ಪೂರ್ಣಪ್ರಯೋಜನ ಪಡೆಯಬೇಕು. ಸ್ವಾವಲಂಬಿಗಳಾಗಬೇಕು. ತಾವು ಇತರರಿಗೆ ಸರಿಸಮಾನರಾಗಿದ್ದೇವೆ ಎಂಬ ಭಾವನೆಯನ್ನು ಬೆಳೆಸಿಕೊಂಡು ತಮ್ಮ ಉದ್ಧಾರವನ್ನು ತಾವೇ ಮಾಡಿಕೊಳ್ಳಬೇಕು. ಮೂಲ ವರ್ಣ ಪದ್ಧತಿಯು ಅನೇಕ ಕಾರಣಗಳಿಗಾಗಿ ಭಾಗ ಮತ್ತು ಉಪಭಾಗಗಳಾಗಿ ವಿಭಜನೆಗೊಂಡಿತು. ಉಪಭಾಗಗಳು ಜಾತಿಗಳಾಗಿ ಪರಿವರ್ತನೆ ಗೊಂಡವು. "ಜಾತಿ ಎಂಬ ಪದವು ಆಂಗ್ಲ ಭಾಷೆಯ caste ಎಂಬ ಪದದ ಅನುವಾದವಾಗಿದೆ caste ಎಂಬುದು ಸ್ಪಾನಿಷ್ ಪದದಿಂದ ಉಗಮಗೊಂಡಿದೆ. 'Caste ಎಂದರೆ ತಳಿ', 'ಜನಾಂಗ ಅಥವಾ ಅನುವಂಶಿಕ ಗುಣಗಳ ಒಕ್ಕೂಟ ಎಂದರ್ಥ'. 'Caste ಎಂಬುದಕ್ಕೆ 'ಜಾತಿ' ಎಂಬ ಪದವು ಕನ್ನಡದಲ್ಲಿ ಬಳಕೆಗೆ ಬಂದಿದೆ"(ಎಂ. ನಾರಾಯಣ, ಸಾಮಾನ್ಯ ಸಮಾಜಶಾಸ್ತ್ರ, ೨೦೦೦, ಪುಟ-೨೫).

ಜಾತಿ ಎಂಬ ಪದಕ್ಕೆ ನಿರ್ದಿಷ್ಟವಾದ, ಖಚಿತವಾದ ಮತ್ತು ವ್ಯಾಪಕವಾದ ವ್ಯಾಖ್ಯೆಯಿಲ್ಲ. ಜಾತಿಯು ಪರಂಪರಾಗತ ಒಳಬಾಂಧವ್ಯ ಸಮೂಹವಾಗಿದ್ದು ವ್ಯಕ್ತಿಯ ಅಂತಸ್ತು ಮತ್ತು ವೃತ್ತಿಯನ್ನು ನಿರ್ಧರಿಸುತ್ತದೆ. ಭಾರತೀಯ ಸಮಾಜದಲ್ಲಿ ಅಸಂಖ್ಯಾತ ಜಾತಿ ಮತ್ತು ಉಪಜಾತಿಗಳಿವೆ. ಯಾರೇ

ಹೊರಗಿನವರು ಭಾರತದ ಜಾತಿಯ ರಚನೆಯ ಕಡೆ ಇಣುಕಿ ನೋಡಿದರೆ ಸೋಜಿಗವೆನಿಸುವುದು. ಪ್ರತಿಯೊಂದು ಜಾತಿಯು ಸಹ ಇನ್ನುಳಿದ ಜಾತಿಗಳಿಂದ ವ್ಯತ್ಯಾಸ ಹೊಂದುವಂತಹ ಸ್ಥಳೀಯ ಕೆಲವು ಗುಣಲಕ್ಷಣಗಳನ್ನು ಹೊಂದಿರುತ್ತದೆ. ಜಾತಿಯ ನಿಯಮಗಳನ್ನು ಉಲ್ಲಂಘಿಸುವುದು ಕಲ್ಪನಾತೀತವಾಗಿತ್ತು. ಜಾತಿಯ ನಿಯಮಗಳ ಉಲ್ಲಂಘನೆಗೆ ದಂಡ, ಊಟ ಕೊಡದಿರುವುದು, ದೈಹಿಕ ಚಿತ್ರ ಹಿಂಸೆ, ಬಹಿಷ್ಕಾರ ಮುಂತಾದ ಶಿಕ್ಷೆಗಳನ್ನು ವಿಧಿಸಲಾಗುತ್ತಿತ್ತು. ಜನರು ಮೊದಲು ತಮ್ಮ ಜಾತಿಗೆ ಬದ್ಧರಾಗಿದ್ದು ನಂತರ ತಮ್ಮ ಹಳ್ಳಿಗೆ ಅಥವಾ ಸ್ಥಳಕ್ಕೆ ಬದ್ಧರಾಗಿರುತ್ತಿದ್ದರು.

ಪ್ರತಿಯೊಂದು ಜಾತಿಯೂ ತನ್ನದೇ ಆದ ಹೆಸರು, ನಿಯಮಗಳು ಮತ್ತು ಸಾಂಸ್ಕೃತಿಕ ಆಚರಣೆಗಳನ್ನು ಹೊಂದಿತ್ತು. ಹುಟ್ಟು, ವಿವಾಹ ಮತ್ತು ಸಾವಿನ ಬಗೆಗಿನ ಸಂಪ್ರದಾಯಗಳು ಜಾತಿಯಿಂದ ಜಾತಿಗೆ ವ್ಯತ್ಯಾಸ ಹೊಂದುತ್ತವೆ. ಒಂದು ಜಾತಿಯು ಮತ್ತೊಂದರಿಂದ ಭಿನ್ನವಾಗಿದ್ದರೂ ಅವೆಲ್ಲವೂ ಸಮಾಜದಲ್ಲಿ ಐಕ್ಯವಾಗಿದೆ.

ಜಾತಿ ಪದ್ಧತಿಯ ಸಮಾಜಶಾಸ್ತ್ರೀಯ ದೃಷ್ಟಿಯಲ್ಲಿ, ಒಂದು ಸಮಾಜದಲ್ಲಿನ ಸಾಮಾಜಿಕ ಶ್ರೇಣೀಕರಣ ಮತ್ತು ಸಾಮಾಜಿಕ ಅಸಮಾನತೆಯನ್ನು ಪರಿಗಣಿಸುತ್ತದೆ. ಜಾತಿ ಎನ್ನುವುದಕ್ಕೆ ಸರ್ವಸಮ್ಮತವಾದ ವ್ಯಾಖ್ಯೆ ನೀಡುವುದು ಸಾಧ್ಯವಿಲ್ಲ. ಆದರೆ ಜಾತಿಯ ಅನೇಕ ವಿಭಿನ್ನ ಅಂಶಗಳ ಮೇಲೆ ಕೇಂದ್ರೀಕರಿಸಿದ ಹಲವಾರು ವ್ಯಾಖ್ಯೆಗಳಿವೆ. ಅವುಗಳಲ್ಲಿ ಪ್ರಮುಖವಾದ ವ್ಯಾಖ್ಯೆಯನ್ನು ಗಮನಿಸಬಹುದು. ಸಿ.ಎಚ್. ಕೂಲೆಯವರ ಪ್ರಕಾರ "ಒಂದು ವರ್ಗ ಸ್ವಲ್ಪ ಮಟ್ಟಿಗೆ ಕಟ್ಟುನಿಟ್ಟಾಗಿ ಅನುವಂಶಿಯವಾದಾಗ, ಅದನ್ನು ನಾವು ಜಾತಿ ಎಂದು ಕರೆಯಬಹುಹು."(ಜಿ. ಸುಬ್ರಮಣ್ಯ, ಭಾರತೀಯ ಸಮಾಜದ ಸಮಾಜಶಾಸ್ತ್ರ, ೨೦೦೫, ಪುಟ-೨೦) ಕ್ಯಾಥಲೀನ್ ಗೌಮ್ ಪ್ರಕಾರ, "ಜಾತಿ, ಹುಟ್ಟಿನ ಸ್ಥಾನಮಾನದ ಆಧಾರದ ಮೇಲೆ ಗುಂಪುಗಳ ವ್ಯವಸ್ಥೆ, ಸಾಮಾನ್ಯವಾಗಿ ಸ್ವಗೋತ್ರ ಬಾಂಧವ್ಯದ ಅದೂ ಒಂದು ಕಸುಬಿನೊಂದಿಗೆ ಸಂಬಂಧ ಹೊಂದಿರುತ್ತದೆ"(ಜಿ. ಸುಬ್ರಮಣ್ಯ, ಭಾರತೀಯ ಸಮಾಜದ ಸಮಾಜಶಾಸ್ತ್ರ, ೨೦೦೫, ಪುಟ-೨೦). ಮಹಾತ್ಮಗಾಂಧೀಜಿವರ ಪ್ರಕಾರ "ಅದು ಜಾತಿವ್ಯವಸ್ಥೆಯ ಅತ್ಯಂತ ದ್ವೇಷಪೂರಿತ ಅಭಿವ್ಯಕ್ತಿ"(ಜಿ. ಸುಬ್ರಮಣ್ಯ, ಭಾರತೀಯ ಸಮಾಜದ ಸಮಾಜಶಾಸ್ತ್ರ, ೨೦೦೫, ಪುಟ-೨೦) ಅನೇಕ ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಧಾರ್ಮಿಕ ಅನರ್ಹತೆಗಳಿಂದ ಸಾಮಾನ್ಯ ಜನರು ನರಳುತ್ತಿದ್ದಾರೆ. ಜನರಲ್ಲಿ ಆರೋಗ್ಯಕರವಾದ ಸಂಪರ್ಕಗಳು ಮತ್ತು ಸ್ನೇಹಪೂರ್ಣ ಸಂಬಂಧಗಳ

ಬೆಳವಣಿಗೆಯನ್ನು ತಡೆಗಟ್ಟಿತು. ಜಾತಿ ಜಾತಿಗಳ ನಡುವೆ ವೈಷಮ್ಯ ಶತ್ರುತ್ವ ಮತ್ತು ಸಂಘರ್ಷಗಳು ಹುಟ್ಟಿಕೊಳ್ಳುತ್ತವೆ. ಜಾತಿಯು ಏಕತೆ ಮತ್ತು ಭ್ರಾತೃತ್ವದ ಬೆಳವಣಿಗೆಯನ್ನು ಕುಂಠಿತಗೊಳಿಸುತ್ತದೆ. ವ್ಯಕ್ತಿಯ ಸಾಮರ್ಥ್ಯ, ವೈಯಕ್ತಿಕ ಸಾಹಸ ಇವುಗಳು ಅರ್ಥಹೀನವೆಂದು, ಇದು ದೈವಿಕವಾದ ವ್ಯವಸ್ಥೆ ಎಂದು ನಂಬಲಾಗಿದೆ ಹೀಗೆ ಜನರು ಸಂಪ್ರದಾಯಶೀಲರಾಗುತ್ತಾರೆ.

ಮಂಡ್ಯ ಜಿಲ್ಲೆ ಎಲ್ಲಾ ಧರ್ಮಗಳನ್ನು ಮತ್ತು ನೂರಾರು ಜಾತಿಗಳನ್ನು ತನ್ನೊಳಗೆ ಅಡಗಿಸಿಟ್ಟುಕೊಂಡು ವೈವಿಧ್ಯತೆಯನ್ನು ಹೊಂದಿರುವ ಜಿಲ್ಲೆ. ಇಲ್ಲಿಯೂ ಕೂಡ ಜಾತಿಗಳ ನಡುವಿನ ಸಂಘರ್ಷ, ಮೇಲ್ಜಾತಿಯವರಿಂದ ತಳವರ್ಗದವರ ಶೋಷಣೆ ಒಂದು ಕಾಲಕ್ಕೆ ಪ್ರಬಲವಾಗಿದ್ದವು. ಇಂತಹ ಅಸಮಾನತೆ ಅನ್ಯಾಯಗಳನ್ನು ಜಿಲ್ಲೆಯ ಕಥೆಗಾರರು ತಮ್ಮ ಕಥಾವಸ್ತುವಾಗಿ ಬಳಸಿಕೊಂಡು ಕಥೆಗಳನ್ನು ರಚಿಸಿದ್ದಾರೆ. ಆ ಮೂಲಕ ತಮ್ಮ ಅಭಿವ್ಯಕ್ತಿಯನ್ನು ನೀಡಿ ಸಮಾಜದ ಇಂತಹ ಅನಿಷ್ಟಗಳನ್ನು ತಡೆದು ಹಾಕುತ್ತೇವೆ ಎಂಬ ಸಂದೇಶಗಳನ್ನು ಸಾರಿದ್ದಾರೆ.

ಮೇಲ್ವರ್ಗದ ಅನ್ಯಾಯ ದಬ್ಬಾಳಿಕೆಯಿಂದ ನರಳುತ್ತಿರುವ 'ದಲಿತ' ವರ್ಗದ ಚಿತ್ರಣದೊಡನೆ ಸಾಮಾಜಿಕ ಆರ್ಥಿಕ ಪರಿವರ್ತನೆಯ ಅನಿವಾರ್ಯತೆಯನ್ನು ಜೀ.ಶಂ. ಪರಮಶಿವಯ್ಯ ಅವರ **'ಮಬ್ಬು ಜಾರಿದ ಕಣಿವೆಯಲ್ಲಿ'** ಕಥೆಯಲ್ಲಿ ಗುರುತಿಸಬಹುದು. "ನಗರಗಳಲ್ಲಿದ್ದುಕೊಂಡು ಕಾಣಬಲ್ಲರೇ ಹೊರತು, ಸುಖ ದು:ಖಗಳ ಆಳಕ್ಕೆ ಇಳಿಯಲಾರರು. ಗೊರೂರನ್ನು ಬಿಟ್ಟರೆ ಈ ಬಗೆಯ ಕಥೆಗಾರರು ನಮ್ಮಲ್ಲಿ ಮತ್ತೊಬ್ಬರು ಬರಲಿಲ್ಲವೆಂದೇ ಹೇಳಬೇಕು. ಪರಮಶಿವಯ್ಯ ಮತ್ತು ಸುಧಾಕರ ಸ್ವಲ್ಪವಾದರೂ ಈ ಕೊರತೆಯನ್ನು ತುಂಬಲು ಪ್ರಯತ್ನಿಸುತ್ತಿರುವ ಈಚಿನ ಲೇಖಕರಾಗಿದ್ದಾರೆ."(ಜೀ.ಶಂ. ಪರಮಶಿವಯ್ಯ, ಮಬ್ಬುಜಾರಿದ ಕಣಿವೆಯಲ್ಲಿ, ೧೯೮೮, ಪುಟ-೧೩೮) ಮಬ್ಬು ಜಾರಿದ ಕಣಿವೆಯಲ್ಲಿ ಎಂಬ ಕಥೆಯ ವಸ್ತು ಜೀತದ ಸಮಸ್ಯೆಯನ್ನು ಕುರಿತದ್ದು; ಉತ್ತಮ ವರ್ಗದವರ ಕಾಲ್ತುಳಿತಕ್ಕೆ ಸಿಕ್ಕಿ, ಆ ಮೂಲಕ ಆರ್ಥಿಕ ಮುಗ್ಗಟ್ಟಿನ ಹಿಡಿತದಿಂದ ಪಾರಾಗಲಾರದೆ ತಲೆತಲಾಂತರದಿಂದ ಜೀತದ ಚಕ್ರವ್ಯೂಹಕ್ಕೆ ತಲೆಕೊಡುತ್ತ ಬಂದ, ಸಮಾಜದಲ್ಲಿ ಮುಟ್ಟಬಾರದವರು ಎನ್ನಿಸಿಕೊಂಡ ವರ್ಗವೊಂದರ ಶೋಚನೀಯ ಸಂಗತಿಯನ್ನು ಕುರಿತದ್ದು.

ಇದರ ಕಥಾಸಾರ ಇಷ್ಟು; 'ರಾಮಜ್ಜ ತನ್ನ ಮೊಮ್ಮಗ-ಗಂಡ ಸತ್ತು ತೌರಿನಲ್ಲೇ ಇರುವ ಮಗಳ ಮಗನನ್ನು, ತಾನು ಮೊದಲಿದ್ದ ಮನೆಯಲ್ಲಿ ಜೀತಕ್ಕಿರಿಸಲು ಕರೆತರುತ್ತಾನೆ. ಆದರೆ ಮುಂಜಾನೆಯ ಹೊತ್ತಿಗೆ ಅವನ

ನಿರ್ಧಾರದಲ್ಲಿ ಬದಲಾವಣೆಯಾಗಿ ಮೊಮ್ಮಗನನ್ನು ಹೊರಡಿಸಿಕೊಂಡು ಊರಿನ ಹಾದಿ ಹಿಡಿಯುತ್ತಾನೆ.

ಮುಖ್ಯವಾಗಿ, ಈ ಕಥೆ ವಾತಾವರಣ ಪ್ರಧಾನವಾದದ್ದು ಹಾಗೂ ಸಾಂಕೇತಿಕವಾದುದು. ಕಥೆ ಆರಂಭವಾಗುವುದು ಸಂಜೆಯಲ್ಲಿ; ಮುಕ್ತಾಯವಾಗುವುದು ಮುಂಜಾನೆಯಲ್ಲಿ. ಸಂಜೆ ಮಬ್ಬು ಆವರಿಸುವುದಕ್ಕೆ, ಮುಂಜಾನೆ ಮಬ್ಬು ಜಾರುವುದಕ್ಕೆ ಮುನ್ಸೂಚನೆ. ಆದ್ದರಿಂದ ಮುಸ್ಸಂಜೆಯ ಮಬ್ಬು, ಮುಂಜಾನೆಯ ಮಬ್ಬು ಇಲ್ಲಿ ಸಾಂಕೇತಿಕವಾಗಿದೆ. ಸುರ್‍ಯೋದಯವಾದ ಕೂಡಲೇ ಕಿರಣಗಳ ಬೆಳಕನ್ನು ಮೊದಲು ಮುಡಿದುಕೊಳ್ಳುವವು ಎತ್ತರವಾದ ಬೆಟ್ಟಗುಡ್ಡಗಳು; ಬಹಳ ನಿಧಾನವಾಗಿ ಕಣಿವೆ ಕಂದರಗಳು. ಹಾಗೆಯೇ ಬೆಟ್ಟಗುಡ್ಡಗಳಂತೆ ಮೇಲೇರಿ ನಿಂತ ಕಣಿವೆ ಉತ್ತಮ ವರ್ಗದವರ ಅಜ್ಞಾನದ ಮಬ್ಬು ಜಾರಿದೆ, ಶೀಘ್ರವಾಗಿ ಜಾರುತ್ತಿದೆ. ಬಹಳ ನಿಧಾನವಾಗಿ ಹೊತ್ತು ಮೇಲೇರಿದ ಮೇಲೆ, ಕಣಿವೆಯಾಳದಲ್ಲಿ ಕೊಳೆಬಿದ್ದ ಹಿಂದುಳಿದವರ ಅಜ್ಞಾನದ ಮಬ್ಬು ಜಾರುತ್ತಾ ಬರುತ್ತದೆ. ಆದ್ದರಿಂದ ಕಥೆಯಲ್ಲಿ ಬರುವ ಬೆಟ್ಟಗುಡ್ಡಗಳು ಈ ನಿಟ್ಟಿನಿಂದ ಅರ್ಥಪೂರ್ಣವೆನ್ನಿಸುತ್ತವೆ.

ಕಥೆಯ ಪ್ರಾರಂಭದಲ್ಲಿ ಬರುವ ವರ್ತಮಾನ ಕಾಲದ ನಾಯಿಯ ಪ್ರಸ್ತಾಪ ತುಂಬ ಅರ್ಥವತ್ತಾಗಿದೆ. ಮೊಮ್ಮಗನೊಡನೆ ಜಗುಲಿಯ ಮೇಲೆ ಊಟಮಾಡುತ್ತಿದ್ದ ರಾಮಜ್ಜ, ಎದುರುಗಡೆ ಬಾಲವಲ್ಲಾಡಿಸುತ್ತ, ಜೊಲ್ಲು ಸುರಿಸುತ್ತ ಕುಳಿತಿದ್ದ ನಾಯಿಗೂ ಒಂದು ತುತ್ತು ಹಾಕುತ್ತಾನೆ ಕನಿಕರದಿಂದ. "ಬಾಲವನ್ನು ಒಮ್ಮೆ ನೆಲಕ್ಕೆ ಬಡಿದು, ಕಣ್ಣನ್ನು ಅರಳಿಸಿ, ಕೃತಜ್ಞತೆಯನ್ನು ಸೂಚಿಸಿತು ಆ ನಾಯಿ, ನಾಲ್ಕು ತುತ್ತು ಅನ್ನದ ಋಣಕ್ಕಾಗಿ"(ಜೀ.ಶಂ. ಪರಮಶಿವಯ್ಯ, ಮಬ್ಬುಜಾರಿದ ಕಣಿವೆಯಲ್ಲಿ, ೧೯೮೮, ಪುಟ-೧) ಎಂಬ ನಾಯಿಯ ವರ್ತನೆಯ ವರ್ಣನೆ ಜೀತದಾಳುಗಳ ಶೋಚನೀಯ ಸ್ಥಿತಿಗೆ ದ್ಯೋತಕವಾಗಿ ಬಿಡುತ್ತದೆ. "ಅದೇಯ ನಿನ್ನ ಹೊಟ್ಟೇಲಿ ಅವು ಪಾಪಮಾಡಿ ಹುಟ್ಟಬೇಕಾಗಿತ್ತು ಅಷ್ಟೆಯಾ... ನಮ್ಮ ಮನೆ ಮುಂದೆ ಕೂಲ್ಯೊ ನಾಲ್ಯೊ ಮಾಡ್ಕೊಂಡು ಜೀವ್ನ ಮಾಡ್ಕೊಂಡ್ರೆ ಆಗ್ದು ಅಂತ ಕಾಣ್ತದೆ.... ನಾಕು ಜನಕೆ ಅಡಿಯಾಳಾಗಿ ಬಾಳೋದ್ಯಾಕಪ್ಪ? ನಮ್ಮವ್ವ ಸಾಯ್ವಾಗ ಕೊನೆವರ್‍ಗು ಹೇಳೇ ಸತ್ಲು.... 'ನೆರ್‍ಮನೆ ಜೀಕುಕ್ಕಾಕಬ್ಯಾಡಿ ಮಕ್ಕಳ... ನಮ್ಮನೇ ಗಂಜಿ ಕುಡುದ್ರು ಅಂತ ಬಾಳ್ಮೆ ಬ್ಯಾಡ' ಅಂತ... ನೀನೇ ಅನುಭೋಗಿಸಿ ಬಂದಿದ್ದೀಯ.... ಕೊನೆಯವರ್‍ಗೂ ಜಗ್ಲಿಲಿ ಬಿದ್ದಿದ್ದು... ಸಳೀಲಿ ಮಳೇಲಿ ಸೂರ್‍ಗಿ ಗೂರ್‍ಲು ಬಂದು ಒದ್ದಾಡ್ತಿದ್ದೀಯ..."

(ಜೀ.ಶಂ.ಪರಮಶಿವಯ್ಯ, ಮಬ್ಬುಜಾರಿದ ಕಣಿವೆಯಲ್ಲಿ, ೧೯೮೮, ಪುಟ-೧)ರಾಮಜ್ಜನ ಮಗಳ ಈ ಮಾತುಗಳು ಗಂಜಿ ಕುಡಿದರೂ ಇಚ್ಛೆಯಿಂದ ಸ್ವತಂತ್ರವಾಗಿ ಬದುಕುವಾಸೆ ಹಾಗೂ ಜೀತದ ಬದುಕು ಪ್ರಾಣಿಗಳಗಿಂತ ಕಡೆಯೆಂಬುದನ್ನು ಮನಗಾಣಿಸುತ್ತದೆ.

ರಾಮಜ್ಜ ಬೆಚ್ಚಿದ! ತಾನಾಯಿತು, ತನ್ನ ಮಕ್ಕಳಾಯಿತು, "ಮೊಮ್ಮಗನೂ... ತಲೆತಲಾಂತರಕ್ಕು... ಎಂಥ ಮಂಕು ಕವಿದಿದೆ: ಬದುಕಿನ ಬಳ್ಳಿಗೆ ಅದೇನು ವಿಷದಕ್ರಿಮಿಗಳು ಬಿದ್ದಿವೆ; ಈ ಜಗಲಿಯಲ್ಲಿ, ಈ ಭೀಕರ ರಾತ್ರಿಯಲ್ಲಿ ಪುಟ್ಟರಂಗನೊಬ್ಬನನ್ನೇ ಮಲಗಿಸಿ, ಮನೆಯಲ್ಲಿ ಬೆಚ್ಚಗೆ ಮಲಗುವ ಪಾಪಬುದ್ಧಿ.... ತಾನೇಕೆ ಹುಚ್ಚು ನಿರ್ಧಾರಕ್ಕೆ ಬಂದೆ?"(ಜೀ.ಶಂ.ಪರಮಶಿವಯ್ಯ, ಮಬ್ಬುಜಾರಿದ ಕಣಿವೆಯಲ್ಲಿ, ೧೯೮೮, ಪುಟ-೧೦) ಎಂದು ರಾಮಜ್ಜ ತಾನೂ ಜೀತಕ್ಕಿದ್ದಾಗ ಪಟ್ಟ ಕಷ್ಟಗಳನ್ನು ನೆನೆದು ಮೊಮ್ಮಗನನ್ನು ಜೀತಕ್ಕೆ ಸೇರಿಸಲು ಬಂದವನು ತನ್ನ ನಿರ್ಧಾರ ಬದಲಾಯಿಸಿ ಮೊಮ್ಮಗನನ್ನು ತನ್ನ ಊರಿನ ಕಡೆಗೆ ಮಬ್ಬು ಜಾರಿದ ಕಣಿವೆ ಕಂದರಗಳಲ್ಲಿ ತನ್ನ ಸ್ವತಂತ್ರ ಹಾದಿಯ ಕಡೆ ಹೊರಟ. ಕಥೆಗಾರರು ಜೀತ ಪದ್ಧತಿಯ ಅಂತ್ಯವನ್ನು ತಮ್ಮ ಕಥೆಯ ಮೂಲಕ ವ್ಯಕ್ತಪಡಿಸುವ ಪಯತ್ನ ನಿಜಕ್ಕೂ ರೋಮಾಂಚನ.

ಜಿ. ವೆಂಕಟಯ್ಯ ಅವರ **'ಕಂಚಿ ಬೇಲದ ಹಣ್ಣು'** ಕಥೆಯಲ್ಲಿ ಒಂದು ವರ್ಗದ ಜನ ಮತ್ತೊಂದು ವರ್ಗದ ಜನರನ್ನು ಶೋಷಿಸುವುದಾಗಿದೆ. ಈ ಕಥೆಯಲ್ಲಿ ಬರುವ ಪಟೇಲ ದರ್ಪದ ಪತೀಕವಾಗಿದ್ದಾನೆ. ಶೋಷಣೆ ಎನ್ನವುದು ವಿಭಿನ್ನ ರೀತಿಯಲ್ಲಿ ಆಗುತ್ತದೆ. ಪಟೇಲ ಸೊಂಬಯ್ಯನ ಮೇಲೆ ಮಾನಸಿಕ ಹಿಂಸೆಯನ್ನು ನೀಡುತ್ತಾನೆ. ನಿನ್ನ ಲೈಸನ್ಸ್ ಇಲ್ಲದೆ ಯಾವ ರೀತಿ ಬೇಟೆ ಮಾಡಿದೆ, ಪೋಲಿಸಿಗೆ ಹಿಡಿದು ಕೊಡುತ್ತೇನೆಂದು ಭಯ ಹುಟ್ಟಿಸಿ ಶೋಷಿಸುತ್ತಾನೆ. ಸೊಂಬಯ್ಯನ ಬೇಟೆ ನಾಯಿ ಪಟೇಲರ ಟಗರನ್ನು ಕಚ್ಚುತ್ತದೆ. ಇದರಿಂದ ಆಘಾತಗೊಂಡ ಸೊಂಬಯ್ಯ ತಾನೇ ಗುಂಡಿಟ್ಟುಕೊಂಡು ದುರುಂತಕ್ಕೆ ಒಳಗಾಗುತ್ತಾನೆ.

ಬೆಸಗರಹಳ್ಳಿ ರಾಮಣ್ಣನವರ **'ಜೀತ'** ಕಥೆಯಲ್ಲಿ ಜಾತಿ ಸಂಘರ್ಷವನ್ನು ಬಿಂಬಿಸುತ್ತದೆ. ಈ ಕಥೆಯಲ್ಲಿ ಬರುವ ಚಿಕ್ಕರಾಮು, ಸಾಹುಕಾರ್ ದೇವೀರಯ್ಯನವರಲ್ಲಿ ಜೀತಕ್ಕಿರುತ್ತಾನೆ. ದನಗಳನ್ನು ಮೇಯಿಸಲು ಬಂದ ಚಿಕ್ಕರಾಮ ತನ್ನ ಆಯಾಸವನ್ನು ನೀಗಿಕೊಳ್ಳಲು ಮರದಡಿ ಕುಳಿತಾಗ, ಆಯಾಸಗೊಂಡ ಚಿಕ್ಕರಾಮ ಮಲಗುತ್ತಾನೆ. ಇದನ್ನು ಕಂಡ ಸಾಹುಕಾರ ದೇವೀರಯ್ಯ "ಲೋ ಸೂಳೇಮಗನೇ, ಇದ್ಕೆ ಏನ್ಲ ನಿಂಗೆ ವರ್ಷಕ್ಕೆ ಅರವತ್ತು ರೂಪಾಯಿ ಕೊಟ್ಟು, ಹಿಟ್ಟು ಬಟ್ಟೆ ಕೊಟ್ಟು ಜೀತಕ್ಕೆ ಮಡಿಕೊಂಡಿರೋದು. ಕಬ್ಬಿನ

ಗದ್ದೆಗೆ ನುಗ್ಗಿ ಎರಡು ಪಾತಿ ನುಣ್ಣಗೆ ಮೇಯ್ಕೊಂಡವಲ್ಲೋ ಎಂದು ಕಾಲಿನ ಮೇಲೆ, ಮೈಮೇಲೆ ಬಾರಿಸತೊಡಗಿದ."(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೨, ಪುಟ-೮೨). ಇದು ದೇವೀರಯ್ಯನ ದೌರ್ಜನ್ಯವನ್ನು ಬಿಂಬಿಸುತ್ತದೆ. ಇಲ್ಲಿ ಕಥೆಗಾರರು ಉತ್ತಮ ಜಾತಿಗೆ ಸೇರಿದವನು, ಕೆಳಜಾತಿ ಅಥವಾ ದಲಿತರನ್ನು ಶೋಷಿಸುವ-ಹಿಂಸಿಸುವ ಸಮಕಾಲಿನ ಸಂದರ್ಭವನ್ನು ಬಿಂಬಿಸಿದ್ದಾರೆ. ಕೀಳು ಕುಲದಲ್ಲಿ ಹುಟ್ಟಿ ಇನ್ನೊಬ್ಬರ ಮನೆಯ ಜೀತಕ್ಕೆ ಸೇರಿ ಅಲ್ಲಿ ದನಗಳಿಗಿಂತ ಕಡೆಯಾಗಿ ಕಂಡದ್ದನ್ನು ಪ್ರತಿಭಟಿಸಿರುವುದನ್ನು ಬೆಸಗರಹಳ್ಳಿ ರಾಮಣ್ಣನವರ 'ಜೀತ' ಕಥೆಯಲ್ಲೂ ಕಾಣಬಹುದು. 'ಜೀತ ಪದ್ಧತಿಯು ಸಮಾಜದ ಅನಿಷ್ಠ ಪದ್ಧತಿಗಳಲ್ಲಿ ಇದೂ ಒಂದು. ಪ್ರಪಂಚದ ಎಲ್ಲಾ ಕಡೆ ಇರುವಂತೆ ಮಂಡ್ಯ ಜಿಲ್ಲೆಯಲ್ಲಿಯೂ ಹಿಂದೆ ಜೀತ ಪದ್ಧತಿ ಇದ್ದುದನ್ನು ಕಾಣಬಹುದು. 'ಜೀತ' ಕಥೆಯಲ್ಲಿ ಚಿಕ್ಕರಾಮ ಸಾಹುಕಾರ ದೇವೀರಯ್ಯನ ಬಳಿ ವರ್ಷಕ್ಕೆ ಅರವತ್ತು ರೂಪಾಯಿಗೆ ಜೀತಕ್ಕಿರುತ್ತಾನೆ. ಬೆಳಗಾಗುವುದಕ್ಕೆ ಮುಂಚೆಯೇ ಮುವ್ವತ್ತು ಮಂಕರಿಯಷ್ಟು ಕಸಗುಡಿಸಿ, ಹೂತ್ತು ತಿಪ್ಪೆಗೆ ಹಾಕಿ ಆಮೇಲೆ ಒಂದು ಚೀಲ ಹಸಿರು ಹುಲ್ಲನ್ನು ಕೂಯ್ದು ಬಂದಿದ್ದುದರಿಂದ ಗಾಢವಾದ ನಿದ್ರೆಗೆ ಜಾರಿ ದನಗಳು ದೇವೀರಯ್ಯನ ಕಬ್ಬಿನ ಗದ್ದೆಗೆ ನುಗ್ಗಿರುತ್ತವೆ. ಇದನ್ನು ಕಂಡ ದೇವಿರಯ್ಯ ಕೈಯಲ್ಲಿ ಸರ್ವೇ ಚಬ್ಬೆಯನ್ನು ಹಿಡಿದು ಕಾಲಿನ ಮೇಲೆ, ಮೈಮೇಲೆ ಬಾರಿಸುವರು. ಏಟು ಬಿದ್ದ ಕಡೆಯಲ್ಲಿ ಬಾಸುಂಡೆ ಸುಲಿದುಕೊಂಡು ಬರುತ್ತಿತ್ತು. ಇದು ದೇವೀರಯ್ಯನ ದೌರ್ಜನ್ಯವನ್ನು ತೋರಿಸುತ್ತದೆ. ಹೆದರಿ ಎದ್ದ ಚಿಕ್ಕರಾಮ ಕಬ್ಬಿನ ಗದ್ದೆಗೆ ನುಗ್ಗಿದ. ಆಗ 'ನಿನ್ನ ಇವತ್ತು ಕೋದಂಡ ಎತ್ತದೇ ಹೋದ್ರೆ ನನ್ನ ಕುಲಕ್ಕೆ ಅವಮಾನ'. ಇಲ್ಲಿ ದೇವೀರಯ್ಯ ತನ್ನ ಅಂತಸ್ತಿನ ಅಥವಾ ಜಾತಿಯ ಶ್ರೇಷ್ಠತೆ, ಅಧಿಕಾರಶಾಹಿಯ ವರ್ಗದ ಪ್ರತಿಬಿಂಬವಾಗಿ ಕಾಣಿಸುತ್ತಾನೆ. ದನವನ್ನೋ, ಕುರಿಯನ್ನೋ ಓಡಾಡಿಸಿ ಹಿಡಿಯುವಂತೆ ಚಿಕ್ಕರಾಮನನ್ನು ಹಿಡಿದು ರಕ್ತ ಜಿನುಗುವಂತೆ ಬಾರಿಸುತ್ತಿರುವ ಚಿತ್ರಣವು ಓದುಗನ ಮನಸ್ಸನ್ನು ಕಲಕುತ್ತದೆ. ಹಾಗೂ ನಮ್ಮ ಸಮಾಜದಲ್ಲಿ ಗಟ್ಟಿಯಾಗಿ ಬೇರು ಬಿಟ್ಟಿರುವ ಜಾತಿ ವ್ಯವಸ್ಥೆಯ ವಾಸ್ತವತೆಯನ್ನು ಕಣ್ಣು ಮುಂದೆ ನಿರೂಪಿಸಿದಂತೆ ಕಾಣುತ್ತದೆ. ಈ ಕಥೆಯಲ್ಲಿ ಚಿಕ್ಕರಾಮನ ಅಣ್ಣ ಶಿವಲಿಂಗಣ್ಣರ ಮನೆಯಲ್ಲಿ ಜೀತಕ್ಕಿರುವ ಅಣ್ಣ ಪುಟ್ಟಸ್ವಾಮಿಯು 'ನೀ ಮನ್ಸನೋ ದನವಯ್ಯ' ಎಂದು ದೇವೀರಯ್ಯನ ಎತ್ತಿದ ಕೈಯನ್ನು ಹಿಡಿದುಕೊಂಡ. ಇದು ಶೋಷಣೆಯಿಂದ ಎಚ್ಚೆತ್ತ ಪ್ರತಿಭಟನೆಯ ಧ್ವನಿಯಾಗಿದೆ. ಚಿಕ್ಕರಾಮನನ್ನು ಇನ್ನು ಮುಂದೆ

ದೇವೀರಯ್ಯನ ಮನೆಯಲ್ಲಿ ಜೀತಕ್ಕೆ ಇರುಸುವುದಿಲ್ಲವೆಂದು ಪುಟ್ಟಸ್ವಾಮಿ ತಮ್ಮನನ್ನು ಕರೆದುಕೊಂಡು ಹೋಗುವುನ್ನು ಗಮನಿಸಿದರೆ ದಬ್ಬಾಳಿಕೆಯ ವಿರುದ್ಧ ವಿರೋಧಿಸುವ ಧ್ವನಿಯಾಗಿದೆ. ಪುಟ್ಟಸ್ವಾಮಿಯ ತಮ್ಮನ ಪರಿಸ್ಥಿತಿಯನ್ನು ಕಂಡು ಕೀಳು ಕುಲದಲ್ಲಿ ಹುಟ್ಟಿದ್ದಕ್ಕೆ ಏಳು ಜನ್ಮಕ್ಕೂ ಈ ಜನ್ಮ ಬೇಡವೆನ್ನುವುದನ್ನು ಸೂಕ್ಷ್ಮವಾಗಿ ನೋಡಿದರೆ ಕೆಳಜಾತಿಯಲ್ಲಿ ಹುಟ್ಟಿ ಅವರು ಪಟ್ಟ ಕಷ್ಟಗಳು, ಶೋಷಣೆ, ದೌರ್ಜನ್ಯಗಳಿಗೆ ಲೆಕ್ಕವಿಲ್ಲವೆಂದೆ ಹೇಳಬೇಕು. ಪುಟ್ಟಸ್ವಾಮಿಯ ತಾಯಿ ಮೂಲಕ ಕಥೆಗಾರರು ಸಮಾಜದ ಬದಲಾವಣೆಯ ಸ್ಥಿತಿಯನ್ನು ಹೇಳುತ್ತಾರೆ. ಅದೇನೆಂದರೆ "ಹಾಳು ಜನ ಕಾಲದಿಂದಲೂ ನಮ್ಮನ್ನು ಜೀತದ ಮನೆಯೋರು, ವಂಶದೋರು ಅಂತ್ಲೇ ಕರ್ದು ರೂಢಿ. ಇನ್ನಾದ್ರು ಅದು ನಿಲ್ಲಲ್ಲಿ" ಎಂಬುದು ಸಮಾಜದಲ್ಲಿ ಬದಲಾವಣೆಯ ಅಂಶವನ್ನು ಗುರುತಿಸಬಹುದಾಗಿದೆ. ಪುಟ್ಟಸ್ವಾಮಿಯ ಮಾತಿನ ಮೂಲಕ ಶೋಷಣೆಯ ವಿರುದ್ಧದ ಧ್ವನಿಯನ್ನು ನಿರೂಪಿಸಲಾಗಿದೆ. 'ಸಮಯಕ್ಕೆ ಸರಿಯಾಗಿ ಮಚ್ಚೋ ಕೊಡಲಿಯೋ ಸಿಕ್ಕದ್ರೆ ಅವನಪ್ಪನ್ನ ಮಾಡ್ತಿದ್ದೆ.' ಈ ಮಾತುಗಳು ನೊಂದ ಮನಸ್ಸಿನ ಮತ್ತು ಪ್ರತಿರೋಧದ ಮಾತುಗಳಾಗಿವೆ. ಕಥೆಗಾರರು ನಮ್ಮ ಸಮಾಜದಲ್ಲಿ ಜೀತಕ್ಕಿರುವರ ಬದುಕನ್ನು ಹಾಗೂ ಅದರಿಂದ ಮುಕ್ತಿ ಪಡೆಯಬೇಕು ಎಂಬ ಬಂಡಾಯ ಧೋರಣೆಯನ್ನು ವ್ಯಕ್ತಪಡಿಸಿದ್ದಾರೆ.

ಎಚ್.ಎಲ್ ನಾಗೇಗೌಡರ **'ಏಡಿ ಕಚ್ಚಿದ ಕೈ'** ಕಥೆಯಲ್ಲಿ ಪೂಜಾರಿ ಪುಟ್ಟಯ್ಯನಿಗೆ ಹಿಗ್ಗೇನಳ್ಳಿ(ನಳ್ಳಿ) ಹಿಡಿಯಲು ಹೋಗಿ ಹೆಬ್ಬೆರಳು ಮತ್ತು ಕಿರು ಬೆರಳುಗಳಿಗೆ ನಳ್ಳಿ ಕೊಂಡಿಗಳು ಚುಚ್ಚಿಕೊಂಡಿದ್ದು ಅವುಗಳನ್ನು ಬಿಡಿಸಲು ಕಥೆಗಾರರು ಹೇಳುವಂತೆ ನನ್ನೂರಿನ ಒಬ್ಬಬ್ಬೊರು ಒಂದು ಸಲಹೆ ನೀಡುತ್ತಾರೆ. ಅದರಲ್ಲಿ "ಉಳಿ ಸುತ್ತಿಗೆ ತಕ್ಕೊಂಡು ಒಂದು ಕಡಿಂದ ಕೊಚ್ಚಿದರೆ ಹ್ಯಂಗೆ?" ಇದು ಅಗಸರ ತಿಮ್ಮನ ಸಲಹೆ. ಇದ್ದುದರಲ್ಲಿ ಇದೇ ಒಳ್ಳೆಯ ಸಲಹೆ ಆಗಿತ್ತು. ಆದರೆ ಅಗಸನ ಸಲಹೆ ಎಂದು ತಾತ್ಸಾರವಾಗಿ ಕಂಡ ಅಮನಿಗೌಡ, "ಎಲ್ಲಾ ಬಿಟ್ಟು ಈ ಅಗಸಗಿತ್ತಿ ಮಾತ ಕೇಳಿ ಬೆಳ್ಳು ಕಳೆಕೋಬಾರ್ದು, ಹೊಲೆಶ್ಯಾಲೆ ಒಗಿಯೋ ಅಗಸನಿಗೇನು ಗೊತ್ತಾದತ್ತು, ಇದೆ ಕೀಳೋ ಸಂದರ್ಪು? ಸುಮ್ಮ ನಿರ್ಲೇ ಅಗಸ" ಎಂಬ ಅಮಾನಿಗೌಡನ ಮಾತುಗಳನ್ನು ಗಮನಿಸಿದಾಗ ಜಾತಿಯಲ್ಲಿ ಕೆಳವರ್ಗದವರ ಸಲಹೆಗಳಿಗೆ ಮಾನ್ಯತೆ ಏಕೆ ಕೊಡಬೇಕು ಎಂಬುದಾಗಿ ಅಮಾನಿಗೌಡನ ದಬ್ಬಾಳಿಕೆಯನ್ನು ಗುರುತಿಸಬಹುದು. ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚಾಗಿ ಮೇಲ್ ಜಾತಿ- ಕೆಳ ಜಾತಿಯ ಅಂತರವನ್ನು ಕಥೆಗಳಲ್ಲಿ ಗರುತಿಸಿಲಾಗಿದೆ.

ಬೆಸಗರಹಳ್ಳಿ ರಾಮಣ್ಣ ಅವರ **'ಹಾವಿಲ್ಲದ ಹುತ್ತ'** ಕಥೆಯಲ್ಲಿ ನಿರೂಪಕರು ನಮ್ಮೂರ ಹೊಲೆಯರ ನಿಂಗಿ ಮದುವೆಗೆ ಮುಂಚೆಯೇ ತಾಯಿಯಾಗಿದ್ದಳು. ಅವರ ಜಾತಿಯ ಪದ್ಧತಿಯಂತೆ ಅವಳು ದೇವದಾಸಿ ಆಗಬೇಕೆಂದು ಹಿರಿಯರು ನಿರ್ಧರಿಸಿದ್ದರು. ಇದರಿಂದ ನಮ್ಮೂರಿನ ಕೆಲವು ರಸಿಕರಿಗೆ ಸಂತೋಷವಾಗುತ್ತದೆ ಎಂದು ಹೇಳಿದ್ದಾರೆ. ಇಲ್ಲಿ ದಲಿತ ಹೆಣ್ಣುಮಗಳೊಬ್ಬಳು ಮದುವೆಗೆ ಮುಂಚೆ ತಾಯಿಯಾಗಿದ್ದಕ್ಕೆ ಅವಳನ್ನು ಎಲ್ಲಾ ಜಾತಿಯ ಗಂಡಸರು ಅವಳನ್ನು ಬಯಸಬಹುದು. ಇದಕ್ಕೆ ಯಾವುದೇ ಜಾತಿ ಅಡ್ಡಬರುವುದಿಲ್ಲ. ಅವಳು ತಾಯಿಯಾಗಲು ಯಾರು ಕಾರಣರು ಅವರಿಗೆ ಶಿಕ್ಷೆಯನ್ನು ಕೊಡುವ ಬದಲಾಗಿ ಮತ್ತೆ ಅವಳನ್ನೇ ಶಿಕ್ಷೆಗೆ ಗುರಿಯಾಗಿಸುವುದು ಮನುಷ್ಯನ ಅದ:ಪತನವನ್ನು ಮತ್ತು ಹೆಣ್ಣಿನ ಶೋಷಣೆಯನ್ನು ಬಿಂಬಿಸುತ್ತದೆ. ಈ ನೆಲೆಗಟ್ಟಿನಲ್ಲಿಯೇ ಇರುವ ಮತ್ತೊಂದು ಕಥೆ ಬೆ. ರಾಮಣ್ಣನವರ ದೇವರ ಹೂ ಕಥೆಯಲ್ಲಿ ಬರುವ ರುದ್ರಮ್ಮ ಮತ್ತು ಚನ್ನಮ್ಮನ ನಡುವೆ ಹೂವಿಗಾಗಿ ಜಗಳ ನಡೆಯುತ್ತದೆ. ಚನ್ನಮ್ಮನ ತೋಟದಲ್ಲಿ ರುದ್ರಮ್ಮ ದೇವರಿಗೆಂದು ಹೂ ಕೂಯ್ದು ಹೋಗುವಾಗ ಇದನ್ನು ಕಂಡ ಚನ್ನಮ್ಮ ನಮ್ಮ ತೋಟದಲ್ಲಿ ಯಾಕೆ ಹೂವು ಕೂಯ್ದಿರಿ. ಕಷ್ಟಪಟ್ಟು ಕೆರೆಯಿಂದ ನೀರು ತಂದು ಹಾಕುವುದು ನಾನು, ಹೇಳದೆ–ಕೇಳದೆ ತೋಟಕ್ಕೆ ಹೋಗಿ ಹೂ ಕಿತ್ತಿರುವುದು ಮಹಾ ಅಪರಾಧವೆಂಬಂತೆ ಕೆಟ್ಟ ಶಬ್ದಗಳಿಂದ ಚನ್ನಮ್ಮ ಬೈಯ್ದಳು. ಇದನ್ನು ಸಯಿಸದ ರುದ್ರಮ್ಮ ಮಡಿಲಲ್ಲಿ ಇದ್ದ ಹೂವನ್ನು ರಸ್ತೆಯ ಮೇಲೆ ಚೆಲ್ಲುವಳು. ಅಲ್ಲದೆ ಚನ್ನಮ್ಮನನ್ನು ಬೈಯ ತೊಡಗುವಳು. ಇದನ್ನು ಕಂಡು ಚೆನ್ನಮ್ಮನ ಗಂಡ ಬಂದಾಗ ರುದ್ರಮ್ಮ "ದೇವರಿಗೆ ಅಂತ ಮೂರು ಹೂವು ಕೂದ್ರೆ ಬಾಯಿಗೆ ಬಂದಂಗೆ ಸಣ್ಣಪುಟ್ಟ ಮಾತಾಡಬೋದೇನಯ್ಯ ನಿನ್ನ ಹೆಂಡ್ತಿ?"(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೩, ಪುಟ–೭೭)ಎಂದು ನ್ಯಾಯ ಒಪ್ಪಿಸಿದಳು. ನಂತರ ರುದ್ರಮ್ಮ ಮಗ ಬಸವರಾಜೇಂದ್ರಪ್ಪನಿಗೆ ಜಗಳದ ವಿವರಗಳನ್ನು ನೀಡಿದಾಗ ಅಪ್ಪನಿಗೆ "ನಿಂಗೆ ಬುದ್ದಿಯಿಲ್ಲಕನಪ್ಪ, ಸಣ್ಣಜನಗೋಳ ಜೊತೇಲೆಲ್ಲ ಹೋಗಿ ನಿನ್ನ ಮಾನ ನನ್ನಮಾನ ಎಲ್ಲಾನು ತಗೀತಿ ಥೂ"(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೩, ಪುಟ–೭೭)ಎಂದ. ರುದ್ರಮ್ಮ ಲಿಂಗಾಯಿತದ ಮೇಲ್ ಜಾತಿಯವಳೆಂದು, ಚೆನ್ನಮ್ಮ ಒಕ್ಕಲಿಗ ಜಾತಿಯವಳಾಗಿದ್ದರಿಂದ ರಾಜೇಂದ್ರ ತಮ್ಮದು ಮೇಲ್ಜಾತಿ ಕೆಳಜಾತಿಯವರ ಜೊತೆ ಎಂತಹ ಜಗಳ ಎಂಬುದು ಅವನ ಮಾತಿನ ಅರ್ಥವಾಗಿತ್ತು. ಒಕ್ಕಲಿಗ ಹೊನ್ನಣ್ಣ ಬಸವರಾಜೇಂದ್ರಪ್ಪನ ಕಡೆ ತಿರುಗಿ "ನಾವು ಸಣ್ಣೋರು ಅಲ್ಲೇನಯ್ಯ ಯಾರ್ದಯ್ಯಾ

ತೆಪ್ಪು? ಉತ್ತಮ ಜಾತೀಲಿ, ದೊಡ್ಡೋರ ಹೊಟ್ಟೇಲಿ ಹುಟ್ಟಿದ್ದೀ ನೀನೇ ನ್ಯಾಯ ಹೇಳು"(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೩, ಪುಟ–೭೮)ಎಂದ. ಮುಂದೆ ನ್ಯಾಯದ ಕಟ್ಟೆ ಹತ್ತಿ ಎರಡು ಜಾತಿಯವರು ಸೇರಿ ರುದ್ರಮ್ಮ ಮತ್ತು ಚನ್ನಮ್ಮ ಇಬ್ಬರದು ತಪ್ಪು ಆದ್ದರಿಂದ ಒಂದು ವಾರಗಳ ಕಾಲ ಎಳ್ಳುಂಡೆ ದೀಪವನ್ನು ಊರಿನ ಬಸವಣ್ಣನ ಗುಡಿಗೆ ಹಚ್ಚುವಂತೆ ಪಂಚಾಯಿತಿಯವರು ತೀರ್ಮಾನಿಸಿದರು. ಕಥೆಗಾರರು ಕಥೆಯಲ್ಲಿ ಜಾತಿ ವಿಷಯ ಪ್ರಸ್ತಾಪ ಮಾಡಿದರೂ ಸಹ ಅದರ ಪ್ರತಿಧ್ವನಿ ಮೌನವಾಗಿದೆ. ಗ್ರಾಮೀಣ ಪ್ರದೇಶಗಳಲ್ಲಿ ಪ್ರತಿ ಸಣ್ಣ ವಿಷಯಗಳಿಗೂ ಜಾತಿ ಜಗಳ ಬರುವುದು ಸಹಜವೆಂಬಂತೆ ಕಂಡಿದ್ದಾರೆ. ಮತ್ತೊಂದು ಕಥೆ **'ಕಳೆ'** ಕಥೆಯಲ್ಲಿ ಮೇಲ್ಜಾತಿಯವರು ಸಂಪ್ರದಾಯ, ರೂಢಿ ಪದ್ಧತಿಗಳಲ್ಲಿ ಮಡಿ–ಮೈಲಿಗೆಯನ್ನು ಎತ್ತಿಹಿಡಿಯುತ್ತಾರೆ. ಕೆಳಜಾತಿಯವರನ್ನು ಮನುಷ್ಯರಂತೆ ಕಂಡಿರುವುದು ಕಡಿಮೆ. ಆದರೆ ಭೋಗದವಸ್ತುವಾಗಿ ಹೆಣ್ಣನ್ನು ಭಕ್ಷಿಸುವ ಕಾಮುಕರಿಗೆ ಜಾತಿ ಅಡ್ಡ ಬರುವುದಿಲ್ಲವೆ? ಎಂಬುದು ಈ ಕಥೆಯಲ್ಲಿ ಹುಟ್ಟಿಕೊಳ್ಳುವ ಪ್ರಶ್ನೆ. ಕಥೆಯಲ್ಲಿ ಶಿವಲಿಂಗೇಗೌಡ ಹೆಂಡತಿ ಸತ್ತ ನಂತರ, ಗಂಡನನ್ನು ಬಿಟ್ಟು ಬಂದ ಕೆಂಪಿಯನ್ನು ಅನುಭವಿಸುವ ಆಸೆ ಚಿಗುರೊಡಿಯಿತು. ಸುಮ್ಮನೆ ತಿರುಗಾಡುತ್ತ ಹೊಲೆಯರ ಕೇರಿಗೆ ಹೋಗುವುದು, ಕಣ್ಣಿಗೆ ಬಿದ್ದವರ ಯೋಗಕ್ಷೇಮ ವಿಚಾರಿಸುವುದು, ಚಾಣಾಕ್ಷತನದಿಂದ ಕೆಂಪಿಯ ಮನೆಯ ಮುಂದೆ ಕ್ಯಾಕರಿಸುವುದು. "ಕೆಂಪಿಗೆ ನಾಚಿಕೆ ಅವಳ ಅವ್ವ ಬೇಲೂರಿಗೆ ಒಳಗೊಳಗೇ ನಗು. ಈ ಕಷ್ಟಪಡುವುದರ ಬದಲು ಇಷ್ಟು ಹೊತ್ತಿಗೆ ಬತ್ತೀನಿ ಚಿಲಕ ಹಾಕಬ್ಯಾಡ ಅಂತ ಹೇಳಬ್ಯಾಡ್ದೆ. ಊರಿಗೆ ಗೌಡರೆನ್ನಿಸಿದ ಇವರಿಗೆ ಅಷ್ಟೂ ಗುಂಡಿಗೆ ಇಲ್ವ?"(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೩, ಪುಟ–೧೧೩). ಶಿವಲಿಂಗೇಗೌಡ ಜಾತಿಯಲ್ಲಿ ಮೇಲ್ ವರ್ಗದವನಾದರೂ ಅವನ ಮನಸ್ಸು ಕೀಳಾಗಿತ್ತು. ಕೆಂಪಿ ಹೊಲೆಯರ ಜಾತಿ ಅವಳ ದೇಹವೆ ಮೈಮಾಟಕ್ಕೆ ಯಾವ ಜಾತಿ ಇಲ್ಲಿ ಅಡ್ಡ ಬಂದಿಲ್ಲ. ಕೆಳಜಾತಿ ಹುಡುಗಿಯನ್ನು ಮದುವೆಯಾಗುವಾಗ ಜಾತಿ ಅಡ್ಡ ಬರುತ್ತದೆ. ಇದು ಕೆಲವು ಸಂಪ್ರಾದಯ ಕುಟುಂಬಗಳು ಮಾಡಿಕೊಂಡಿರುವ ನಿಯಮಗಳು. ನಮ್ಮ ದೇಶ ಅಥವಾ ನಮ್ಮ ರಾಜ್ಯ ಅಥವಾ ಸುತ್ತಮುತ್ತಾ ನಡೆಯುತ್ತಿರುವ ಮರ್ಯಾದ ಹತ್ಯೆ ಅಂತರಜಾತಿ ವಿವಾಹಕ್ಕೆ ಒಳಪಟ್ಟವರ ಮೇಲೆ ನಡೆಯುತ್ತಿರುವುದು ಶೋಚನೀಯ ಸ್ಥಿತಿಯಾಗಿದೆ. ಗಣಕೀಕರಣ, ಜಾಗತೀಕರಣ ಬಂದರೂ ಹಾಕುವ ಬಟ್ಟೆ, ತಿನ್ನುವ ತಿನ್ನಿಸುಗಳಲ್ಲಿ ಬದಲಾಗಿದೆ ಹೊರತು ಮಾನವೀಯ ಮೌಲ್ಯಗಳು ಉಳಿಸುವ ಬದಲಾಣೆಯು

ಕಂಡು ಬರುತ್ತಿಲ್ಲ. ಈ ಕಥೆಯಲ್ಲಿ ಕೆಂಪಿಯ ತಾಯಿ ಊರಗೌಡನಿಗೆ ಏನು ಬೇಕಾದರೂ ಮಾಡುವ ಅರ್ಹತೆಯಿದೆ ಎನ್ನುವ ನಿಲುವು ಅಧಿಕಾರಿಶಾಹಿ ವರ್ಗದ ಕ್ರೌರ್ಯವನ್ನು ಬಿಂಬಿಸುತ್ತದೆ. ಹೆಂಗಸರು ಕೇವಲ ಬೋಗದ ಹಾಗೂ ಮಕ್ಕಳನ್ನು ಹಡೆಯುವ ಕಾರ್ಯಕ್ಕೆ ಮಾತ್ರ ಸೀಮಿತವಾಗಿತ್ತು ಎಂಬಂತೆ ಚಿತ್ರಿಸಲಾಗಿದೆ. ಇಂದು ಕೇವಲ ಒಂದು ಪ್ರದೇಶದಲ್ಲಿ ಮಾತ್ರವಲ್ಲ ಎಲ್ಲ ಕಡೆಯು ಅತ್ಯಾಚಾರವೆಸುಗುತ್ತಿರುವ ಕ್ರೌರ್ಯ ತೋರುವ ಸನ್ನಿವೇಶಗಳು ಜರುಗುತ್ತಿವೆ. ಜಾತಿಯ ನಿರ್ಮೂಲನೆ ಕೇವಲ ಭಾಷಣ-ಪುಸ್ತಕಗಳ ರೂಪದಲ್ಲಿ ಕಾಣುವುದು ಮಾತ್ರ ವಾಸ್ತವಾಂಶವಾಗಿದೆ. ನಿಜಕ್ಕೂ ಭಾರತದಂತಹ ದೇಶಗಳಲ್ಲಿ ಜಾತಿ ನಿರ್ಮೂಲನೆ ಒಂದು ಸಮಸ್ಯೆ ಎನ್ನುವುದಕ್ಕಿಂತ ಒಂದು ಸವಾಲಾಗಿದೆ. ಸಾಹಿತ್ಯದ ರೂಪಗಳಾದ ಕಥೆ, ಕಾದಂಬರಿಗಳಲ್ಲಿ ಜಾತಿ ಪದ್ಧತಿಯ ಕೆಲವು ಸತ್ಯಾಂಶಗಳನ್ನು ಕಟ್ಟಿ ಕೊಡಲಾಗಿದೆ. ಹಾಗೆಯೇ **'ಹರಕೆಯ ಹಣ'** ಕಥೆಯಲ್ಲಿ ಒಕ್ಕಲಿಗರ ದೇವರುಗಳಿಗೆ ಹರಿಜನರೇ ಗುಡ್ಡರು. ಇದು ಊರಿನ ಪೂರ್ವಜರ ಸಂಪ್ರದಾಯ. ಆದಾಗಿ ಇತ್ತೀಚ್ಚಿನ ಹೊಸ ಪೀಳಿಗೆಯು ಅದನ್ನೇ ಮುಂದುವರಿಸಿಕೊಂಡು ಬರುತ್ತಿದೆ. ಪ್ರತಿವರ್ಷ ಒಕ್ಕಲಿಗರ ದಂಡಿಗನಮ್ಮ, ಹರಿಜನರ ಮಾಸ್ತಮ್ಮ, ಹುಚ್ಚಮ್ಮ ಜಾತ್ರೆ ನಡೆಯುತ್ತದೆ. ಇಲ್ಲಿ ದಂಡಿಗನಮ್ಮ ಒಕ್ಕಲಿಗರ ದೇವರಾದುದರಿಂದ "ದಂಡಿಗನಮ್ಮ ದೇವಸ್ಥಾನಕ್ಕೆ ಗೋಪುರ, ಸುತ್ತ ಅರ್ಧ ಆಶುದ್ಧದ ಗೋಡೆ ಉಟೆಂದು, ದಂಡಿಗನಮ್ಮನ ಮೈಮೇಲೆ ಅಡ್ಡಿಕೆ, ವಾಲೆ, ಮೂಗುತಿ ಇವೆ ಎಂದು, ಮಾಸ್ತಮ್ಮ ಹುಚ್ಚಮ್ಮನ ದೇವಾಸ್ಥಾನಗಳು ಹರಿಜನ ಕೇರಿಯ ಮಧ್ಯದಲ್ಲಿ ಇದ್ದು, ಅವು ಮಣ್ಣಿನ ಗುಡಿಗಳಾಗಿದ್ದು, ಅಲ್ಲಲ್ಲಿ ಬಡಕಲು ದನಗಳ ಮೈಮೇಲೆ ಮೂಳೆಗಳು ಕಾಣುವಂತೆ ಒಂದೊಂದು ಕಲ್ಲುಗಳು ಉಂಟು. ದಂಡಿಗನಮ್ಮನ ಕೊಂಡದಲ್ಲೇ ಅವಳ ಗುಡ್ಡನ ಹಿಂದೆ ಇವಳ ಗುಡ್ಡರೂ(ಹರಿಜನ) ಹಾಯಬೇಕು"(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೭, ಪುಟ-೧೭೩). ಈ ಕಥೆಯ ಸಂದರ್ಭದಲ್ಲಿ ಮನುಷ್ಯ ವರ್ಗದಲ್ಲಿ ಮಾತ್ರ ಜಾತಿಯೆಂಬುದಿಲ್ಲ. ಕಥೆಯಲ್ಲಿ ಮೇಲ್ವರ್ಗದವರು ದೇವತೆಗಳಲ್ಲಿಯೂ ಕೂಡ ಜಾತಿವ್ಯವಸ್ಥೆಯನ್ನು ಸೃಷ್ಟಿಸಿ ತಲೆ ತಲಾಂತರದಿಂದ ಶೋಷಣೆಗೆ ಒಳಪಟ್ಟ ದಲಿತರ ಜೀವನ ದುಸ್ಥಿತಿಯನ್ನು ಇಲ್ಲಿ ಕಾಣಬಹುದು.

ಇದೇ ಕಥೆಯಲ್ಲಿ ಸುಮಾನಿ ಎಂಬಾತ ದಲಿತ ಮುಖಂಡ. ಎಸ್.ಎಸ್.ಎಲ್.ಸಿ ವರೆಗೆ ಹೋಗಿ ಫೇಲ್ ಆಗಿದ್ದ. ಆದರೂ ಸ್ವಲ್ಪ ಜ್ಞಾನ ಸಂಪಾದಿಸಿಕೊಂಡು ಊರಿನಲ್ಲಿ ದಲಿತರ ಮೇಲೆ ನಡೆಯುವ ಶೋಷಣೆಯನ್ನು

ವಿರೋಧಿಸುವ ನಿಟ್ಟಿನಲ್ಲಿ ಹೋರಾಟಗಾರನಾಗಿದ್ದ. ಈ ಸಂದರ್ಭಕ್ಕೆ ಒತ್ತುಕೊಡುವ ಸುಮಾನಿಯ ಮಾತು ಹೀಗಿದೆ "ಮೊನ್ನೆ ದಿನ ಆ ಹೋಟ್ಲು ನಿಂಗಣ್ಣ ಒಂದು ಟೀ ಕೊಡು ಅಂದ್ರೆ ಗೋಡೆ ಆಚೆ ಇರೋ ಗೂಡೇಲಿದ್ದ ಗತನಾತ ಒಡೀತಿದ್ದ ಸಿಲ್ವಾರದ ಲೋಟ ತಕ್ಕೋ ಉಯ್ಯುಕೊಡ್ತೀನಿ ಅಂದ. ನಿನ್ ಟೀ ನೀನೇ ಕುಡ್ಕೋ ಆ ಲೋಟದೇಲಿ ಕುಡಿಯೋಕೆ ನಾನು ಮನಸ್ಸನಾಗಿ ಹುಟ್ಟಿಲ್ವಿ ಅಂಥ ಮುಖಕ್ಕೆ ಬಾರಿಸಿದಂಗೆ ಅಂದುಬುಟ್ಟು ಕೊರಕೊರನೆ ಕುಡ್ದು ಹೊಂಟ ಬಂದೆ. ನನ್ ಮಾತ್ ಕೇಳಿ. ಲೋಕ ಬದಲಾಗಿದೆ. ನಂಗೆ ಗೌರವ ಬರಬೇಕಾದ್ರೆ ಧೈರ್ಯವಾಗಿ ಹರಕೆದುಡ್ಡಿನ ಮೇಲಿನ ನಮ್ಮ ಹಕ್ಕು ಚಲಾಯಿಸಬೇಕು"(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೩, ಪುಟ–೧೭೪). ಈ ಮಾತುಗಳು ದಲಿತರ ಎಚ್ಚೆತ್ತ ಪ್ರಜ್ಞೆಯನ್ನು ಬಿಂಬಿಸುತ್ತದೆ. ಅಸ್ಪೃಶ್ಯತೆ ಎನ್ನುವುದು ಈ ಕಥೆಯಲ್ಲಿ ಕಾಫಿ ಕುಡಿಯುವ ಲೋಟದಿಂದ ಎಲ್ಲಾ ರೀತಿಯ ಚಟುವಟಿಕೆಗಳಲ್ಲಿ ತಾರತಮ್ಯ ಭಾವನೆಯನ್ನು ಉಂಟು ಮಾಡುತ್ತದೆ.

ಜಾತ್ರೆಯಲ್ಲಿ ಹೆಚ್ಚಿನ ಹಣ ಸಂದಾಯವಾಗಿರುವುದನ್ನು ತಿಳಿದ ಸುಮಾನಿ, ದಲಿತರಾದ ಮೂರು ಜನ ಗುಡ್ಡರನ್ನು ರಾತ್ರೋರಾತ್ರಿ ಸೇರಿಸಿ, ಅವರಿಗೆ "ಈ ಸಾರಿ ದಂಡಿಗಮ್ಮನಿಗೆ ಹರಕೆ ಹಣ ಏನೂ ಇಲ್ಲ ಅಂದ್ರೆ ಹತ್ತೋ ಹನ್ನೆರಡು ಸಾವಿರ ಬಂದಿದೆ. ಪೂಜೆ ಮಾಡುವರು ನಾವು, ಕೊಂಡ ಹಾಯೋರು ನಾವು, ದಂಡಿಗನಮ್ಮನೂ ನಮ್ಮ ಮನೆ ದೇವರು, ಮೂಲ ದೇವರು"(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೩, ಪುಟ – ೧೭೪). ಆದ್ದರಿಂದ ಹರಕೆಯ ಹಣ ನಮ್ಮ ಜಾತಿಯವರಿಗೆ ಬರಬೇಕು ಎಂಬುದಾಗಿ ವಿವರಿಸಿದ. ಈ ಎಲ್ಲಾ ಮಾತುಗಳು ಪಟೇಲರ ಆಳು ಬುಗುರಿಯ ಕಿವಿಗೆ ಬಿದ್ದು ನಂತರ ಪಟೇಲರಿಗೂ ತಿಳಿಯುತ್ತದೆ. ಇದರಿಂದ ಎಚ್ಚೆತ್ತುಕೊಂಡ ಪಟೇಲ ಶ್ಯಾನುಭೋಗರನ್ನು ಕರೆಸಿ ಪಂಚಾಯಿತಿ ನಡೆಸುತ್ತಾರೆ. ಇಲ್ಲಿ ದಲಿತ ವರ್ಗದ ಸುಮಾನಿ, ಗುಡ್ಡರಾದ ಚಿಟ್ಟೆ, ಹೊಟ್ಟೆ ಸಿದ್ಧಯ್ಯ, ಧೂಳಯ್ಯ ಇತರರು ಮತ್ತು ಇನ್ನೊಂದು ಕಡೆ ಒಕ್ಕಲಿಗರು ಸೇರಿ ಪಂಚಾಯಿತಿ ಪ್ರಾರಂಭವಾಗುವುದು. ಪಂಚಾಯಿತಿಯಲ್ಲಿ ಜಗಳ–ಗೊಂದಲಗಳು ನಡೆದು ಪಟೇಲ ಉಗ್ರೇಗೌಡ ಹಾಗೂ ಶ್ಯಾನುಭೋಗರು ಹರಕೆಯ ಹಣವನ್ನು ದಲಿತರಿಗೆ ಕೊಡಲು ಒಪ್ಪುವುದಿಲ್ಲ. ಎಚ್ಚೆತ ದಲಿತವರ್ಗ ಸಂಘರ್ಷದ ಹಾದಿಯನ್ನು ಹಿಡಿಯುತ್ತದೆ. ಸುಮಾನಿ ಜಿಲ್ಲಾ ಪೋಲಿಸ್ ಸೂಪರಡೆಂಟ್‌ಸಾಹೇಬರಿಗೆ ಮಲ್ಲನಾಯಕನಕಟ್ಟೆಯಲ್ಲಿ ಹರಿಜನರಿಗೆ ಆಗುತ್ತಿರುವ ಅನ್ಯಾಯಗಳನ್ನು, 'ಹೊಲೆಯ' ಎಂದು ಪಟೇಲರು ಕರೆದುದ್ದನ್ನು ಅರ್ಜಿಯಲ್ಲಿ ನಮೂದಿಸಿ ಸುಮಾನಿ ಮತ್ತು ಮೂವರು ಗುಡ್ಡರು ಸಹಿ

ಹಾಕಿ ಕೊಡುತ್ತಾರೆ. ಇದು ಶೋಷಣೆಯ ವಿರುದ್ಧ ಪ್ರತಿಭಟನೆಯ ಧ್ವನಿಯಾಗಿದೆ. ಆದರೆ ಪ್ರತಿಭಟನೆಯ ತಕ್ಕ ಫಲ ಸಿಗದಿರುವುದು ಸಮಾಜದ ವಾಸ್ತವಕ್ಕೆ ಹತ್ತಿರವೇ ಆಗಿದೆ. ಪಟೇಲ ಉಗ್ರೇಗೌಡ ಮತ್ತು ಶ್ಯಾನುಭೋಗರು ತಮ್ಮ ಕ್ಷೇತ್ರದ ಎಂ.ಎಲ್.ಎ ಸಾಹೇಬರನ್ನು ಹಿಡಿದು, ತಾವು ದಲಿತರ ಉದ್ಧಾರಕ್ಕಾಗಿ ದುಡಿಯುತ್ತಿದ್ದೇವೆ. ಸಣ್ಣ ವಿಚಾರವಾಗಿ ದಲಿತರ ಸುಮಾನಿ ಕೋರ್ಟ್ ಮೆಟ್ಟಿಲೇರುವ ಪ್ರಯತ್ನವನ್ನು ತಡೆಹಿಡಿದು, ತಪ್ಪು ಮಾಡಿದವರು ಅಪರಾಧಿಗಳಲ್ಲಾ ಎನ್ನುವಂತೆ ಕಥೆ ಕೊನೆಗೊಳ್ಳುತ್ತದೆ. ಈ ಕಥೆಯಲ್ಲಿ ದಲಿತವರ್ಗ ಪ್ರತಿಭಟನೆಯ ಸ್ವರೂಪ ಪಡೆದರೂ ಪ್ರತಿಫಲ ಸಿಗದಿರುವುದು ದುರಂತವೇ ಸರಿ. ಕಥೆಗಾರರು ವಾಸ್ತವತೆಯನ್ನು ಅರಿತು ಈ ರೀತಿಯ ತಿರುವುನ್ನು ಕೊಟ್ಟಿದ್ದಾರೆ.

ಬೆಸಗರಹಳ್ಳಿ ರಾಮಣ್ಣ ಅವರ **'ಗಾಂಧೀ ಸಂತಾನ'** ಕಥೆಯಲ್ಲಿ ಕಥೆಗಾರರು ಕಥೆ ಪ್ರಾರಂಭದಲ್ಲಿ ಈ ಕಥೆ ಭಾರತದಲ್ಲೇ ನಡೆದದ್ದು, ನನ್ನ ತಾಯಿನಾಡಿನಲ್ಲಿ ಎಂದು ಹೇಳುತ್ತಿರುವುದು ಪ್ರಮುಖವಲ್ಲವೆಂದು ಹೇಳುತ್ತಾ, ಪಂಡಿತರ ನವಿರಾದ ಕ್ರೌರ್ಯ, ರಾಜಕಾರಣಿಗಳ ಸುಳ್ಳಿನ ಸರಮಾಲೆ ಇವುಗಳನ್ನು ದಿಟ್ಟತನದಿಂದ ನೇರವಾಗಿ ಹೇಳುತ್ತೇನೆ ಎನ್ನುವರು. "ನಾನು ಹುಟ್ಟಿನಿಂದ ಉತ್ತಮನಲ್ಲ, ಆದರೆ ಅಧಮನಂತೂ ಅಲ್ಲ, ಎಡಬಿಡಂಗಿ ಶೂದ್ರ ಮುಂಡೆಯದು"(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೭, ಪುಟ – ೧೮೯)ಎಂದು ಹೇಳುವಾಗ ನಿರೂಪಕರು ಅವರ ಬಾಲ್ಯದ ಘಟನೆಯನ್ನು ವಿವರಿಸಿದ್ದಾರೆ. ಹಾಳು ಶೂದ್ರಮುಂಡೇವು ಹೋಗ್ರೋ ದೂರ, ಮಡಿ ಮೈಲಿಗೆ ಏನೂ ತಿಳಿಯೊಲ್ಲ ರಾಮರಾಮ ಎಂದು ಪಕ್ಕಕ್ಕೆ ಚಂಗನೆ ಹಾರಿ, ಅಲ್ಲೆ ಪವಡಿಸಿದ್ದ ನಾಯಿಯ ಹೇಲನ್ನು ತುಳಿದಾಗ ಅದನ್ನು ಕಂಡು ಸಂತೋಷಪಟ್ಟ ನಿರೂಪಕರು, ಶಾಲೆಗೆ ತೆರಳಿದಾಗ ಈ ವಿಚಾರ ಹೇಗೋ ಕಿವುಡು ಮೇಷ್ಟ್ರುಗೆ ತಲುಪಿ, ಮೈಮೇಲೆ ಬಾಸುಂಡೆ ಇಳಿಯುವ ರೀತಿಯಲ್ಲಿ 'ಶೂದ್ರ ಮುಂಡೇದೇ' ಎಂದು ಬೈಯುತ್ತ ಹೊಡೆಯುತ್ತಿದ್ದರು. ಇದನ್ನು ತಪ್ಪಿಸಲೆಂದು ಮೇಷ್ಟ್ರು ಕಚ್ಚೆಯನ್ನು ಬಲವಾಗಿ ಎಳೆದು ಕಳಚಿಕೊಂಡಿತು. ಕಿವುಡು ಮೇಷ್ಟ್ರು ಕೌಪೀನಧಾರಿಗಳಾಗಿ, ಮಾನಭಂಗವಾದಂತೆ ಕೋಪದಿಂದ ಪ್ರತೀಕಾರವಾಗಿ ನಿರೂಪಕರ ತಂದೆಗೆ ವಿಚಾರ ತಿಳಿಸಿದರು. ಸಿಟ್ಟುಗೊಂಡ ತಂದೆ ಮುಳ್ಳಿನ ಕೋಲಿನಿಂದ ಮಗನಿಗೆ ಹೊಡೆಯಲು ಹೋಗಿ ತಲೆ ಪೆಟ್ಟು ಬಿದ್ದು ಜ್ಞಾನ ತಪ್ಪಲು ಹುಡುಗನ ತಾಯಿ ಗೋಳಿಡುತ್ತಾ ಅಳುತ್ತಿರಲು, ತಂದೆಯು ಸಹ ಹುಡುಗನ ಕಾಲಿನ ಬಳಿ ಕಣ್ಣೀರುಡುತ್ತಿದ್ದರು. ಹುಡುಗ ತಾನು ಯಾವ ತಪ್ಪು ಮಾಡಿಲ್ಲ ಮೇಷ್ಟ್ರು ಮಾತು ಮಾತಿಗೂ 'ಶೂದ್ರ ಮುಂಡೇದೆ' ಎಂದು

ಬೈಯುವುದನ್ನು ತಾನು ಸಹಿಸಲಾಗಲಿಲ್ಲ ಎಂದು ಹೇಳಿಕೊಳ್ಳುತ್ತಾನೆ. ಇಲ್ಲಿ ಬ್ರಾಹ್ಮಣ ಸಮುದಾಯದ ಜನಾಂಗ ಮಾಡುತ್ತಿದ್ದ ಶೂದ್ರರ ಮೇಲಿನ ಶೋಷಣೆಯೂ ತಲಾತಲಾಂತರದಿಂದ ಬಂದ ಕ್ರೌರ್ಯವಾಗಿದೆ.

ಇದೇ ಕಥೆಯಲ್ಲಿ ಹುಡುಗನ ತಲೆಗೆ ಪೆಟ್ಟು ಬಿದ್ದ ಸಂದರ್ಭದಲ್ಲಿ ಹೊಲೇರ ತಿಮ್ಮಕ್ಕ ಬಿಕ್ಕಳಿಸಿ ಅಳುವುದನ್ನು ಹೇಳುವ ಸಂದರ್ಭಕ್ಕೆ ಅವನ ಮಗ ಮೆಣಸನ ವಿಚಾರವನ್ನು ಕಥೆಗಾರರು ನಿರೂಪಿಸಿದ್ದಾರೆ. ಮೆಣಸ ದಲಿತನಾದರೂ ಪ್ರತಿಭಟನೆಯನ್ನು ಮಾಡುವ ಜ್ಞಾನವೊಂದಿದ್ದ. "ಇನ್ನು ನನ್ನಕೈಲಿ ನಮ್ಮಪ್ಪನ ಸಾಲಕ್ಕೆ ಜೀತಕ್ಕೆ ಇರೋಕೆ, ದುಡಿಯೋಕ ಅರ್‌ಗೀಸ ಆಗುವುದಿಲ್ಲ"(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೬, ಪುಟ-೧೪೬)ಎನ್ನುವ ಮೆಣಸನ ಮಾತು ಅಸಹಾಯಕತೆ ಮತ್ತು ದಿಟ್ಟತನದ ನುಡಿಗಳಾಗಿವೆ. ಇದೇ ಸಂದರ್ಭದಲ್ಲಿ ನೀನು ನಿಮ್ಮಪ್ಪಂಗೆ ಹುಟ್ಟಿದರೆ ಜೀತ ಮಾಡೆಂದು, ಅವನ ಮನಸ್ಸು ಬದಲಾಯಿಸಲು ಕೆಲವರು ಗೌಡರು, ಬಣಜಿಗ ಲಿಂಗಾಯಿತರು, ಜೋಇಯಿಸರು ಹೇಳಿದಾಗ, ಮೆಣಸ "ನೀವೆಲ್ಲ ನಿಮ್ಮಪ್ಪಂದಿರಿಗೇ ಹುಟ್ಟಿದ್ದೀರಿ ಅನ್ನೋಕೆ ಯಾರು ಸಾಕ್ಷಿ ಅವರೆ?" ಎಂದು ಕೇಳಿದಾಗ, ಕೆಲವರು ಒಳಗೊಳಗೆ ಕತ್ತಿ ಮಸೆದರು. ಮೆಣಸನಿಗೆ ತಮ್ಮ ಜಾತಿಯವರು ಏಕೆ ಊರಿನಿಂದ ಹೊರಗೆ ಇರಬೇಕು, ಊಸಿರಾಡುವ ಹೆಣಗಳಂತೆ ಬದುಕಿರಬೇಕು ಪ್ರಶ್ನೆ ಬೆಟ್ಟದಂತೆ ಕಾಡಿತು. ಇದಕ್ಕೆ ಉತ್ತರವಾಗಿ, ತಮ್ಮ ಜಾತಿಯ ಪುಟ್ಟಣ್ಣನ್ನ ಕೇಳಿದರೆ ದೇವರು ಸೃಷ್ಟಿ ಮಾಡಿರುವುದೇ ಹಿಂಗೆ ಎಂದು ಹೇಳುವುದು ಮೆಣಸನಿಗೆ ಸಮಾಧಾನವಾಗಿಲ್ಲ. ಮೆಣಸನ ವಿದ್ಯಾಭ್ಯಾಸ ವಿಚಾರ ಎತ್ತಿದಾಗ ಕಿವುಡು ಮೇಷ್ಟ್ರ ನನ್ನನ್ನು ಕಂಡರೆ 'ಹೇಲು ಕಂಡಂಗೆ' ಅನಿಸಿ ದೂರ ಎನ್ನುವಾಗ ನನಗೆ ಯಾರು ತಾನೆ ಅಕ್ಷರ ಕಲಿಸುವರು ಎಂದು ಇರುವ ವಸ್ತುಸ್ಥಿತಿ ಹೇಳಿದನು.

ಜೊಯಿಸರು ಮೆಣಸನನ್ನು ಕೆಣಕಿದಾಗ "ಹೊಲೆಯ ಗಿಲೆಯ ಅನ್ನಬ್ಯಾಡ ಕನಯ್ಯೋ, ಹೆಚ್ಚಿಗೆ ಮಾತಾಡ್ದೆ ಜನಿವಾರ ಕಿತ್ತು ನನ್ನ ವಡದಾರಕ್ಕೆ ಗಂಬಾಕೋತೀನಿ ನೋಡು ಎಂದು ಜನಿವಾರದ ಕಡೆ ಕೈ ಬೀಸಿಯೆ ಬಿಟ್ಟ, ಹಾಗೂ ತಾಯಿ ಜೋಇಯಿಸರ ಕಾಲಿಗೆ ಬಿದ್ದು ಕ್ಷಮೆ ಕೇಳಲು ಹೋದಾಗ ಥೂ ಅವನ್ಗೆ ಯಾಕೆ ಅಡ್ಡ ಬಿದ್ದೀ, ಅವನೇನು ದೇವರ ಅವತಾರವೆ"(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೬, ಪುಟ-೧೬೫)ಎಂದು ಜೊಯಿಸರ ಕಡೆ ಕ್ಯಾಕರಿಸಿ ಉಗಿದೇ ಬಿಟ್ಟ. ಈ ಎಲ್ಲಾ ಘಟನೆಗಳಿಂದ ಗೌಡರು, ಜೊಯಿಸರುಗಳು ಸಿಟ್ಟಿಗೆದ್ದು ಯಾರಿಗೂ ತಿಳಿಯದಂತೆ ಮೆಣಸನ ಕೊಲೆ ಮಾಡಿಸುತ್ತಾರೆ. ಇಲ್ಲಿ ಮೆಣಸ ಸಂಘರ್ಷಕ್ಕಿಳಿದರು ಸಹ ಅವನ

ಅಂತ್ಯವಾಗುತ್ತದೆ. ಕಥೆಯಲ್ಲಿ ಸಂಘರ್ಷವಿದ್ದರು ಇಲ್ಲದಂತಾಗಿದೆ. ಗೌಡರು, ತಾವು ಮಾಡಿದ ಉಪಾಯ ಫಲಿಸಿದರೆ ತಿರುಪತಿ ತಿಮ್ಮಪ್ಪನಿಗೆ ಪರ ಮಾಡುವುದಾಗಿ, ಹೇಳಿ ಹರಕೆ ತೀರಿಸುವರು. ಎಚ್ಚೆತ್ತ ಮೆಣಸನ ವ್ಯಕ್ತಿತ್ವವನ್ನು ಕಂಡು ಹೆದರಿದ, ಹೆಸರಿಗೆ ಊರಿಗೆ ದೊಡ್ಡವರಾದ ಪಟೇಲ, ಶ್ಯಾನುಭೋಗ, ಜೋಯಿಸರು ಮನುಷ್ಯತ್ವವನ್ನು ಮರೆತು ಕ್ರೂರ ಮೃಗಗಳಂತೆ ನಡೆದುಕೊಳ್ಳುವುದು ಕೇವಲ ಕಥೆಯಷ್ಟೆ ಅಲ್ಲ, ಇಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ನೈಜ ಘಟನೆಯಾಗಿದೆ. ಇತ್ತೀಚಿನ ದಿನಗಳಲ್ಲಿ ಅಂತರಜಾತಿ ವಿವಾಹವಾದ ಎಷ್ಟೋ ಘಟನೆಗಳು ಅಸಹಾಯಕ ಮಕ್ಕಳನ್ನು ಬರ್ಬರವಾಗಿ ಹತ್ಯೆಗೈಯುತ್ತಿರುವುದು ಕ್ರೂರ ಸಮಾಜದ ಇನ್ನೊಂದು ಮುಖವಾಗಿದೆ.

ಜಾತಿ ಎನ್ನುವುದು ಉಣ್ಣುವ, ತೊಡುವ, ಆಚರಿಸುವ ಕ್ರಿಯೆಗಳಲ್ಲಿ ಬೇರ್ಪಡಿಸುವ ನಮ್ಮ ಜನರು, ಸಾಯುವ ಸಂದರ್ಭದಲ್ಲಿ ಜಾತಿನೇ ಇಲ್ಲ ಎನ್ನುವ ಮನೋಧೋರಣೆ ತಿಳಿಯುವುದು ಸ್ವಾರ್ಥದ ದೃಷ್ಟಿಯಾಗಿದೆ. ಈ ರೀತಿಯ ಧೋರಣೆ ಬೆಸಗರಹಳ್ಳಿ ರಾಮಣ್ಣ ಅವರ **'ಕಕರನ ಯುಗಾದಿ'** ಕಥೆಯಲ್ಲಿ ಗುರುತಿಸಬಹುದು. ಕಕರ ಒಬ್ಬ ಬಡವ ಅದಕ್ಕಿಂತ ಹೆಚ್ಚಾಗಿ ಅವನೊಬ್ಬ ದಲಿತ. ಕಕರನಿಗೆ ಬಡಕಲಾದ ನಾಲ್ಕು ಗಂಡು ಮಕ್ಕಳು, ದಮ್ಮು ಖಾಯಿಲೆಯಿಂದ ನರಳುವ ಹೆಂಡತಿ, ಗಂಡ ಬಿಟ್ಟ ಮಗಳು ಕದ್ದು ಬಸುರಾಗಿ ಮನೆಯಲ್ಲೇ ಇರುವಳು.

ಕಕರನ ಪ್ರಾಮಾಣಿಕತೆ ಎಷ್ಟಿತ್ತೆಂದರೆ ಬಾಯಿ ಒಣಗುತ್ತಿದ್ದರೂ ಏರಿ ಕೆಳಗಿನ ಸಾಹುಕಾರರ ತೋಟದಲ್ಲಿ ಸಮೃದ್ಧವಾಗಿ ತೆಂಗಿನ ಮರಗಳಲ್ಲಿ ಗೊನೆಗಳನ್ನು ಕಂಡು, ಒಂದು ಎಳನೀರನ್ನು ಕಿತ್ತುಕುಡಿಯಬೇಕೆನಿಸಿದರೂ ತನ್ನ ಪ್ರಮಾಣಿಕತೆಯನ್ನು ಬಲಿಕೊಡಲು ಇಚ್ಛಿಸಲಿಲ್ಲ. ಬಡವನಾದರು ತನ್ನ ತನವನ್ನು ಬಿಟ್ಟುಕೊಡುವುದಿಲ್ಲ. ಕಕರ, ಯುಗಾದಿ ಹಬ್ಬಕ್ಕೆ ೨೫ ರೂಪಾಯಿಗಳು ಸಾಲ ಕೊಡಬೇಕೆಂದು, ಬದಲಿಗೆ ೨ನೇ ಮಗ ದೇವರಸನನ್ನು ಜೀತಕ್ಕಿರಿಸುವುದಾಗಿ ಜೋಯಿಸರನ್ನು ಕೇಳಿದಾಗ, ಸೌದೆ ತಂದಾಕು ಆಮೇಲೆ ನೋಡೋಣ ಎನ್ನುತ್ತಾರೆ. ಕಕರ ಕಟ್ಟಿಗೆಯ ಹೊರೆಯನ್ನು ತನ್ನ ಶಕ್ತಿ ಮೀರಿ ತೆಗೆದುಕೊಂಡು ಜೋಯಿಸರ ಮನೆ ಮುಂದೆ ಹಾಕಿ ಕೂಗುತ್ತಾನೆ. ಜೋಯಿಸರು ಮಲಗಿದ ಕಾರಣ ಅವರ ತಾಯಿ ಗೋದಮ್ಮ "ನೀನು ಕಟ್ಟಿಗೆ ತಂದಿಯ ಎಂದು" ಕಟ್ಟಿಗೆಗೆ ನೀರು ಚಿಮುಕಿಸಿ ಮಡಿ ಮಾಡುತ್ತಾರೆ. ಈ ಸಂದರ್ಭವನ್ನು ಗಮನಿಸಿದರೆ ಯಾವ ಜಾತಿಯನ್ನು

(ಬ್ರಾಹ್ಮಣ) ಉನ್ನತ ಜ್ಞಾನಿಗಳು, ಶ್ರೇಷ್ಠರು ಎಂದು ಭಾವಿಸಿದ್ದರೋ ಅದು ನಿಜಕ್ಕೂ ಇಲ್ಲಿ ಹಾಸ್ಯಸ್ಪದವಾಗುತ್ತದೆ. ಸೌದೆ ಹೊತ್ತು ತಂದ ಕಕರನಿಗೆ ಜೋಯಿಸರು ನಾಳೆ ಬರುವುದಾಗಿ ಹೇಳಿ ಕಳಿಸುವರು.

ಜೋಯಿಸರ ಹೆಂಡತಿ ಯಶೋಧಮ್ಮನಿಗೆ ಮಕ್ಕಳಿಲ್ಲ. ಜೋಯಿಸರ ತಾಯಿ ಗೋದಮ್ಮ ಸೊಸೆಯನ್ನು ಬಂಜೆಯೆಂದು ಬೈದು ಗೋಳುಯುತ್ತಿದ್ದಳು. ಇದರಿಂದ ಬೇಸತ್ತ ಯಶೋಧಮ್ಮ ಮನೆಯಲ್ಲೇ ಇದ್ದ ಬಾವಿಗೆ ಬಿದ್ದಳು. ಅದೇ ಸಂದರ್ಭಕ್ಕೆ ಕಕರ ಜೋಯಿಸರ ಮನೆಗೆ ೨೫ ರೂಪಾಯಿಗಳನ್ನು ಕೇಳಲು ಬಂದಿದ್ದ. ಅಕ್ಕಪಕ್ಕದವರು ನೀರಿಗೆ ಬಿದ್ದುದನ್ನು ನೋಡುತ್ತಾ ನಿಂತಿದ್ದರು. ಜೋಯಿಸರು ಯಾರಾದರು ನನ್ನ ಹೆಂಡತಿಯನ್ನು ಬಾವಿಯಿಂದ ಮೇಲಕೆತ್ತಿ ಎಂದರೂ ಯಾರೂ ಮುಂದೆ ಬರಲಿಲ್ಲ, ಕೊನೆಗೆ ಜೋಯಿಸರು ಕಕರನನ್ನು ನೀನೆ ನನ್ನ ಹೆಂಡತಿಯನ್ನು ಕಾಪಾಡಬೇಕು ಎಂದು ಬೇಡಿಕೊಳ್ಳುವರು. "ಕಕರನಿಗೆ ಬೆಂಕಿಯ ಕೊಂಡಕ್ಕೆ ಎತ್ತೆಸೆದಂತಾಯಿತು ಕಕರ ಸ್ವಾಮಿ ನಾನು ಹೊಲೇರೇನು, ಒಳಗೆ ಎಂಗೋಲ್ಗಿ! ನೀವು ಬಾಂಬ್ರಿ! ಎಂದಾಗ ಜಾತಿ ಮನೆ ಹಾಳಾಯಿತು ಭಗವಂತನ ದೃಷ್ಟೀಲಿ ಎಲ್ಲ ಒಂದೇ ಕಣೋ"(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೬, ಪುಟ-೨೧೧)ಎನ್ನುವ ಜೋಯಿಸರ ಮಾತುಗಳು ಸಂದರ್ಭಕ್ಕೆ ತಕ್ಕಂತೆ ಸ್ವಾರ್ಥತತೆಯನ್ನು ಎತ್ತಿ ತೋರಿಸುತ್ತದೆ.

ನೀರಿಗೆ ದುಮುಕಿದ ಕಕರ–ಎಡಗೈಯಲ್ಲಿ ಕಲ್ಲನ್ನು ಹಿಡಿದು, ಬಲಗೈಯಲ್ಲಿ ಯಶೋಧಮ್ಮನ ಕೂದಲನ್ನು ಬಿಗಿಹಿಡಿದು ಮೇಲಕ್ಕೆ ಬಂದ. ಯಶೋಧಮ್ಮ ಕಕರನ ಕುತ್ತಿಗೆಗೆ ತನ್ನ ಎರಡು ಬಾಹುಗಳನ್ನೆ ಹಾಕಿ ಕೆಳಗೆ ಜಗ್ಗಿದರು. ಕಕರನಿಗೆ ಆಯಾ ತಪ್ಪಿತು ಜೊತೆಗೆ ಬ್ರಾಹ್ಮಣ ಹೆಂಗಸು ಕೀಳು ಜಾತಿಯವನಾದ ತನ್ನನ್ನು ತಬ್ಬಿಕೊಂಡ ಗಾಬರಿ ಬೇರೆ. ಇದರಿಂದ ಯಶೋಧಮ್ಮನೊಡನೆ ಕಕರ ಬಾವಿಯ ತಳ ಸೇರಿದ. ಅಲ್ಲಿ ಸೇರಿದ್ದವರೆಲ್ಲ ಜೋಯಿಸರೆ ಇಬ್ಬರ ಕಥೆಯು ಮುಗಿಯಿತೆಂದು ಪೋಲಿಸ್ ಸ್ಟೇಷನ್ಗೆ ಸುದ್ದಿ ಮುಟ್ಟಿಸಿ. ಅವರು ಬಂದ ಮೇಲೆ ಹೆಣಗಳನ್ನು ತೆಗೆಯುವರೆಂದು ಹೇಳುವರು. ಶ್ಯಾನುಭೋಗ ಬ್ರಾಹ್ಮಣ ಹೆಂಗಸನೇ, ಹೊಲೆಯರಾದ ಕೀಳು ಜಾತಿಯವರು ಮುಟ್ಟೋದು ಅಂದ್ರೆ! ಬದುಕಬಾರದು, ಕಕರನ ಹೆಂಡತಿ ಚೆನ್ನಿ ತನ್ನ ಸಂತಾನದೊಡನೆ ಬಂದಾಗ, ಚನ್ನಿ ನಿನ್ನ ಗಂಡ ಪುಣ್ಯ ಮಾಡಿದ್ದ, ಬ್ರಾಹ್ಮಣರ ಹೆಂಗಸರನ್ನು ಬಚಾವು ಮಾಡೋಕೋಗಿ ಸಾಯೋದು ಪವಿತ್ರ ಸಾವು ಎಂಬಂತೆ ಸಮರ್ಥನೆ ಕೊಡುತ್ತಿದ್ದರು.

ಎಲ್ಲಾ ರೀತಿಯಲ್ಲೂ ಮಡಿ ಮಾಡುವ ಜೋಯಿಸರು, ಹೆಂಡತಿ ಬಾವಿಗೆ ಬಿದ್ದಾಗಲೂ ಅದೇ ಕ್ರಮದಲ್ಲಿದ್ದರೆ ಅಮಾಯಕನಾದ ಕಕರ ಸಾಯುತ್ತಿರಲಿಲ್ಲ. ಹೊಲೆಯರಾಗಿ ಬಡತನವೊ ಸಿರಿತನವೊ ಬಾಳಬೇಕೆಂದವರನ್ನು, ತಮ್ಮ ಸ್ವಾರ್ಥಕ್ಕೆ ಜೀವವನ್ನು ತೆಗೆಯುವ ಈ ಮೇಲು ವರ್ಗದ ಜನರ ಧೋರಣೆ ಅಮಾನುಷವಾದುದು. ಈ ಕಥೆಯಲ್ಲಿ ಪ್ರತಿಭಟನೆಯಾಗಲಿ-ಸಂಘರ್ಷದ ಯಾವುದೇ ಅಂಶಗಳಿಲ್ಲ.

ಬೆಸಗಹರಹಳ್ಳಿ ರಾಮಣ್ಣ ಅವರ **'ಜಾಡಮಾಲಿ'** ಕಥೆಯಲ್ಲಿ ಕಥೆಗಾರರು ತಮ್ಮ ವೈದ್ಯಕೀಯ ವೃತ್ತಿಯಿಂದ ಕಂಡತಂಹ ಬದುಕನ್ನು ಕಥೆಯಾಗಿಸಿದ್ದಾರೆ. ಜಾಡಮಾಲಿ ಕುಂಟರಾಮ ಮೊಂಡೂರು ದೊಡ್ಡ ಆಸ್ಪತ್ರೆಯಲ್ಲಿ ಮೂವತ್ತು ಮೂರು ವರ್ಷಗಳು ಜಾಡಮಾಲಿಯ ಕೆಲಸವನ್ನು ಯಾರು ಬೆರಳು ತೋರಿಸದಂತೆ ಪ್ರಮಾಣಿಕವಾಗಿ ಮಾಡಿರುತ್ತಾನೆ. "ಹೂಂ ಕನವ್ವ, ಇಲ್ಲೇ ನನ್ನ ಸರ್ವಿಸೆಲ್ಲಾನೂ ಕಳ್ದೆ, ನಾನು ಗುಡಿಸ್ದೆ ಇರೋ ಜಾಗ ಇಲ್ಲ; ಕ್ಲೀನ್ ಮಾಡ್ದೇ ಇರೋ ಕಕ್ಕಸ್ಸಿಲ್ಲ ಈ ಆಸ್ಪತ್ರೇಲಿ"**(ಬೆಸಗರಹಳ್ಳಿ ರಾಮಣ್ಣ, ಸಮಗ್ರ ಕಥನ ಸಾಹಿತ್ಯ, ಪುಟ- ೫೩೪).** ಈ ಮಾತುಗಳು ಕುಂಟರಾಮನ ಕೆಲಸದ ಬದ್ಧತೆಯನ್ನು ನಿರೂಪಿಸುತ್ತದೆ.

ಕುಂಟರಾಮನಿಗೆ ಸರೋಜ ಎಂಬ ಮಗಳಿದ್ದು ಅವಳ ಗಂಡ ಕುಡುಕ. ವಯಸ್ಸಿನ ಉದ್ವೇಗದಿಂದ ಯಾರನ್ನೊ ನಂಬಿ ಬಸುರಿಯಾಗಿ, ಮೋಸಕ್ಕೆ ಒಳಗಾದಗ ಮರ್ಯಾದೆಗೆ ಅಂಜಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಕುಂಟರಾಮನ ಹೆಂಡತಿ ವೆಂಕಟಮ್ಮ ಮಗಳು ಸತ್ತ ಕೊರಗಿನಲ್ಲೇ ಸಾಯುತ್ತಾಳೆ. ಕುಂಟರಾಮ ಅಂದಿನಿಂದ ಯಾವುದೇ ಹೆಣ್ಣು ಮಗಳು ಕಷ್ಟದಲ್ಲಿದ್ದರೆ ಅವಳು ನನ್ನ ಮಗಳೆಂದು ಭಾವಿಸಿ ಸಹಾಯ ಮಾಡಬೇಕೆಂದು ನಿರ್ಧರಿಸುತ್ತಾನೆ. ಹುಚ್ಚಿಯಾಗಿ ಅಲೆಯುತ್ತಿದ್ದ ಒಂದು ಹೆಣ್ಮಗಳು ಜ್ಞಾನತಪ್ಪಿ ಬಿದ್ದಿರುವುದನ್ನು ಕಂಡು ತನ್ನ ಮಗಳು ಸರೋಜ ಎಂದು ಭಾವಿಸಿ ಆಸ್ಪತ್ರೆಗೆ ಸೇರಿಸುತ್ತಾನೆ. ಹುಚ್ಚಿಯೆಂದು ಅನುಕಂಪ ಇಲ್ಲದೆ ಕೆಲವು ದುರಳರ ಅತ್ಯಾಚಾರದಿಂದ ಬಸುರಿಯಾಗಿರುತ್ತಾಳೆ. ಕುಂಟರಾಮ ತನ್ನ ಕೂಡಿಟ್ಟ ಹಣ ಖರ್ಚು ಆದರೂ ಸರಿ ಆ ಹೆಣ್ಣುಮಗಳು ಮತ್ತು ಹೊಟ್ಟೆಯಲ್ಲಿರುವ ಮಗುವನ್ನು ಉಳಿಸಿ ಎಂದು ಗೋಗರೆಯುತ್ತಾನೆ. ಈ ಸಂದರ್ಭ ಯಾವುದೇ ವಿದ್ಯಾಭ್ಯಾಸಗಳಿಲ್ಲದ ಕೆಳ ಜಾತಿಯಲ್ಲಿ ಹುಟ್ಟಿದ್ದ ಕುಂಟರಾಮನ ಮನೋಸ್ಥೈರ್ಯಕ್ಕೆ ಬೆಲೆ ಕಟ್ಟಲು ಅಥವಾ ಹೋಲಿಕೆ ಮಾಡಲು ಸಾಧ್ಯವಿಲ್ಲ.

ಸರ್ಕಾರಿ ಆಸ್ಪತ್ರೆಯಲ್ಲಿ ಚಿಕಿತ್ಸೆ ಕೊಡಿಸಲು ಬಂದ ಕುಂಟರಾಮನಿಗೆ, ಹುಚ್ಚಿಯಾಗಿ ಅಲೆಯುತ್ತಿದ್ದ ಹುಡುಗಿ ಸಂಬಂಧವಾಗಿ, ತಪ್ಪು ಭಾವಿಸಿ ಆಸ್ಪತ್ರೆಯ ಸಿಬ್ಬಂಧಿ ವರ್ಗವು ಮಾತಾನಾಡುವುದನ್ನು ಕೇಳಿ ಕೋಪಗೊಂಡ ಕುಂಟರಾಮು ತಾನು ಯಾರು, ತನ್ನ ವ್ಯಕ್ತಿತ್ವ ಎಂಥದು, ಬ್ಯಾಂಕಿನಲ್ಲಿ ೫೩ ಸಾವಿರ ರೂಪಾಯಿ ಇಟ್ಟಿದ್ದೇನೆ ಎಂದು ವಿವರಿಸಿದ.

ವಿದ್ಯೆ ಕಲಿತ, ಪ್ರತ್ಯಕ್ಷ ದೇವರೆ ವೈದ್ಯರೆಂಬ ಹೆಸರಿಗೆ ಗೌರವವಾಗಿರುವ ವೈದ್ಯರು, ಯಮಧೂತರಾಗಿ ಬಡವರ ರಕ್ತ ಹೀರಿ ಹಣ ಸಂಪಾದಿಸುವ ವರ್ಗವೊಂದನ್ನು ಈ ಕಥೆಯಲ್ಲಿ ಕಥೆಗಾರರು ಚಿತ್ರಿಸಿದ್ದಾರೆ. ದೊಡ್ಡ ಡಾಕ್ಟರಮ್ಮ ಮತ್ತು ಜ್ಞಾನ ತಪ್ಪಿಸುವ ಡಾಕ್ಟರ್ ಕುಂಟರಾಮನ ಬಳಿ ಹಣವಿರುವುದನ್ನು ಕಂಡು ಸರ್ಕಾರಿ ಆಸ್ಪತ್ರೆಯಲ್ಲಿ ಸೌಲಭ್ಯವಿದ್ದೂ, ಇಲ್ಲವೆಂದೆ ಸುಳ್ಳು ಹೇಳಿ ರೋಗಿಯನ್ನು ವಿಶಾಲ ನರ್ಸಿಂಗ್ ಹೋಂಗೆ ಸೇರಿಸಬೇಕೆಂದು ಅಲ್ಲಿ ಆಪರೇಷನ್ ಮಾಡುವ ಸಲಕರಣೆಗಳು ಇವೆಯೆಂದು ಹಣ ಸುಲಿಗೆ ಮಾಡುವುದನ್ನು ಕಾಣಬಹುದು. ದಲಿತ, ಹೊಲೆಯ ಎನ್ನುವ ಶಬ್ದಗಳು ಮನುಷ್ಯ ವರ್ಗವನ್ನೇ ಬೇರೆ ಮಾಡುವ ಕೀಳು ಪದ್ಧತಿಯಾಗಿದೆ. ಆದರೆ ನಮ್ಮ ಗ್ರಹಿಕೆ ಎನ್ನುವುದು ಕೇವಲ ಸೊಗಲಾಡಿತನ ಎನ್ನುವುದಕ್ಕೆ ಬೆಸಗರಹಳ್ಳಿ ರಾಮಣ್ಣ ಅವರ **'ಅಪ್ಪ'** ಕಥೆಯಲ್ಲಿ ಬರುವ ಸಂದರ್ಭ ಉದಾಹರಣೆಯಾಗಿದೆ. ಹೊಲೇರ ತಿಮ್ಮಿ ಊರ ಗೌಡರ ಮೇಲೆಗೌಡರ ಹೆಂಡತಿಗೆ ಎದೆಬಾವು ಆಗಿ ಹಾಲು ನಿಂತಾಗ ಎದೆಕೊಟ್ಟು, ಮೇಲೆಗೌಡರ ಮಗನಿಗೆ ಹಾಲುಣಿಸಿ, ಉಳಿದ ಹಾಲನ್ನು ತನ್ನ ಮಗ ಮುತ್ತನಿಗೆ ಕುಡಿಸಿ ಬೆಳೆಸಿದಳು. "ಇಂಥವರು ಕೀಳು ಜಾತಿಯವರಂತೆ? ಇವರನ್ನು ಮುಟ್ಟಿಸಿ ಕೊಂಡರೆ ಪಾಪವಂತೆ! ದೇವಸ್ಥಾನದೊಳಕ್ಕೆ ಹೋದರೆ, ದೇವರಿಗೆ ಮೈಲಿಗೆಯಂತೆ"(ಬೆಸಗರಹಳ್ಳಿ ರಾಮಣ್ಣ ಸಮಗ್ರ ಕಥನ ಸಾಹಿತ್ಯ, ಪುಟ- ೫೪೨). ಮೇಲೆಗೌಡರು ಗ್ರಾಮೀಣ ಪ್ರದೇಶದ, ತುಂಬುಜೀವನ ಮಾಡಿದವರು. ಅವರ ಚಿಂತನೆ ವಿದ್ಯಾವಂತರಾದ ಸುಶಿಕ್ಷಿತ ಹಾಗೂ ಸುಶಿಕ್ಷಿತರಲ್ಲದ ಜನರಿಗೆ ಮಾರ್ಗದರ್ಶನವಾಗಿದೆ.

ರಮೇಶ್ ಹುಲ್ಲುಕೆರೆ ಅವರ **'ಕಲ್ಲುಮಲೆ'** ಕಥೆಯಲ್ಲಿ ಜಾತಿ ಸಂಘರ್ಷದ ಒಂದು ಭಾಗವೆಂದೇ ಹೇಳಬೇಕು. ಕೂನುಗಲ್ಲಿನ ಹಳ್ಳಿಯಲ್ಲಿ ಸಿದ್ಧಣ್ಣ, ದೊಳ್ಳಣ್ಣ, ಅಪ್ಪಾಜಾಚಾರ್ ಕೆಳವರ್ಗದ ಜಾತಿಗೆ ಸೇರಿದವರು. ಕೂನುಗಲ್ಲಿನ ಪಟೇಲ ಹೊಲೇರ ಜಾತಿಯ ಸಿದ್ಧಣ್ಣ ತಂದೆಗೆ ಹುಟ್ಟಿದವನು ಎಂದು ಪಟೇಲನ ತಾಯಿಯೆ ಹೇಳೀರುವುದಾಗಿ ಸಿದ್ಧಣ್ಣ ಕುಡಿದ ಅಮಲಿನಲ್ಲಿ ದೊಳ್ಳಣ್ಣ ಮತ್ತು ಅಪ್ಪಾಜಾಚಾರ್ರ

ಹತ್ತಿರ ಹೇಳುತ್ತಾನೆ. ಪಟೇಲನ ಅವ್ವ ಹೊಲೇರ ಸಂಬಂಧ ಬೆಳೆಸವಳೆ ಎಂದು ತನ್ನ ತಂದೆಯನ್ನು ಕೊಂದು ಕಡಿದು ಹಾಕಿದರು ಎಂಬ ಸುದ್ದಿ ತಿಳಿಸುತ್ತಾನೆ "ಈ ಸೂಳೇ ಮಗಾ... ನನ್ನ ಹೆಂಡ್ತಿನ ಮಡಿಕೊಂಡಿದ್ದನಂತೆ... ಈಗ ಹೇಳಿ, ಆ ಪಟೇಲ ಯಾರಿಗೆ ಹುಟ್ಟಿದೋನು ಗೊತ್ತಾಯಿತೇನು? ಅವರ ಹೆಣ ಇಳುಕದೆ ಇದ್ರೆ ನಾನು ಅಪ್ಪನಿಗೆ ಹುಟ್ಟಿದ ಮಗನೇ ಅಲ್ಲ ಎಂದ ಸಿದ್ಧ"(ರಮೇಶ್ ಹುಲ್ಲಕೆರೆ, ಸೊಗಡು ಕಥಾ ಸಂಕಲನ, ೨೦೦೩, ಪುಟ–೦೯).

ಪಟೇಲರ ಹಟ್ಟಿಯ ಪಡಸಾಲೆಯಲ್ಲಿ ಜನ ತುಂಬಿದ್ದರು. ಸಿದ್ಧಣ್ಣ ಹೆಂಡತಿ ತುಂಬು ಬಸರಿ ಸತ್ತು, ಅದರ ಕಾರ್ಯದ ಖರ್ಚನ್ನು ಪಟೇಲನೇ ಬರಿಸಿರುತ್ತಾನೆ. ಎಲ್ಲ ಕಾರ್ಯಗಳು ಸರಿಯಾಗಿ ಆಯಿತೇ ಎಂದು ಕೇಳುತ್ತಾ, 'ಸಿದ್ಧ ನಿನ್ನ ಹೆಂಡತಿ ಹೆಣಕ್ಕೆ ಖರ್ಚು ಮಾಡಿರುವ ಹಣಕ್ಕೆ ಕಾಗದ ಬರೆದು ಕೊಟ್ಟುಹೋಗು' ಎನ್ನುತ್ತಾನೆ. ಹೊಲೆಯ ಸಿದ್ಧಣ್ಣ ಬಡವನಾದುದ್ದರಿಂದ ಮತ್ತು ಬರಗಾಲದ ಬವಣೆಯಿಂದ ಪಟೇಲ ಸಾಲದ ರೂಪದಲ್ಲಿ ಖರ್ಚು ಮಾಡಿರುವುದಾಗಿ ಕಾಗದಕ್ಕೆ ಸಹಿ ಮಾಡುವಂತೆ ಆಜ್ಞಾಪಿಸುತ್ತಾನೆ. ಇಲ್ಲಿ ಬಡತನದ ಮತ್ತು ಬರಗಾಲದ ಬೇಗೆಯಲ್ಲಿ ಬೆಂದ ಸಿದ್ಧಣ್ಣನಿಗೆ ಬೆಂಕಿಯಲ್ಲಿದ್ದಂತೆ ಭಾಸವಾಗತ್ತದೆ.

ಊರಿನ ಜನರೆಲ್ಲಾ ಚದುರಿದ ಮೇಲೆ. ಕತ್ತಲು ಸಂಪೂರ್ಣ ಆವರಿಸಿಕೊಂಡ ನಂತರ ಹೆಂಗಸೊಬ್ಬಳು ಪಟೇಲರ ಮನೆ ಬಳಿ ಬಂದಳು. ಅಲ್ಲೆ ಇದ್ದ ಅಪ್ಪಾಜಿಗೆ ಕಿವಿ ನೆಟ್ಟಾಗದವು. ದೊಳ್ಳನನ್ನು ಎಚ್ಚರದಿಂದ ಇರುವಂತೆ ಸಿದ್ಧ ಹೇಳಿದ. ಬಂದ ಹೆಂಗಸು "ಗೌಡ್ರೆ ಮಕ್ಕಳು ಮರಿ ಹಸಿದು ಸಾಯ್ತಿವೆ ಎನ್ನುವಳು ಪಟೇಲ ನಾನೇನು ಮಾಡ್ಲಿ, ನನ್ನ ಹತ್ತಿರ ದುಡ್ಡಿನ ಗಿಡವಿದೆಯೇ, ಬರಿಕೈಲಿ ಬಂದ್ರೆ ನಂತಾವಿ ಮೂರುಕಾಸು ಹುಟ್ಟೋದಿಲ್ಲ ಅಂತ ಗೊತ್ತುತಾನೆ? ಅಡ ಇಡುಕೆ ಏನು ತಂದಿದ್ದಿ?... ಇಟ್ಟು ಹೋಗು'(ರಮೇಶ್ ಹುಲ್ಲಕೆರೆ, ಸೊಗಡು ಕಥಾ ಸಂಕಲನ, ೨೦೦೩, ಪುಟ–೧೦). ಇಲ್ಲಿ ಬಡವರಾಗಿ ಹುಟ್ಟಿದ್ದೆ ಶಾಪವಾಗಿದೆ. ಮಳೆಯಿಲ್ಲದೆ ಕೂಲಿ ಇಲ್ಲ, ಬೆಳೆಯಿಲ್ಲ. ಹಸಿವು ನೀಗಿಸಿಕೊಳ್ಳುವಲ್ಲಿ ಪರದಾಡುವ ಬಡವರನ್ನು ಕಥೆಗಾರರು ಸೂಕ್ಷ್ಮವಾಗಿ ಗ್ರಹಿಸಿದ್ದಾರೆ. "ಯಾರಮ್ಮ ಅರೆ, ದೊಳ್ಳನ ಹೆಂಡ್ತಿ ಅಲ್ಲವಾ ನೀನು? ಇವಳು ನಿನ್ನ ಮಗಳಾ? ಅಯ್ಯಯ್ಯೋ ಇಷ್ಟು ದಿನ ಯಾಕಮ್ಮ ನಿನ್ನ ಕಷ್ಟ ಹೇಳಲಿಲ್ಲ? ಇಷ್ಟು ಚೆನ್ನಾಗಿರೋ ಮಗಳು ಇಟ್ಕೊಂಡು ಆಯಿತು, ನೀನು ಅಮ್ಯಾಲೆ ಬಂದು ನಿನ್ಗೆಷ್ಟು ಬೇಕು ಅಷ್ಟು ಈಸ್ಕೊಂಡು ಹೋಗು ಇವಳು ಇಲ್ಲೆ ಇರಲಿ. ನೀನು ಹೋಗು"(ರಮೇಶ್ ಹುಲ್ಲಕೆರೆ, ಸೊಗಡು ಕಥಾ ಸಂಕಲನ, ೨೦೦೩, ಪುಟ – ೦೯). ಶ್ರೀಮಂತ ದುಡ್ಡಿನ ಪಟೇಲ ಸುಮ್ಮನೆ

ಯಾರಿಗೂ ಸಾಲಕೊಡುವುದಿಲ್ಲ. ಪ್ರತಿಯಾಗಿ ಬೆಲೆಯುಳ್ಳ ವಸ್ತು ಇಲ್ಲವೆ ತನ್ನ ಕಾಮದಾಸೆಗೆ ಹೆಣ್ಣನ್ನು ತನ್ನಲ್ಲಿ ಅಡವಾಗಿಟ್ಟುಕೊಳ್ಳುವುದು ಇಲ್ಲಿ ಮನುಕುಲದ ಕ್ರೌರ್ಯವಾಗಿದೆ. ದೊಳ್ಳನ ಹೆಂಡತಿ ಮಗಳನ್ನೇ ಅಡವಾಗಿಟ್ಟು ಹಸಿವು ನೀಗಿಸುವ ಬರದಲ್ಲಿ ತಾಯ್ತನಕ್ಕೆ ಕಪ್ಪು ಚುಕ್ಕೆಯಾದಳು. ಸಾಲ ಕೊಡುವ ಮೂಲಕ ಎಷ್ಟೋ ಹೆಣ್ಣು ಮಕ್ಕಳ ಬಾಳು ಹಾಳು ಮಾಡಿರುವ ಪಟೇಲನ ಚಿತ್ರಣ ಸಮಾಜದಲ್ಲಿರುವ ಪಾತಕತನವನ್ನು ಧ್ವನಿಸುತ್ತದೆ. ಇಲ್ಲಿ ಕಥೆಗಾರರು ನೈತಿಕ ಚೌಕಟ್ಟನ್ನು ಮೀರಿದಂತೆ ಕಾಣುತ್ತದೆ.

ಸಿದ್ಧಣ್ಣ , ದೊಳ್ಳಣ್ಣ, ಅಪ್ಪಾಜಾಚಾರರೂ ಸೇರಿ ಕತ್ತಲಿನಲ್ಲಿ ಪಟೇಲನ ಮೇಲೆ ಎರಗಿ ಆಗುತ್ತಿದ್ದ ಅನಾಚಾರವನ್ನು ತಪ್ಪಿಸಿದರು. ಬೆಳಗಾಗುವುದರೊಳಗೆ ಮಳೆರಾಯನನ್ನು ಪೂಜಿಸುತ್ತೇವೆಂದು ಹೊಲೇರ ಕೇರಿಯಲ್ಲಿ ಡಂಗೂರ ಸಾರಿಸುತ್ತಾರೆ. ಸಂಪ್ರದಾಯದಂತೆ ಕೊಂಡಾಬಂಡಿಯ ಮೇಲೆ ಮಳೆರಾಯನಾಗಿ ಬರುವ ಬೆತ್ತಲೆ ಮನುಷ್ಯ ಯಾರು? ಎನ್ನುವ ಕೂತೂಹಲ. ಅಲಂಕಾರದ ಕೊಂಡಾಬಂಡಿಯ ಗೂಟಗಳಿಗೆ ಬೆತ್ತಲೆ ಮನುಷ್ಯನೊಬ್ಬನನ್ನು ಬಿಗಿದು ಕಟ್ಟಿದ್ದು ಪಟೇಲನನ್ನೆ. ಈ ಮೂಲಕ ಹೊಲೇರ ಕೇರಿಯ ದೊಳ್ಳಣ್ಣ, ಸಿದ್ಧಣ್ಣ ಪಟೇಲನಿಗೆ ಹೆದರದೆ ತಮ್ಮ ಹೆಣ್ಣು ಮಕ್ಕಳ ಮೇಲೆ ದೌರ್ಜನ್ಯ ಮಾಡುವ ದುರ್ಬುದ್ಧಿಗೆ ತಕ್ಕ ಪಾಠ ಕಲಿಸುತ್ತಾರೆ. ಜಾತಿ ಹಾಗೂ ಬಡತನದ ಹೆಸರಿನಲ್ಲಿ ಶೋಷಿಸುವ ಪಟೇಲನಿಗೆ ಕಾನೂನು ಶಿಕ್ಷೆಕೊಡುವ ಮೊದಲೇ ಸಿದ್ಧಣ್ಣ, ದೊಳ್ಳಣ್ಣ ಶಿಕ್ಷಿಸಿರುವುದು ಔಚಿತ್ಯವಾಗಿದೆ. ಪ್ರಸ್ತುತ ಸಮಾಜದಲ್ಲಿ ಬಡತನದ ಬದುಕಿನಿಂದ ಹೆಣ್ಣು ಮಕ್ಕಳು ತಮ್ಮ ನೈತಿಕತೆಯನ್ನು ಮಾರಿಕೊಳ್ಳುವ ಪ್ರಸಂಗಗಳು ಸಮಾಜದ ಕಳಂಕವಲ್ಲವೆ?.

ಬೋರೇಗೌಡ ಚಿಕ್ಕಮರಳಿ **'ತಲೆಮಾರು'** ಕಥೆಯಲ್ಲಿ ಮೇಲ್ವರ್ಗದವರು ಅನ್ನ ಕೊಡುವ ದೇವರು ಎಂದು ನಂಬಿದ್ದ ಜವರನಿಗೆ ಮಗ ಮಾದ(ಪುರುಷೋತ್ತಮ) ಅವರು ದೇವರಲ್ಲ ಬಡವರ ರಕ್ತ ಹೀರುವ ಜಿಗಣೆಗಳು ಎಂದು ತೋರಿಸುತ್ತಾನೆ. ತಲೆ ತಲೆ ಮಾರಿನಿಂದಲೂ ಕೆಳವರ್ಗದವರು ಮೇಲ್ವರ್ಗದ ಶೋಷಣೆಗೆ ಒಳಗಾಗುತ್ತಾ ಬಂದಿದ್ದಾರೆ. ಶೋಷಣೆಯನ್ನು ಪ್ರತಿಭಟಿಸದ ಜನಸಮೂಹವೊಂದು ದಲಿತರಾಗಿಯೇ ಉಳಿದಿದ್ದಾರೆ. ಆದರೆ ಇಂದಿನ ಪರಿಸ್ಥಿತಿಗೆ ಹೋಲಿಸಿಕೊಂಡರೆ ಇದು ಸಂಪೂರ್ಣವಾಗಿ ಬದಲಾಗಿದೆ. ಅಂದರೆ ಈ ಶೋಷಣೆ ಕಾಲಕ್ಕೆ ತಕ್ಕಂತೆ ವಿಭಿನ್ನ ರೂಪವನ್ನು ಪಡೆದುಕೊಳ್ಳುತ್ತಾ ಬಂದಿದೆ. ಶೋಷಣೆಯನ್ನು ತಮ್ಮ ಜೀವನದ ಕರ್ಮ ಫಲ ಎಂದು ಅನುಭವಿಸುತ್ತಿದ್ದ ಜನಾಂಗದ ಮುಂದಿನ

ತಲೆಮಾರು ಈ ಶೋಷಣೆಯ ವಿರುದ್ಧ ಸೆಟೆದು ನಿಲ್ಲುತ್ತದೆ. ಇತರರಂತೆ ಸಮನಾಗಿ ಶಿಕ್ಷಣ, ಉದ್ಯೋಗವನ್ನು ಪಡೆಯುವುದಲ್ಲದೇ ತಮ್ಮ ಸ್ಥಾನ-ಮಾನವನ್ನು ಮೇಲ್ವರ್ಗದವರ ರೀತಿಯಂತೆ ಉತ್ತಮ ಪಡಿಸಿಕೊಳ್ಳಲಾಗುತ್ತಿದೆ.

ತನ್ನ ಮನೆಯ ಜೀತದಾಳು, ಹೊಲೇರ ಹುಡುಗ ಮಂಚ ದನಕರುಗಳನ್ನು ಹಿಡಿದು ಹೊರಕ್ಕೆ ಕಟ್ಟಲು ಇನ್ನೂ ಬಾರದಿದ್ದುದರಿಂದ ಸಿಡಿಮಿಡಿಗೊಂಡ ಪುಟ್ಟೇಗೌಡ ಉರಿಗೆಂಡವಾಗಿ ದುತ್ತನೆ ಹೊಲೆಗೇರಿಗೆ ನುಗ್ಗಿದುದನ್ನು ನೋಡಿ, ನೀಡಿದ್ದ ಕಾಲುಗಳನ್ನು ಜವರ ಸರಕ್ಕನೆ ಹಿಂದಕ್ಕೆ ಎಳೆದುಕೊಂಡ. ಎಳೆದುಕೊಂಡ ಬಿರುಸಿಗೆ ಮಂಡಿಗಳು ಕುಳುಕ್ ಎಂದಂತಾಗಿ ಸಹಿಸಲಾಗದ ಯಾತನೆಯಾಯಿತು. 'ಅಯ್ಯಯ್ಯಪ್ಪಾ' ಎಂದು ಜವರ ನರಳಿದ. ಜವರನ ನರಳುವಿಕೆ ಕಿವಿಯ ಮೇಲೆ ಬಿದ್ದರು ಬೀಳದವನಂತೆ, ನೀಡಿದ್ದ ಕಾಲುಗಳನ್ನು ಎಳೆದುಕೊಂಡು ಗೌರವ ತೋರಿಸಿದುದನ್ನು ಕಂಡರೂ ಕಾಣದವನಂತೆ, ಎದೆಯೊಳಗಿನ ಕೋಪವನ್ನು ಮುಖಕ್ಕೆ ಇನ್ನಷ್ಟು ತುಂಬಿಕೊಂಡು, ಜಗಜಗಿಸೋ ಕೆಂಡಕ್ಕೆ ಗಾಳಿಯೂದಿಕೊಂಡು, ಹೊಲೇರ ಕಾಳನ ಗುಡಿಸಲು ಇನ್ನೂ ಹತ್ತು ಮಾರು ಇರುವಾಗಲೇ ಅವನ ಮಗ ಮಂಚನನ್ನು ಕೂಗಿಕೊಂಡು, ವಾಚಾಮಗೋಚರ ಬೈದುಕೊಂಡು ನಡೆದ ಪುಟ್ಟೇಗೌಡ. ಇಲ್ಲಿ ಹೊಲೆಯನಾದ ಜವರನು ಮೇಲು ಜಾತಿಯ ಪುಟ್ಟೇಗೌಡನಿಗೆ ಬಹಳ ಭಯ-ಭಕ್ತಿಯಿಂದ ಗೌರವ ಕೊಡುವುದು ಹಿಂದಿನಿಂದಲೂ ಬಂದ ಸಂಪ್ರದಾಯವಾಗಿದೆ. ಆದರೆ ಇದನ್ನು ಜವರನ ಮಗ ಪುರುಷೋತ್ತಮ ವಿರೋಧಿಸುತ್ತಾನೆ. "ಸುಮ್ಮನ್ ಅಮೀಕಂದ್ ಕುಂತ್ಕಳಿ ಹೋಲೀಬಡ್ಡೆತ್ತೋವ. ನೀವು ಹಿಂಗನ್ನೊತ್ಗೇ ಮಂತೆ ಅವ್ರೆಲ್ಲಾ ನಿಮ್ಮೆದೆ ಮೆಟ್ಕಂದು ತಿರ್‍ಗಾಡೂದು. ಅನ್ನ ಕೊಟ್ಟು ಸಾಕಾನಂತೆ. ಅವ್ನ್ಯಾರು ನಮ್ಗೆ ಅನ್ನ ಕೊಡಿಕೆ? ನಮ್ಮನ್ನ ನಾವು ಹುಟದಟುಸ್ಕಳೂದ ಕಾಣ್ವ"(ಬೋರೇಗೌಡ ಚಿಕ್ಕಮರಳಿ, ಗೋಡೆಗಳ ನಡುವೆ, ೨೦೦೩, ಪುಟ-೪) ಇಲ್ಲಿ ಕಥೆಗಾರರು ಪುರುಷೋತ್ತಮನ ಪಾತ್ರದ ಮೂಲಕ ದಲಿತ ವರ್ಗದ ಪ್ರಗತಿಪರ ಧೋರಣೆಯನ್ನು ಗುರುತಿಸಲು ಪ್ರಯತ್ನಿಸಿದ್ದಾರೆ.

"ತಿರ್‍ತಿರ್‍ಗ ಮಾದ ಮಾದ ಅಂತ ಕರ್‍ಯೊದೆಂತೇದು. ಅದೇನ್ ಜಾತಿ ಗುಣ್ವ, ಹಿಡ್ದುದ್ದ ಬುಡ್ನಾರೆ ಅನ್ತೀಯಲ. ಕೋರ್‍ಟ್ಗೋಗಿ ಫೀಜ್ಕಟ್ಟಿ ಹೆಸುರ್‍ಬದ್ಲಾಯಿಸ್ಕ ಬಂದಿರೂದ್ಯಾಕೆ? ಇದೇ ಕೊನೆ ಸತಿ ಹೇಳ್ತಾ ಇರೊದು. ಇನ್ನೊಂದ್ ಸತಿ ಮಾದ ಅಂತ ಕರುದ್ರೆ ನಾನ್ ಸುಮ್ನಿರಿಕಿಲ್ಲ, ತಿಳ್ಕೊ"(ಬೋರೇಗೌಡ ಚಿಕ್ಕಮರಳಿ, ಗೋಡೆಗಳ ನಡುವೆ, ೨೦೦೩, ಪುಟ-೧೫). ಮಾದ ಮೇಲ್ವರ್ಗದವರ ಸಮನಾಗಿ ನಿಲ್ಲುವ ನಿಟ್ಟಿನಲ್ಲಿ ಮೊದಲು ತನ್ನ

ಹೆಸರನ್ನು ಪುರುಷೋತ್ತಮ ಎಂದು ಬದಲಾಯಿಸಿಕೊಳ್ಳುತ್ತಾನೆ. ಇದರ ಮೂಲಕ ವೃತ್ತಿ ಆಧಾರಿತ, ನಾಮ ಆಧಾರಿತ ಜಾತಿವ್ಯವಸ್ಥೆಯನ್ನು ಖಂಡಿಸುತ್ತಾನೆ. "ಮಾದ, ಕೆಂಚ, ಮಂಚ, ರಾಚ ಅಂತ ಹೆಸ್ರಿಡ್ತೀರಲ್ಲ ಅವೆಂತೆ ಹೆಸುರ್ಗೋಳು. ಹೋಗಿ ಮೇಲ್ಜ್ಯಾತಿಯೊರ್ನೋಡಿ ಯಂತೆಂತೆ ಹೆಸ್ರಿಡ್ತರೆ ತಮ್ ಮಕ್ಕಳ್ಗೆ ಅಂತೆ. ಅಂತೆ ಹೆಸ್ರಿಡಿಕೆ ನಿಮ್ಗೇನ್ಬಂದಿದ್ದದು. ಅವ್ರೂ ನಿಮ್ಮ ತಿಪ್ಪೆಗುಂಡೀಗ್ ತಳ್ಳುದ್ರು. ನೀವೂ ಬಿದ್ಕಂದ್ರಿ. ಅಲ್ಲೇ ಬಿದ್ಕಂದು ವದ್ದಾಡ್ತೀರೇ ಹೊರ್ತು ಮ್ಯಾಕ್ಕೆದ್ಬರ್ಬೇಕು ಅಂತ ಅನ್ನಿಕೇ ಇಲ್ವಲ"(ಬೋರೇಗೌಡ ಚಿಕ್ಕಮರಳಿ, ಗೋಡೆಗಳ ನಡುವೆ, ೨೦೦೬, ಪುಟ-೦೫). ಇಲ್ಲಿ ಮಾದನ ಆಕ್ರೋಶ ತಮ್ಮವರ ಮೇಲೇಯೆ ವ್ಯಕ್ತಪಡಿಸುತ್ತಾನೆ. ಶೋಷಣೆ ಮಾಡುತ್ತಾ ಬಂದಿರುವ ಮೇಲ್ವರ್ಗದ ಜಾತಿಯನ್ನು ನಿಕೃಷ್ಟ ಮೌಲ್ಯಗಳನ್ನು ಧಿಕ್ಕರಿಸಿ ಸಮಾಜದಲ್ಲಿ ಉನ್ನತ ಸ್ಥಾನಕ್ಕೇರಬೇಕು ಎಂಬುದೇ ಅವನ ಮುಖ್ಯ ಧ್ಯೇಯವಾಗಿತ್ತು. ಪುರುಷೋತ್ತಮ ಒಂದು ದಲಿತ ಸಂಘರ್ಷ ಸಮಿತಿಯನ್ನು ಸ್ಥಾಪಿಸಿ ಅದರ ಮೂಲಕ ಶೋಷಣೆಯ ವಿರುದ್ದ ಚಳವಳಿಯನ್ನು ಆರಂಭಿಸಿರುತ್ತಾನೆ. ಇಂತಹ ಬದಲಾವಣೆಗೆ ಪ್ರಮುಖ ಕಾರಣ ಮಧ್ಯಮವರ್ಗದ ಶಿಕ್ಷಿತರು. ಅವರ ಹೋರಾಟ, ಸಿದ್ದಲಿಂಗಯ್ಯರಂತಹ ಮಹನೀಯರಿಂದ ಶೋಷಣಾ ವಿರುದ್ಧ ಚಳವಳಿ, ಸಾಹಿತ್ಯದಿಂದ ಪ್ರೇರಣೆ ಪಡೆದ ಯುವ ಸಮೂಹ ಅದರಲ್ಲೂ ಕೆಳವರ್ಗದ ದಲಿತ ಸಮೂಹ ಇಂತಹ ದಲಿತ ಸಮಿತಿಗಳ ಮೂಲಕ ತಮ್ಮ ಆಕ್ರೋಶವನ್ನು ಅಭಿವ್ಯಕ್ತಿಗೊಳಿಸುತ್ತಿದ್ದವು.

ಮುಗ್ಧರಾದ ಜವರಯ್ಯ ಮತ್ತು ತಿಮ್ಮಿಗೆ ಈ ಸಮಾಜದ ಬಗ್ಗೆ ಮಾದ ಅರಿವು ನೀಡುವುದರ ಜೊತೆಗೆ ಶಿಕ್ಷಣ ಕಲಿತು ದಲಿತರಿಗಾಗಿ ಸರ್ಕಾರ ನೀಡುವ ಸವಲತ್ತನ್ನು ಬಳಸಿಕೊಳ್ಳುವಲ್ಲಿ ಮಾರ್ಗದರ್ಶಿಯಾಗುತ್ತಾನೆ. ಪುಟ್ಟೇಗೌಡರು 'ಹೌದು ಸ್ವಾಮಿ. ನಮ್ಮೂರ್ನವ್ರೆಯ. ಅವ್ರು ಜವ್ರಯ್ಯ ಅಂತ. ಇವ್ರು ಜವ್ರಯ್ನೋರ್ಮಗ ಪುರ್ರೋತ್ಮ ಅಂತ' ಈ ಮಾತುಗಳು ಬದಲಾವಣೆಯ ಹಂತವನ್ನು ತೋರುತ್ತದೆ. ಅಲ್ಲದೆ ಪುರುಷೋತ್ತಮ ಹಾಗೂ ತಂದೆ ಜವರಯ್ಯ ಪಾಂಡುಪುರದ ಬ್ರಾಹ್ಮಣರ ಹೊಟೇಲಿನಲ್ಲಿ ಊಟ ಮಾಡುವುದು, ಈ ಎಲ್ಲಾ ಅಂಶಗಳು ಮೇಲ್ವರ್ಗದವರನ್ನು ಮಣಿಸುವ ಶಿಕ್ಷಿತ ವರ್ಗವನ್ನು ಸಂಕೇತಿಸುತ್ತದೆ. ಮಗ ಸೈಕಲ್ಲು ಕಲಿತದ್ದು, ಮಗನ ಜೊತೆ ಸೈಕಲಲ್ಲಿ ಬರುವುದು, ಮಂಗಳೂರು ಹೆಂಚಿನ ಮನೆಯನ್ನು ಮಗ ಕಟ್ಟಿಸುವುದು ಇವೆಲ್ಲಾ ದಲಿತರಿಗೆ ಸಿಕ್ಕ ಜಯವಾಗಿದೆ.



ಜಾತಿ ಸಂಘರ್ಷದ ಮತ್ತೊಂದು ವಸ್ತುವನ್ನುಳ್ಳ ಕಥೆ ಬೋರೇಗೌಡ ಚಿಕ್ಕಮರಳಿ ಅವರ **'ಮುಕ್ತಿ'** ಕಥೆಯಾಗಿದೆ. ಜಾಡಮಾಲಿ ರಂಗನ ಮಗ ರಾಮು

ಬಡತನದ ದೆಸೆಯಿಂದ ಆಸೆ ಪಟ್ಟದ್ದನ್ನು ಪಡೆಯಲು ಸಾಧ್ಯವಾಗದೆ ಕಳ್ಳತನ ಮಾಡಿ ಊರು ಬಿಟ್ಟು ಹೋಗುವನು.  ತಾಯಿ ಆಸೆಯಂತೆ ರಾಮ ಜೀತಕ್ಕಿರುವ ಬದಲು ಊರು ಬಿಟ್ಟು ಕೊಯಮತ್ತೂರಿನ ತನ್ನ ಮಾವನ ಮನೆಗೆ ಹೋಗಿ ಶಾಲೆ ಸೇರುವನು.  ಕಥಾ ಶೀರ್ಷಿಕೆಯಂತೆ ರಾಮನು ಜೀತದಿಂದ ಮುಕ್ತಿ ಪಡೆಯುತ್ತಾನೆ. ಕಥೆಯಲ್ಲಿ  ರಾಮ ಎಂಬ ೧೪ ವರ್ಷದ ಮಾದಿಗರ ಹುಡುಗ ಮೇಲ್ವರ್ಗದ ಕೆಂಪಜ್ಜನ ರಗ್ಗನ್ನು ಕದಿಯುವ ಪ್ರಸಂಗದಿಂದ ಆರಂಭವಾಗುತ್ತದೆ.  ಊರ ನಡುವೆ ಇರುವ. ಹದಿನಾರು ಕಂಬದ ತೊಟ್ಟಿಯ ದೊಡ್ಡ ಮನೆಯ ಎತ್ತರದ ಜಗುಲಿಯಲ್ಲಿ ಮಂಚದ ಮೇಲೆ ಮಲಗಿದ್ದ ಕೆಂಚಪ್ಪ ಹೊದ್ದುಕೊಂಡಿದ್ದ ಹೊಸ ಉಲ್ಲನ್ ರಗ್ಗನ್ನು ಎರಡೂ ಕೈಗಳಿಂದ ಬಿಗಿಯಾಗಿ ಹಿಡಿದು ಒಂದೇ ಸಲಕ್ಕೆ ಜಾಡಿಸಿ ಎಳೆದು ಕ್ಷಣಾರ್ಧದಲ್ಲಿ ಮುದುರಿ ಎಡ ಕಂಕುಳಲ್ಲಿ ಇರುಕಿಕೊಂಡು ಓಟಕೀಳಲು, ರಾಮ ಕೇಳಿಸಿಕೊಂಡದ್ದು ಕೆಂಚಪ್ಪನ 'ಯಾರ್ಲ, ಯಾರ್ಲ ಅವ್ನು' ಎಂಬ ಕೂಗನ್ನು ಮಾತ್ರ. ಅವ್ವ ಈಗ್ಗೆ ನಾಲ್ಕೈದು ದಿನಗಳಿಂದ ಆಷಾಡದ ಗಾಳಿ ಬೀಸಲು ಶುರುವಾಗಿ ಚಳಿ ತಡೆಯಲಾರದೆ ಮಗ ಗಡಗಡನೆ ನಡುಗುವುದನ್ನು ನೋಡಲಾರದೆ ಊರೊಳಕ್ಕೆ ಹೋಗಿ ನಾಲ್ಕೈದು ಮನೆಗಳಲ್ಲಿ ಬೇಡಿ ತಂದಿದ್ದ ಮೂರ್‍ನಾಲ್ಕು ಹಳೇ ಸೀರೆಗಳನ್ನು ಒಟ್ಟಿಗೆ ಸೇರಿಸಿ ಹೊಲಿದು ರಾಮನಿಗಾಗಿಯೇ ಒಂದು ಒಳ್ಳೆ ಚನ್ನಾದ ರಗ್ಗು ಮಾಡಿದ್ದಳು.  ಅಂತಹುದೇ ಒಂದು ರಗ್ಗು ಈಗಾಗಲೇ ಅವಳ ಬಳಿ ಇತ್ತಾದರೂ ಈಗ ಅದು ಹಳೆಯದಾಗಿ ಹೋಗಿದೆ.  ಸಾಲದ್ದಕ್ಕೆ ಈಗ ಮಗ ಒಸಿ ಬೆಳೆದಿದ್ದಾನೆ. ತಾನು ಹೊದ್ದುಕೊಳ್ಳುವ ರಗ್ಗು ಅವನಿಗೂ ಸಾಲದು ಎಂಬುದು ಅವಳ ಲೆಕ್ಕಾಚಾರ. ಅವ್ವ ಪ್ರೀತಿಯಿಂದ ಸಿದ್ಧಪಡಿಸಿದ ಹೊಸ ರಗ್ಗನ್ನು ರಾಮ ಎರಡು ರಾತ್ರಿಗಳಿಂದ ಹೊದ್ದುಕೊಳ್ಳುತ್ತಿದ್ದಾನೆ.  ಆದರೂ ಆಷಾಡದ ಗಾಳಿಯ ಆರ್ಭಟದಿಂದ ಚಳಿ ಹೆಚ್ಚುತ್ತದೆ.  ಆದ್ದರಿಂದ ರಾಮನಿಗೆ ಮೇಗಲಕೇರಿಯ ಊರ ಗೌಡ ಕೆಂಚಪ್ಪ ಹೊದ್ದುಕೊಂಡಿದ್ದ ಹೊಸ ಉಲ್ಲನ್ ರಗ್ಗು ನೆನಪಾಯಿತು.  ರಾಮ ತಂದೆಯ ಬಳಿ ಉಲ್ಲನ್ ರಗ್ ಬೇಕೆಂದು ಮಧ್ಯರಾತ್ರಿಯಲ್ಲಿ ಹಟ ಹಿಡಿಯುತ್ತಾನೆ.  "ಉಲ್ಲನ್‌ರಗ್ ಹೊದ್ಕಳೊ ಕನ್ಸ್ ಕಾಣ್ತಾ ಇರ್ಬೋದು ಎಂದುಕೊಂಡ ರಂಗ ನಮ್ಗೆಲ್ಲಿಂದ ಬರ್ಬೇಕಪ್ಪ ಅಂತ ಪುಣ್ಯ.  ಅದೆಲ್ಲ ಏನಿದ್ರೂ ದೊಡ್ಡೋರ್ ಪಡ್ಕ ಬಂದುದ್ದು"(ಬೋರೇಗೌಡ ಚಿಕ್ಕಮರಳಿ, ಗೋಡೆಗಳ ನಡುವೆ, ೨೦೦೬, ಪುಟ–೬೦).  ಈ ಸಂದರ್ಭವು ದಲಿತರ ದಾರುಣ್ಯ ಬದುಕಿನ ಅವ್ಯವಸ್ಥೆಯನ್ನು ಕಥೆಗಾರರು ಓದುಗರ ಮುಂದೆ ತರೆದಿಡುವ  ಪ್ರಯತ್ನ ಮಾಡಿದ್ದಾರೆ.

ರಾಮಿ ತನಗಿದ್ದ ಒಬ್ಬನೇ ಮಗನನ್ನು ಬಲು ಅಕ್ಕರೆಯಿಂದ ಬೆಳೆಸುತ್ತಿದ್ದಳು. ಬಗೆಬಗೆಯ ಅಡುಗೆ ಮಾಡಿ ಬಡಿಸುವ ಮೂಲಕ ಅಲ್ಲ, ಊರ ಗೌಡರ ಮನೆಗಳಲ್ಲಿ ತಿರಿದು ತಂದುದ್ದನ್ನೆ ಒಪ್ಪವಾಗಿ ಉಣ್ಣಲು ಇಕ್ಕುವಾಗ ಆ ಊಟದಲ್ಲಿ ಅವಳ ಅಕ್ಕರೆ ಬೆರೆತಿರುತ್ತಿತ್ತು. ಈಗ ಹದಿನಾಲ್ಕರ ಪ್ರಾಯಕ್ಕೆ ಬಂದಿರುವ ರಾಮು ಏಳೆಂಟು ವರ್ಷದವನಿರುವ ತನಕ ಅವನ ಊಟಕ್ಕೆಂದೇ ಬೇರೆ ಪಾತ್ರೆ ತೆಗೆದುಕೊಂಡು ಊರೊಳಕ್ಕೆ ಹೋಗಿ "ಅವ್ವ, ಬೆಳ್ಯ್ಯಾ ಮಗ, ಚಿಸಿ ಅನ್ನ ಸಾರಿದ್ರೆ ಬುಡವ್ವ ಎಂದು ಬೇಡಿ ತರುತ್ತಿದ್ದಳು. ಯಾರಾದರೂ ಬಾಡು ತಂದವರ ಮನೆಯನ್ನು ಗುರುತು ಮಾಡಿಕೊಂಡು ಅವರ ಮನೆ ಬಾಗಿಲಲ್ಲಿ ನಿಂತು ಅವ್ವ, ಮಗೀಗೆ ಚಿಸಿ ಬಾಡ್ನೆಸುರ್ ಬುಡವ್ವ ಎಂದು ಕೇಳುತ್ತಿದ್ದಳು. ರಾಮು ಹಾಕಿರುವ ಅಂಗಿ ಚಡ್ಡಿ ಹರಿದು ಚಿಂದಿಯಾದರೆ ಅವನ ಅಳತೆಯ ಹುಡುಗರಿರುವ ಮನೆಗೆ ಹೋಗಿ ಕಾಡಿ ಬೇಡಿ ಹಳೆಯ ಅಂಗಿ ಚಡ್ಡಿಯನ್ನು ತಂದು ಇಕ್ಕಿ ಸುಖಪಡುವಳು. ತಲೆ ಒಣಗಿ ಕೂದಲು ಕೆದರಿಕೊಂಡಾಗ ಕೈ ಹಿಡಿದು ಎಳೆದುಕೊಂಡು ಹೋಗಿ ಯಾರ ಮನೆಯ ಬಾಗಿಲಲ್ಲಾದರೂ ನಿಲ್ಲಿಸಿ ಅವ್ವಾ, ಮಗೀನ ತಲೆ ಒಣಗಿ ಕಗ್ಗಲಾಗದೆ ಒಸಿ ಎಣ್ಣೆ ಕೊಡ್ವ"(ಬೋರೇಗೌಡ ಚಿಕ್ಕಮರಳಿ, ಗೋಡೆಗಳ ನಡುವೆ, ೨೦೦೬, ಪುಟ-೫೮) ಎಂದು ಗೋಗರೆದು ತನ್ನ ಅಂಗೈಗೆ ಹರಳೆಣ್ಣೆ ಬಿಡಿಸಿಕೊಂಡು ರಾಮನ ನೆತ್ತಿಗೆ ಬಲವಾಗಿ ಉಜ್ಜಿ ಕೂದಲನ್ನು ನೀವುವಳು. ಅವರ ಗುಡಿಸಲಿನ ಒಳಕೋಣೆಯಲ್ಲಿ ಒಂದು ಒಲೆ ಎಂಬುದು ಇದೆಯಾದರೂ ಅದನ್ನು ಹೊತ್ತಿಸಿ ಅಡಿಗೆ ಮಾಡಿದ ದಿನವನ್ನ ರಾಮು ಕಂಡೇ ಇಲ್ಲ. ಹೀಗೆ ಬಡತನದ ಬದುಕು ಸಾಗುತ್ತಿತ್ತು.

ಕೆಂಚಪ್ಪನ ರಗ್ಗು ಹೊದ್ದುಕೊಂಡು ಮಲಗಿದರೆ ಸುಖವಾಗಿ ನಿದ್ದೆ ಹತ್ತುತದೆ ಎಂದು ರಾಮು ಭಾವಿಸಿದ್ದು ಸುಳ್ಳಾಯಿತು. ಓಡಿಬಂದ ದಣಿವು, ಮನಸ್ಸಿನ ಆತಂಕ, ಭಯಗಳಿಂದ ಅವನ ಮೈ ಮತ್ತೆ ಮತ್ತೆ ಬೆವರತೊಡಗಿತು. ತಲೆದಿಂಬಿನ ಬಟ್ಟೆಗೆ ಎಷ್ಟು ಒರೆಸಿಕೊಂಡರೂ ಮುಖದ ಬೆವರು ನಿಲ್ಲದು. ಬೆಳಕಿನಲ್ಲಾಗಿದ್ದರೆ ಒಂದು ಚೊಂಬು ನೀರು ಕುಡಿದುಬಿಡಬಹುದಾಗಿತ್ತು ಅಷ್ಟೊಂದು ದಾಹ. ಒಳಗಿನ ಸೆಕೆಯ ಜೊತೆಗೆ ರಗ್ಗಿನ ಸೆಕೆಯೂ ಸೇರಿ ಮೈಯೆಲ್ಲಾ ಚುಚ್ಚ ತೊಡಗಿತು. ಸೂರಿನಡಿಯಿಂದ ತೂರಿಬರುತ್ತಿದ್ದ ತಣ್ಣನೆಯ ಗಾಳಿ ಎಲ್ಲಿ ಅಡಗಿಕೊಂಡಿತೋ ಎನಿಸಿ ಹೊದ್ದಿದ್ದ ರಗ್ಗನ್ನು ಒಕ್ಕಡೆಗೆ ಜಾಡಿಸಿ ಕತ್ತಲಲ್ಲೇ ಎದ್ದು ಕೂತ. ಎಲ್ಲೋ ಹೋಗಿದ್ದ ಬೆಳಗಿನ ಜಾವಾ ಸ್ಕೂಟರು ವಾಪಸ್ಸು ಬಂದು ಮನೆಯ ಮುಂದೆ ನಿಂತಂತಾಯಿತು. ಒಂದು ಕ್ಷಣ ಎಲ್ಲಾ ತಣ್ಣಗಾದಂತಾಗಿ ರಾಮು ರಗ್ಗು ಹೊದ್ದುಕೊಂಡು ಮತ್ತೆ ಮಲಗಿದ. ಇನ್ನೇನು

ನಿದ್ದೆಯ ಜೋಂಪು ಹಿಡಿಯಬೇಕು, ಯಾರೋ ಗುಡಿಸಲಿನ ಮುಂದೆ ನಿಂತು 'ರಂಗ ರಂಗ ಲೋ' ಎಂದು ಕೂಗಿದರು. ರಾಮನನ್ನು ಮಲಗಿಸಿ ಕೊಂಡಿದ್ದ ಭೂಮಿ ಆಳಕ್ಕೆ, ಪಾತಾಳಕ್ಕೆ ಇಳಿದುಹೋಗುತ್ತಿರುವಂತಾಯಿತು.

"ಅವ್ನ್ ಯಾರ್ಲ ರಾಮು; ರಗ್ಗುನ್ ಸಮೇತ ಈಟುಗ್ ಬಂದ್ರೆ ಸರಿ. ಇಲ್ದೆವೋದ್ರೆ ನಿಮ್ಮಪ್ಪುನ್ನೂ ಒಳಿಕ್ ಸೇರ್ಸಿ ಗುಡ್ಲುಗೆ ಬೆಂಕಿ ಹಾಕ್ಬುಡ್ತೀವಿ ನೋಡು. ಮಾಡೂದ್ ಮಾಡ್ಬುಟ್ಟು ಮೂಲೆಲ್ ಮುದುರ್ಕಂದ್ ಕುಂತಿದ್ದಿಯ"(ಬೋರೇಗೌಡ ಚಿಕ್ಕಮರಳಿ, ಗೋಡೆಗಳ ನಡುವೆ, ೨೦೦೬, ಪುಟ-೬೮) ಎಂದು ಬೋರೇಗೌಡ ಹೇಳುವ ಮಾತುಗಳಲ್ಲಿ ಬಡವರ ಮೇಲಿನ ದೌರ್ಜನ್ಯ ತೋರುತ್ತದೆ. ಇಲ್ಲಿ ಕಥೆಗಾರರು ರಗ್ಗನ್ನು ಸಂಕೇತವಾಗಿ ಇಟ್ಟುಕೊಂಡು ಬಡತನವನ್ನು ಚಿತ್ರಿಸಿದ್ದಾರೆ. ತನಗೆ ಬೇಕಾದ್ದನ್ನು ರಾಮ ತೆಗೆದುಕೊಂಡ ರೀತಿ, ತನಗೂ ಅದರ ಮೇಲೆ ಹಕ್ಕಿದೆ ಎಂಬುದನ್ನು ಸಂಕೇತಿಸುತ್ತದೆ.

ರಾಮ ಕಾಣೆಯಾದ ಒಂದು ವಾರಕ್ಕೆ ಸರಿಯಾಗಿ ಕೊಯಮತ್ತೂರಿನಲ್ಲಿದ್ದ ರಾಮಿಯ ತಮ್ಮ ಬರೆದ ಕಾಗದ ರಂಗನಿಗೆ ತಲುಪಿತು. ರಾಮ ರಾತ್ರಿಸ್ಕೂಲಿಗೆ ಓದಲು ಹೋಗುತ್ತಿದ್ದಾನೆಂದೂ, ಚೆನ್ನಾಗಿ ಓದು ಬರಹ ಕಲಿತ ಮೇಲೆ ಇನ್ನೊಂದೆರಡು ವರ್ಷಕ್ಕೆ ಎಸ್ಸೆಲ್ಸಿ ಕಟ್ಟಿಸಬಹುದೆಂದೂ, ಪಾಸು ಮಾಡಿಕೊಂಡರೆ ಕಾರ್ಪೋರೇಷನ್ನಿನಲ್ಲಿ ಏನಾದರೊಂದು ಕೆಲಸ ಕೊಡಿಸುವುದು ಖಂಡಿತವೆಂದೂ ಅವರ ಮಾವ ಕಾಗದದಲ್ಲಿ ಬರೆದಿದ್ದ. ರಾಮ ರಗ್ಗು ಕದ್ದುದು ತಪ್ಪಲ್ಲ, ಅವನಿಗೆ ಬೇಕಾಗಿದುದ್ದನ್ನು ಅದು ಇರುವ ಕಡೆಯಿಂದ ಪಡೆದುಕೊಂಡಿದ್ದಾನೆ. ಹಿಂದೆ ರಾಜ ಮಹಾರಾಜರು ತಮಗೆ ಇಷ್ಟವಾದ ಹೆಂಗಸರನ್ನು ಅಪಹರಿಸಿಕೊಂಡು ಹೋಗಿ ತಮ್ಮ ಮಡದಿಯರೊಡನೆ ಇರಿಸಿಕೊಂಡು ಬಾಳಿಸುತ್ತಿದ್ದರು. ಹಾಗೆಯೇ ಇದು. ರಾಮ ಅಪಹರಿಸಿಕೊಂಡು ತಂದ ರಗ್ಗನ್ನು ಜೋಪಾನವಾಗಿ ಇಟ್ಟುಕೊಂಡು ಬಳಸುತ್ತಿದ್ದಾನೆ ಎಂಬ ಒಕ್ಕಣಿಯೂ ಅದರಲ್ಲಿತ್ತು.

ಕಥೆಗಾರರು ರಾಮ ರಗ್ಗು ಕದ್ದಿದ್ದನ್ನು ಸಮರ್ಥಿಸಿಕೊಂಡಿದ್ದಾರೆ. ರಾಮನ ತಾಯಿಯ ತುಡಿತ ಜೀತ ಪದ್ಧತಿಯಿಂದ ಮಗನನ್ನು ಮುಕ್ತಗೊಳಿಸುವುದೇ ಆಗಿತ್ತು. ಕಥೆಗಾರರು ತಮ್ಮ ಆಶಯದಂತೆ ರಾಮನನ್ನು ಶಾಲೆಗೆ ಸೇರಿಸುವುದರ ಮೂಲಕ ಅಭಿವ್ಯಕ್ತಿಗೊಳಿಸಿದ್ದಾರೆ. ತಲೆಮಾರುಗಳಿಂದ ನಡೆದು ಬಂದಿರುವ ಜೀತ ಪದ್ಧತಿಗೆ ಅಂತ್ಯಗೊಳ್ಳಬೇಕೆಂಬ ತುಡಿತ ಈ ಕಥೆಯಲ್ಲಿ ಇದೆ.

ನಾಗತಿಹಳ್ಳಿ ಚಂದ್ರಶೇಖರ ಅವರ **'ಬಾಣಲೆಯಿಂದ ಬೆಂಕಿಗೆ'** ಕಥೆಯು ಕಾರಂತರ 'ಚೋಮನ ದುಡಿ'ಯನ್ನು ಹೋಲುತ್ತದೆ. ಚೋಮನಿಗೆ ಜಮೀನು ಬೇಕೆಂದರೆ ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರ ಹೊಂದಬೇಕೆನ್ನುವ ಧೋರಣೆ ರೀತಿಯಲ್ಲಿ ಈ ಕಥೆಯು ಮೂಡಿ ಬಂದಿದೆ. ಈ ಕಥೆಯಲ್ಲಿ ಬರುವ ಕರಿಯ ಎಂಬ ಪಾತ್ರದಾರಿ ಮುಸ್ಲಿಂ ಧರ್ಮಕ್ಕೆ ಮತಾಂತರಗೊಂಡು ತನಗೆ ಬಂದಿರುವ ಕಷ್ಟಗಳಿಂದ ಪಾರಾಗಲು ಬಯಸುತ್ತಾನೆ. ಚೋಮನು ಗುಡಿಯ ಮುಂದೆ ನಿಂತು ಸರಿ ತಪ್ಪುಗಳನ್ನು ಪರಾಮರ್ಶಿಸಿ ಹಿಂದಿರುಗುತ್ತಾನೆ. ಇಲ್ಲಿ ಕರಿಯ ಮುಸ್ಲಿಂನಾಗಿ ಕಷ್ಟಗಳಿಂದ ಮುಕ್ತಿಪಡೆಯುವ ಆತುರದಿಂದ ಇನ್ನೊಬ್ಬರ ಬಲಿಪಶುವಾಗುತ್ತಾನೆ. ಆದ್ದರಿಂದ 'ಬಾಣಲೆಯಿಂದ ಬೆಂಕಿಗೆ' ಎಂಬ ಶೀರ್ಷಿಕೆ ಸೂಕ್ತವಾಗಿದೆ.

ಕರಿಯ ಗೌಡರ ಮನೆಯ ಜೀತಕ್ಕೆ ಸೇರಿದ್ದು ಅನ್ಯಾಯದಿಂದ. ಕರಿಯನ ತಂದೆ ಕುಡಿದು-ಕುಡಿದು ಸತ್ತ ಮೇಲೆ ಗೌಡ ಬಂದು ನಿಮ್ಮಪ್ಪ ಸಾಲ ಪಡೆದಿದ್ದ ಅದನ್ನು ತೀರಿಸಲು ಜೀತಕ್ಕೆ ಸೇರಿಕೊ ಎಂದು ಜೊರು ಮಾಡಿದನು. "ನಿಮ್ಮಪ್ಪ ಸಾಲ ಮಾಡವ್ನೆ, ಕೋರ್ಟು ಕಛೇರಿ ಅಂತ ಹೋಗಿ ನಿನ್ನ ತೆಳ್ಗೆ ಮಾಡೋಕಿಲ್ಲ. ಅಪ್ಪ ಮಾಡಿದ್ದ ಸಾಲ ನೀನಾದ್ರೂ ತೀರ್ಸಿ ಅಪ್ಪನ ಹೆಸರು ಉಳಿಸು. ದುಡ್ಡು ಹೊಂಚಕಾಗದಿದ್ರೆ ನನ್ಮನೇಲೇ ಜೀತಕ್ಕಿರು. ಮೂರು ಹೊತ್ತು ಊಟ ವರ್ಸಕ್ಕೆರ್ಡು ಜೊತೆ ಬಟ್ಟೆ ಕೊಟ್ಟು ವರ್ಷಕ್ಕೆ ನೂರ್ರಂಗೆ ಮಾರಾಯ್ಕತೀನಿ"(ಶಂಭೂನಹಳ್ಳಿ ಕೃಷ್ಣೇಗೌಡ(ಸಂ) ಮಂಡ್ಯದ ಮಣ್ಣಿನ ಕಥೆಗಳು, ೧೯೮೬, ಪುಟ-೯೫) ಇಲ್ಲಿ ಅಕ್ಷರ ತಿಳಿಯದ ಕರಿಯನಿಗೆ ಮೇಲ್ವರ್ಗದ ಊರಿನ ಗೌಡ ಯಾವುದೋ ಪತ್ರ ತೋರಿಸಿ ನಿಮ್ಮಪ್ಪ ಸಾಲ ತೆಗೆದುಕೊಂಡು ತೀರಿಸಿಲ್ಲ. ಅದನ್ನು ತೀರಿಸಲು ನೀನು ಜೀತಕ್ಕಿರಲೇಬೇಕೆಂಬ ಅಧಿಕಾರ ಚಲಾಯಿಸುತ್ತಾನೆ. ಏನು ತಿಳಿಯದ ಕರಿಯ ಒಪ್ಪಿಕೊಂಡು ಬೆಳಗಿನ ಸೂರ್ಯ ಉದಯವಾಗುವ ಮುಂಚಿತವಾಗಿ ಗೌಡರ ಮನೆಯಲ್ಲಿ ಕೆಲಸ ಮಾಡುತ್ತಾನೆ.

ಕರಿಯ ಕೋಳಿ ಕೂಗುವ ಮೊದಲು ಏಳಬೇಕು. ಕೊಟ್ಟಿಗೆಯ ಕಸ ತೆಗೆಯಬೇಕು, ಹೊರಲಾರದ ದೊಡ್ಡ ಸೊಪ್ಪು ಹೊರೆ ತರಬೇಕು, ತೋಟದಲ್ಲಿ ಗುದಮೊಟ್ಟೆ, ಕರಂಬಳೆ ಗುಡ್ಡೆ ಮಾಡಿ, ದನಕರ ಕಟ್ಟಿ, ಮೈತೊಳೆದು, ದನಿಗೆ ಕಡ್ಡಿ ಕತ್ತರಿಸಿ ಹಾಕಿ, ಹೀಗೆ ಹೆಣಬಾರದ ಕೆಲಸ. ಮೂಕ ಪ್ರಾಣಿಗಳಿಗಿಂತಲೂ ಕಡೆಯಾಗಿ ದುಡಿಮೆ ಮಾಡಿಸುತ್ತಿದ್ದರು. ಕರಿಯನಿಗೆ ಸಿಲವಾರದ ತಟ್ಟೆಯಲ್ಲಿ ಪ್ರತ್ಯೇಕ ಊಟ. ಇಲ್ಲಿ ಅಸ್ಪೃಶ್ಯಯತೆಯೂ ಬಿಂಬಿತವಾಗಿದೆ. ಕರಿಯನಿಗೆ ಬೇರೆ ಹುಡುಗರು ಶಾಲೆಗೆ ಹೋಗುವುದನ್ನು ಕಂಡು ತಾನು ಅಕ್ಷರ ಕಲಿಯಬೇಕೆಂಬ ಆಸೆ

ವ್ಯಕ್ತಪಡಿಸುತ್ತಾನೆ. ಐನೋರ ಮಗ "ಯೋಗಿ ತಂದದ್ದು ಯೋಗಿಗೆ, ಜೋಗಿ ತಂದದ್ದು ಜೋಗಿಗೆ" ಅಂತ ಹೇಳುವಲ್ಲಿ ಅಸ್ಪೃಶ್ಯತೆ ಎನ್ನುವುದು ಮೃಗಂಟಿದ ಚರ್ಮದಂತೆ ಎಲ್ಲಿ ಹೋದರು ಎಲ್ಲದಕ್ಕೂ ತಡೆಯಾಗುತ್ತದೆ.

ಕರಿಯ ತನ್ನ ಸ್ಥಿತಿಗೆ ಉಡುಸುಲ್ಲಮ್ಮನ ಗುಡಿಯ ಮುಂದೆ 'ನನ್ನಂತಾ ಪಾಪೀನಾ ಯಾಕಪ್ಪಾ ಹುಟ್ಟಿಸ್ಥೆ ಅಂತ ದೈನ್ಯನಾಗಿ ಅಡ್ಡ ಬೀಳುತ್ತಿದ್ದ.' ಅವ್ವ, ತಂಗಿ ತಿಮ್ಮಿ ಉಪವಾಸ ಇರುತ್ತಾರೆ. ಅಪರೂಪಕ್ಕೆ ಕರಿಯ ಮನೆಗೆ ಬಂದಾಗ ಅವನ ಕೈಬಾಯಿ ನೋಡುತ್ತಾರೆ. ಗೌಡರ ಹೆಂಡತಿ ಕೊಟ್ಟ ಹಳೆ ಸೀರೆ ರವಿಕೆಯನ್ನು ತಂದು ಕೊಡುತ್ತಾನೆ. ದಟ್ಟ ದರಿದ್ರ ಬಡತನದ ಜೊತೆಗೆ ಶೋಷಣೆಯ ತುತ್ತತುದಿ ಇನ್ನೊಂದು ಕಡೆ. ಇದೆನ್ನೆಲ್ಲಾ ನೆನೆದು ಕರಿಯ "ನಾವು ಹೋಲೇರು, ಗೌಡ್ರು, ಐನೋರು ಇವ್ರೇಲ್ಲಾ ತಿಂದು ಮಿಕ್ಕಿದ್ದು, ಉಟ್ಟು ಬಿಟ್ಟಿದು ತಗೊಂಡು ಸಂತೋಷ ಕಾಣ್ಬೇಕು"(ಶಂಭೂನಹಳ್ಳಿ ಕೃಷ್ಣೇಗೌಡ(ಸಂ), ಮಂಡ್ಯದ ಮಣ್ಣಿನ ಕಥೆಗಳು, ೧೯೮೭, ಪುಟ-೬೭) ಈ ಮಾತುಗಳಲ್ಲಿ ಕೌರ್ಯ ಮೊನಚನ್ನು ಕಾಣಬಹುದು. ಕರಿಯ ಜೀತದಿಂದ ಬೇಸತ್ತು ಹುಲ್ಲಿಕೆರೆ ಅಮ್ಮನ ಹಬ್ಬ ಬಂದಾಗ ಇನ್ನು ಎಷ್ಟಿದೆ ಸಾಲ ಎಂದು ಧಣಿಗಳನ್ನು ಕೇಳುತ್ತಾನೆ. 'ಅಯ್ಯೋ ಬಡ್ಡಿ ಹೈದ್ನೆ ನೀನು ಸಾಯೋವರ್ಗೂ ಗೇದ್ರೂ ತೀರಾಕಿಲ್ಲ ಕಣ್ಣಾ' ಗೌಡನ ಮಾತುಗಳನ್ನು ಕೇಳಿ ಕರಿಯನಿಗೆ ಜೀವ ಅರ್ಥವಾಯಿತು. ನನ್ನ ಹಣೆಬರಹ ಇಷ್ಟೇ ಎಂದು ದುಡಿಮೆ ಮಾಡಲು ಹೊರಟ.

ಕುರಿಮೇಯಿಸಲು ಹೋದಾಗ ಸಫಿಸಾಬ್ರು ಪರಿಚಯವಾಗಿ ಜೀವದ ಗೆಳೆಯರಾದರು. ತನ್ನ ಎಲ್ಲಾ ಸಮಸ್ಯೆಗಳನ್ನು ಸಫಿಸಾಬ್ರು ಹತ್ತಿರ ಹೇಳಿಕೊಂಡಾಗ ಕರಿಯನ ಸಮಸ್ಯೆಗಳಿಗೆ ಪರಿಹಾರ ಎಂದರೆ ಮುಸಲ್ಮಾನನಾಗಿ ಮತಾಂತರವಾಗುವುದು. ತಂಗಿ ತಿಮ್ಮಿ ಮದುವೆ ಮಾಡಲು ಹಣ, ಅವ್ವನನ್ನು ನೋಡಿಕೊಳ್ಳಲು, ತಾನು ಸ್ವತಂತ್ರ ಜೀವಿಯಾಗಿ ಬದುಕಲು ಮುಸ್ಲಿಂನಾಗಿರುವುದು ಎಂದು ಸಫಿಸಾಬ್ರು ಇಲ್ಲದನ್ನು ಕರಿಯನ ತಲೆಗೆ ತುಂಬಿದನು. ಕರಿಯ ಹೇಗೆ ಎಂಬುದನ್ನು ತಿಳಿದು ಬೆಚ್ಚಿಬಿದ್ದನು. ನಮ್ಮವ್ವನ ಕೇಳಿ ಹೇಳ್ತೀನಿ ಅಂದ. ಎಷ್ಟು ದಿನ ಈ ಕಷ್ಟ ಅನುಭೋಗಿಸುವುದು, ಈ ಜಾತಿ ಬೇಡ ನಾವೆಲ್ಲ ಸಾಬರಾದ್ರೆ ಚಿಂತೆ ಇರುವುದಿಲ್ಲವಂತೆ. ಆ ಜಾತೀಲಿ ಎಲ್ಲಾರು ಒಂದೇ ಅಂತೆ. ಸಾಬರಾದ್ರೆ ಜಮೀನು ಕೋಡುತ್ತಾರಂತೆ, ಕರೀಮ ಅಂತ ಹೆಸರಿಡುತ್ತಾರಂತೆ, ಮಸೀದಿಗೆ ಹೋಗಿ ಅಲ್ಲಾನ ಪೂಜೆ ಮಾಡಬೇಕು. ಅವರ ಜಾತಿಗೆ ಸೇರಿಕೊಂಡರೆ ಕೇಳಿದಷ್ಟು ಹಣ ಕೊಡುತ್ತಾರೆ. ಹೆಣ್ಣು ಕೊಟ್ಟು ಮದುವೆ ಮಾಡುತ್ತಾರೆ ಎಂದು ಅವ್ವನಲ್ಲಿ ಹೇಳಿದ.

ಅವ್ವ ಮತ್ತು ತಿಮ್ಮಿ ಮುಸ್ಲಿಂ ಧರ್ಮಕ್ಕೆ ಮತಾಂತರವಾಗಲು ವಿರೋಧ ವ್ಯಕ್ತಪಡಿಸುತ್ತಾರೆ. ಹುಟ್ಟಿದ ಜಾತಿಯಲ್ಲಿ ಎಷ್ಟೇ ಕಷ್ಟ ಬಂದರು ಇಲ್ಲೆ ಸಾಯುತ್ತೇವೆಂದು ತಮ್ಮ ನಿರ್ಧಾರ ತಿಳಿಸಿಬಿಟ್ಟರು. ಗೌಡರ ಎರಡು ಟಗರು ಕಳುವಾಗಿ ಇದರ ಆರೋಪವು ಕರಿಯನ ಮೇಲೆ ಬರುತ್ತದೆ. ಗೌಡರು ಕರಿಯನಿಗೆ ಚನ್ನಾಗಿ ಥಳಿಸುತ್ತಾರೆ. ಇದರಿಂದ ಬೇಸತ್ತ ಕರಿಯ ತನ್ನವ್ವ, ತಂಗಿ ಸಾಯಲಿ ಮುಂಡೇವು ಅಂತ ಶಪಿಸಿ ಸಫಿಸಾಬ್ರು ಜೊತೆ ವಿಮೋಚನೆಯ ದಾರಿ ಕಂಡವನಂತೆ ಹೊರುಟುಬಿಟ್ಟ. ಮುಂದೆ ಯಾವ ದುರಂತಕ್ಕೆ ಒಳಗಾಗುತ್ತೇನೆ ಎನ್ನುವ ಸೂಚನೆಗೆ ಕಥೆಗಾರರು 'ಬಾಣಲೆಯಿಂದ ಬೆಂಕಿಗೆ' ಶೀರ್ಷಿಕೆ ನೀಡಿದ್ದಾರೆ.

ಇತ್ತೀಚಿನ ದಿನಗಳಲ್ಲಿ ಬಡವರನ್ನು ಅವರಿಗೆ ಬೇಕಾದ ಸೌಲಭ್ಯಗಳನ್ನು ಕೊಟ್ಟು ಕ್ರಿಶ್ಚಿಯನ್ ಮತ್ತು ಇತರ ಧರ್ಮಗಳಿಗೆ ಮತಾಂತರ ಮಾಡುತ್ತಿರುವುದು ಸಾಮಾನ್ಯವಾಗಿದೆ. ಒಟ್ಟಾರೆ ದಲಿತನಾಗಿ ಹುಟ್ಟಿದ ತಪ್ಪಿಗೆ, ಶೋಷಣೆಗೆ ಒಳಗಾದ ಕರಿಯ ತನ್ನ ಬದುಕಿನ ಕಷ್ಟಗಳನ್ನು ನೀಗಲು ಹೊಸ ಮಾರ್ಗ ಕಂಡದ್ದು ಅದು ದುರಂತವೇ ಆಗುತ್ತದೆ.

ಭಾರತದ ಪ್ರಸ್ತುತ ರಾಜಕಾರಣ ಜಾತಿಯಾಧಾರದ ಮೇಲೆ ನಿಂತಿದೆ. ನಾಗಮಂಗಲ ಕೃಷ್ಣಮೂರ್ತಿ ಅವರ **'ಹುನ್ನಾರ'** ಕಥೆಯಲ್ಲಿ ಚುನಾವಣೆಗಳಲ್ಲಿ ಜಾತಿ ಯಾವ ರೀತಿ ಕೆಲಸ ಮಾಡುತ್ತದೆ. ಯಾವ ಜಾತಿಯವರು ಚುನಾವಣೆಗೆ ಸ್ಪರ್ಧಿಸಿದರೆ ಗೆಲ್ಲುತ್ತಾರೆ. ಒಂದೇ ಜಾತಿಯ ಒಳ ಜಗಳಗಳನ್ನು ಕಥೆಗಾರರು ಸೃಜನಶೀಲತೆಯಿಂದ ವಿವರಿಸಿದ್ದಾರೆ.

ವಾಲಗದವರ ಬೀದಿಯ ಜನರಿಗೆ ತಮ್ಮದೇ ಜನಾಂಗಕ್ಕೆ ಸಮುದಾಯ ಭವನ ಬೇಕೆನ್ನುವ ಆಸೆ. ಅದಕ್ಕಾಗಿ ಎಲ್ಲಾ ರೀತಿಯ ವ್ಯವಹಾರಗಳನ್ನು ನಡೆಸಿದರು. ಚಿಕ್ಕಮ್ಮನ ಗುಡಿಯ ಮುಂದೆ ವಿಶಾಲವಾದ ಗೋಮಾಳ ಜಾಗವಿದ್ದು ಅಲ್ಲಿ ಭವನ ಕಟ್ಟಬೇಕೆಂಬ ಆಸೆ. ಇದರ ಪಕ್ಕದಲ್ಲೇ ಮಡಿವಾಳರ ಬೀದಿ ಶುರುವಾಗುತ್ತಿತ್ತು. ಸದರಿ ಜಾಗ ನಮಗೆ ಸಿಕ್ಕರೆ ಮಾಚೀದೇವರ ಗುಡಿ ಕಟ್ಟಬಹುದೆಂಬ ಲೆಕ್ಕಚಾರ ಮಡಿವಾಳರ ಜನಾಂಗದವರು. ಇದಕ್ಕೆ ತಕ್ಕಂತೆ ಮುನ್ಸಿಪಾಲಿಟಿ ಚುನಾವಣೆ ಸಿದ್ಧತೆ ನಡೆಯುತ್ತದೆ. ಈ ವಾರ್ಡು ಹಿಂದುಳಿದ ವರ್ಗಕ್ಕೆ ಮೀಸಲಾಗಿತ್ತು, ಮೇಲ್ವರ್ಗದ ಜನರ ಕನಸು ಭಗ್ನವಾಗಿತ್ತು. ಆದರೂ ಹುನ್ನಾರ ಮಾತ್ರ ನಿಂತಿರಲಿಲ್ಲ. ಪ್ರತಿ ಸಾರಿ ಈ ಮೂರನೇ ವಾರ್ಡಿನಿಂದ ಮೇಲ್ವರ್ಗದ ಜನ ಗೆಲ್ಲುತ್ತಿದ್ದರು. ಒಟ್ಟಾರೆ ಈ ವಾರ್ಡು ಹೆಂಡ-ಖಂಡ-ಹಣವಿದ್ದವರ ಪಾಲಾಗುತ್ತಿತ್ತು.

ಮಡಿವಾಳರು, ವಾಲಗದವರು, ಬಣಜಿಗರು, ಒಕ್ಕಲಿಗರು, ದಲಿತರು, ಶೆಟ್ಟರು ಹಾಗೆ ಹಲವಾರು ಜಾತಿಗಳ ಸಂಗಮದಂತೆ ಇತ್ತು. ಎರಡು ಸೆಲೂನ್‌ಗಳನ್ನು ಇಟ್ಟುಕೊಂಡು ಆರೇಳು ಹುಡಗರಿಗೆ ಕೆಲಸ ಕೊಟ್ಟಿದ್ದು ಅಲ್ಪಸ್ವಲ್ಪ ಓದಿಕೊಂಡು ತಿಳಿವಳಿಕೆಯ ಹುಡುಗನಾಗಿದ್ದ ಗೋವಿಂದ ಕೇರಿಯ ಅಘೋಷಿತ ನಾಯಕನಾಗಿ ಆಯ್ಕೆಯಾದ, ತನ್ನ ಜನಾಂಗಕ್ಕೊಂದು ಸಮುದಾಯ ಭವನ ಕಟ್ಟಲು ಓಡಾಡುತ್ತಾ, ಜನಾಂಗದ ಬಗ್ಗೆ ತುಸು ಕಾಳಜಿ ತೋರುತ್ತಿದ್ದ ಗೋವಿಂದನಿಗೆ ಎಲ್ಲರು ಒಟ್ಟಾಗಿ ಗೆಲ್ಲಿಸಲು ಮನಸ್ಸು ಮಾಡಿದ್ದರು.

ಗೋವಿಂದನ ಕೇರಿಗೆ ಸೇರಿದ ಕೋಟಲಿಂಗ, ನರಸರಾಜ, ನಾಗಣ್ಣ ಇವರುಗಳು ಗೋವಿಂದ ನಾಯಕನಾಗಿರುವುದನ್ನು ಅಸಮಾಧಾನದಿಂದಲೇ ಸುಮ್ಮನಾಗಿದ್ದರು. ಗೋವಿಂದನ ಸ್ಪರ್ಧೆಯಿಂದ ಕ್ಷೇತ್ರದ ನಾಯಕರಾಗಿದ್ದ ಮಾಜಿಮಂತ್ರಿಗಳು ಕೋಪಗೊಂಡು, ಹಿಂದುಳಿದ ಜಾತಿಯ ಶ್ರೀಮಂತ ಲಿಕ್ಕರ್ ವ್ಯಾಪಾರಿಯನ್ನು ಕರೆತಂದು ಎದುರಾಳಿ ಮಾಡಿದ್ದರು. ಇದೇ ಸಮಯದಲ್ಲಿ ವಾಲಗದವರ ಜನಕ್ಕೆ ಸಮಾಧಾನವಾಗಲೆಂದು ಆಶ್ವಾಸನೆ ಕೊಟ್ಟಂತೆ ಮಂಜೂರು ಮಾಡಿಸಿದಂತೆ ಮಾಡಿ ತಮ್ಮ ಸ್ವಂತ ಖರ್ಚಿನಲ್ಲೆ ಸಮುದಾಯ ಭವನ ಕಟ್ಟಲು ಇಟ್ಟಿಗೆ ದಿಂಡು ಹಾಕಿಸಿದರು. ಇದರಿಂದ ಮಡಿವಾಳರ ಮಾದೇವ ಸಾರಾಯಿ ದೊರೆಗೆ ತನ್ನ ಬೆಂಬಲ ಘೋಷಿಸಿದ. ಇದರ ಪರಿಣಾಮ ಚುನಾವಣೆಯಲ್ಲಿ ಗೋವಿಂದನಿಗೆ ಪೆಟ್ಟು ಬಿತ್ತು. ಇಬ್ಬರು ಸ್ಪರ್ಧಾಳುಗಳು ಸಮವಾಗಿ ಓಟು ತೆಗೆದುಕೊಂಡರು, ಅಂತಿಮವಾಗಿ ಡ್ರಾ ಮೂಲಕ ಲಿಕ್ಕರ್ ರೇಣುಕಾಮೂರ್ತಿ ಜಯಶಾಲಿಯಾಗುತ್ತಾನೆ.

ಕೆಳ ಜಾತಿಯವರಲ್ಲಿ ಒಳಗೊಳಗೆ ಜಗಳ ಉಂಟಾಗಲು ಒಂದು ರೀತಿಯಲ್ಲಿ ಮೇಲ್ವರ್ಗದ ನಾಯಕರುಗಳೇ ಕಾರಣ. ಲಿಕ್ಕರ್ ರೇಣುಕಾಮೂರ್ತಿ ಹೆಂಡದ ಹೊಳೆ ಹರಿಸಿದ ರೀತಿಯನ್ನು ಕಥೆಗಾರರು ಇಂದಿನ ಚುನಾವಣೆಯ ರೀತಿಯನ್ನು ನೆನಪಿಸುತ್ತದೆ. ಹಣ ಮತ್ತು ಹೆಂಡಕ್ಕೆ ಓಟನ್ನು ಮಾರಿಕೊಳ್ಳುವ ಸ್ಥಿತಿ ಪ್ರಸ್ತುತವಾಗಿದೆ. ಪ್ರಮಾಣಿಕ ಕೆಲಸ ಮಾಡುವ ಅಭ್ಯರ್ಥಿ ತಮ್ಮದೇ ಜಾತಿ ಆದರೂ, ಸಹಿಸದ ಕೆಲ ಒಳ ಜಾತಿಯವರು ಅಸೂಹೆ ಪಡುವುದು ವಾಸ್ತವಿಕ ಅಂಶವಾಗಿದೆ. ಸೃಜನಾತ್ಮಕತೆಯಿಂದ ತಮ್ಮ ಅನುಭವದ ಸಂದರ್ಭಗಳನ್ನು ಕಥೆಗಳಲ್ಲಿ ದುಡಿಸಿಕೊಂಡಿರುವುದು ವಿಶೇಷವಾಗಿದೆ.

ಸಮಾಜದ ಜಾತಿ ಪದ್ಧತಿಯ ಅನಿಷ್ಟದ ಪಿಡುಗುನಿಂದ ಆಗುವ ಘಟನೆಗಳನ್ನು ಶಿವಳ್ಳಿ ಕೆಂಪೇಗೌಡ ಅವರ **'ನಾವು ಬತ್ತೀವಿ ನಿಲ್ಸಯ್ಯೋ'** ಕಥೆಯಲ್ಲಿ ಗುರುತಿಸಲಾಗಿದೆ. ಕಥೆಯಲ್ಲಿ ಬರುವ ಹೊಲೇರ ಸಿದ್ಧಿಯ ಮಗಳು ಮಾದೇವಿ ಊರಲ್ಲಿ ನಡೆಯುತ್ತಿರುವ ಮೇಲುಜಾತಿ ಮದುವೆಯನ್ನು ದೂರದಿಂದಲೇ ನೋಡುತ್ತಾ ನಿಲ್ಲುತ್ತಾಳೆ. ಸ್ಥಿತಿವಂತ ಹೆಣ್ಣು ಮಗಳ ಸಿಲ್ಕಿನ ಲಂಗ, ಅವಳ ಪುಟ್ಟ ನೆಕ್ಲೇಸು ಆ ಚಂದಾ ಹುಡುಗಿಯನ್ನು ನೋಡುತ್ತಿದ್ದಂತೆ ತನ್ನ ತೇಪೆ ಹಾಕಿದ ಲಂಗ ನೆನಪಾಗುತ್ತದೆ. ತೇಪೆ ಹಾಕಿದರೂ ಅಲ್ಲಲ್ಲಿ ಪಸ್ತೋಗಿದೆ. ಅವ್ವನಿಗೆ ಇರುವುದು ಒಂದೇ ಸೀರೆ. ಯಾವತ್ತಾದರೂ ಮೈಕೈ ನೋವು ಕಾಣಿಸಿಕೊಂಡಾಗ ಕೂಲಿಗೆ ಹೋಗದೆ ಇರುವ ದಿನ ಮಾದೇವಿಗೆ ಕೋಡಿ ಹಳ್ಳದಲ್ಲಿ ಸ್ನಾನ. ಸೀಗೆ ಪುಡಿ ಇದ್ದ ದಿನ ಉಂಟು, ಇಲ್ಲದೆ ಇದ್ದರೆ ಇಲ್ಲ. ತೂತಾದ ಇನ್ನೊಂದು ಲಂಗ ಹಾಕಿ ಚಳಿಗೆ ದಿಬ್ಬದ ಮೇಲೆ ಕೂರಿಸುವಳು. ಅವ್ವ ಅತ್ತಿತ್ತ ನೋಡಿ ಎಲೆಮರೆಯಂತೆ ಸೆರಗು ಕಚ್ಚಿಕೊಂಡು ರವಿಕೆ ಕಳಚಿ ಉಟ್ಟ ಬಟ್ಟೆಯಲ್ಲೇ ತಲೆಯ ಮೇಲೆ ನೀರು ಸುರಿದುಕೊಂಡು ಅರ್ಧ ಸೀರೆ ಕುಕ್ಕಿ ಹುಲ್ಲು ಪಸರೆಯ ಮೇಲೆ ಒಣಗಿಸಿ, ಇನ್ನರ್ಧ ಸೀರೆಯಲ್ಲಿ ಮೈಮುಚ್ಚಿ ಕುಳಿತುಕೊಳ್ಳುವಳು. ಹಾದಿಯಲ್ಲಿ ಹೋಗುವ ಗಂಡಸು ವಲೇವ್ರ ಸಿದ್ಧಿಯನ್ನು ನುಂಗುವಂತೆ ನೋಡಿದರೆ ಮಾದೇವಿಗೆ ಕಣ್ಣಲ್ಲಿ ನೀರು ಹರಿಯುತ್ತಿತ್ತು.

ಕಥೆಗಾರರು ಉಳ್ಳವರ ಮತ್ತು ಬಡತನ ಮತ್ತು ಕೀಳು ಕುಲದ ಬದುಕನ್ನು ತಾತ್ವಿಕವಾಗಿ ವಿವರಿಸಿದ್ದಾರೆ. ಮದುವೆ ಊಟ ಬಡಿಸುತ್ತಿದ್ದ ಮನೆಗೆ ಹೋಗಿ ಉಂಡು ಹಟ್ಟಿಗೆ ಹೋಗಿ ಮಲಗುವ ಎಂಬಾಸೆಯಿಂದ ಮದುವೆ ಹಟ್ಟಿ ಮೆಟ್ಟಿಲು ಹತ್ತುತ್ತಿದ್ದ ಮಾದೇವಿಗೆ, 'ಬನ್ನಪ್ರ ಬನ್ನಿ' ಎಂದು ಕರೆಯುತ್ತಿದ್ದ ವ್ಯಕ್ತಿ ಹರುಕು ಲಂಗದ ಕೆದರಿದ ತಲೆಯ ಮಾದೇವಿಯ ರಟ್ಟೆ ಹಿಡಿದು ನಿಲ್ಲಿಸಿ, 'ವಲೇರ ಸಿದ್ಧಿ ಮಗಳಲ್ಲೂವ ಇವ್ಳು? ನಂಟ್ರು ಬಂದಂಗೆ ಹೆಂಗೆ ಮನೆವಳಿಕೇ ಬತ್ತಾವ್ಳೆ ನೋಡು, ನಡಿ ಆಚ್ಗೆ ಕತ್ತೆರಂಡೇ' ಎಂದು ಬೆನ್ನಿನ ಮೇಲೆ ಗುದ್ದಿ ಕತ್ತಿಗೆ ಕೈ ಹಾಕಿ ಮೆಟ್ಟಿಲಿನಿಂದ ಕೆಳಕ್ಕೆ ತಳ್ಳಿದ. ಊಟಕ್ಕೆ ಬರುತ್ತಿದ್ದವನೊಬ್ಬ ಎತ್ತಿ ನಿಲ್ಲಿಸಿ 'ಅಯ್ಯೋಎಕ್ಕಟ್ಟೋದೆ, ಮನೆವಳಿಕೆಯಕೋಯತ್ತಿದ್ದೆ, ಎರಡ್ನೇ ಪಂತೀಲಿ ಈಚೆ ಕುತ್ಕಂಡು ಉಣ್ವೆ ಹೋಗು' ಎಂದು ಹೇಳಿದ.

ಈ ರೀತಿಯ ಅಸ್ಪೃಶ್ಯತೆ ನಡೆಯುತ್ತಿರುವುದನ್ನು ಸಮಾಜದಲ್ಲಿ ಇಂದು ಕಾಣುತ್ತಿದ್ದೇವೆ. ಚಾಮರಾಜನಗರದಲ್ಲಿ ಜಮೀನಿನ ಒಡೆಯ ಕೆಲಸಕ್ಕೆ ತಡವಾಗಿ

ಬಂದರೆಂದು ಇಬ್ಬರು ದಲಿತ ವ್ಯಕ್ತಿಗಳ ತಲೆ ಕೊಚ್ಚಿರುವುದು, ದಲಿತ ಹೆಣ್ಣು ಮಗಳೊಬ್ಬಳ ನೆರಳು ಬಿತ್ತು ಎಂದು ಅ ಹುಡಿಗಿಯನ್ನು ಥಳಿಸಿರುವುದು ಈ ರೀತಿ ಇನ್ನು ಅನೇಕ ಅಮಾನವೀಯ ಘಟನೆಗಳು ಸಮಾಜದಲ್ಲಿ ನಡೆಯುತ್ತಲೆ ಇದೆ.

ಸಾವಿರಾರು ರೂಪಾಯಿ ಖರ್ಚು ಮಾಡಿ ಮದ್ವೆ ಮಾಡುವ ಜನರು ಹಸಿದ ಹೊಟ್ಟೆಗಳಿಗೆ ಅನ್ನ ಹಾಕಲು ಹಿಂಜರಿಯುತ್ತಾರೆ ಎನ್ನುವ ಲೇಖಕರ ಅಭಿಪ್ರಾಯ ಸಮಂಜಸವಾಗಿದೆ. ಸಮಾಜದಲ್ಲಿರುವ ಬಡವ-ಶ್ರೀಮಂತರ ನಡುವಿನ ಅಂತರಗಳನ್ನು ಸ್ಪಷ್ಟವಾಗಿ ಚಿತ್ರಿಸಲಾಗಿದೆ. ದಲಿತರನ್ನು ಕಾಣುವ ಸಮಾಜದ ದೃಷ್ಟಿಕೋನದ ಬದಲಾವಣೆಯ ಚಿಂತನೆ ಇಲ್ಲಿ ವ್ಯಕ್ತವಾಗಿಲ್ಲ. ಇರುವುದನ್ನು ನೇರವಾಗಿ ಅಭಿವ್ಯಕ್ತಿಸಲಾಗಿದೆ.

ತಲೆಮಾರಿನಿಂದ ತಲೆಮಾರಿಗೆ ನಡೆದು ಬಂದ ಶೋಷಣೆಯನ್ನು ಧಿಕ್ಕರಿಸುವ, ಬದಲಾವಣೆಗೆ ಹಾತೊರೆಯುವ ವ್ಯಕ್ತಿತ್ವಕ್ಕೆ ಶಿವಳ್ಳಿ ಕೆಂಪೇಗೌಡ ಅವರ **'ಚಮ್ಮಾವುಗೆ'** ಕಥೆ ಸಾಕ್ಷಿಯಾಗಿದೆ. ಈ ಕಥೆಯ ನಾಯಕ ರುದ್ರ. ರುದ್ರನ ತಂದೆಗೆ ಹೆಂಡ ಕುಡಿಸಿ, ಬಾಡು ತಿನ್ನಿಸಿದರು ಅಂತ ಚಿನ್ನದಂತ ಆರು ಎಕರೆ ಗದ್ದೆಯನ್ನು ತನ್ನ ಪ್ರಾಯ ಕಾಲದಲ್ಲೇ ಕರೀಗೌಡ್ರಗೆ ಹೆಬ್ಬೆಟ್ಟು ಹಾಕಿ ಕೊಟ್ಟುಬಿಟ್ಟಿದ್ದ. ಇಲ್ಲಿಯವರೆಗೆ ತಾನು ಜೀತ ಮಾಡಿದ್ದಲ್ಲದೆ ಈಸ್ಕೊಡಿರೋ ಸಾಲಕ್ಕೆ ತನ್ನ ಮಗ ರುದ್ರನಿಗೆ ಹೋಗಿ ದುಡಿ ಎಂದು ಹೇಳುತ್ತಾನೆ. ಅಪ್ಪನ ಕಾಲದಿಂದ ಮಗನ ಕಾಲಕ್ಕೆ ಹೀಗೆ ಜೀತ ಮುಂದುವರಿಯುವುದೆ ಸರಿ ಎಂಬುದು ರುದ್ರನ ತಂದೆಯ ನಂಬಿಕೆ. ಇದಕ್ಕೆ ವಿರುದ್ಧವಾದುದು ಮಗ ರುದ್ರನ ನಂಬಿಕೆ. ನಾವೇ ಪಾಳೇಗಾರ್ರು ಅಂತ ಮೇಲ್ಮೇಲೆ ಅಡ್ಡಗಟೆ ಹಾಕತ್ತಾರೆ. ಕೆಳಾಕೆ ಒಂತೊಟ್ಟು ನೀರು ಇಣಕ್ಸಾರಾ? ಬತ್ತದ ಗದ್ದೆ ಒಣ್ಗೀತ್ತು. ಕಟ್ಬುಟ್ಟು ಬರೂವೊತ್ಗೆ ಎಷ್ಟೊತ್ತಾಯ್ತು ಎಂದು ಹೇಳುವ ರುದ್ರನ ಮಾತುಗಳಲ್ಲಿ ಧ್ವನಿ ಅಭಿವ್ಯಕ್ತವಾಗಿದೆ. ರುದ್ರನ ಹಟ್ಟಿಯ ಮುಂದೆ ಪಾಳು ಬಿದ್ದ ಹಟ್ಟಿಯಲ್ಲಿ ತಿಮ್ಮಜ್ಜನ ಸಾವಾಗುತ್ತದೆ. ಅಲ್ಲಿಗೆ ಬಂದ ಕರೀಗೌಡ "ಹಾಳನಿಷ್ಟ ಬಡ್ಡೀದು, ಇವತ್ತೇ ನಿಗತ್ಕೊಬೇಕಾ, ಹೊತ್ತುಡುಕ್ಮುಂಚೆ ತಕ್ಕಂದೋಗಿ ಸೀದ್ಬುಡುರ್ಲಾ" ಅಂತ ಅಪ್ಪಣೆ ಕೊಡಿಸಿದನು. ಅಲ್ಲೇ ಇದ್ದ ರುದ್ರ ತಿಮ್ಮಜ್ಜ ಹೊಲದಲ್ಲಿ ಕೆಲಸ ಮಾಡುವಾಗ ಬೇಕಿತ್ತು. ಸಮಯ ಅನ್ನದೆ ಗದ್ದೆಗೆ ನೀರು ಕಟ್ಟೊಕೆ ಹೋಗುವಾಗ ತಿಮ್ಮಜ್ಜ-ತಿಮ್ಮಪ್ಪ, ತಿಮ್ಮಣ್ಣ ಆಗಿದ್ದ. ಹೇಲು, ಉಚ್ಚೆ ಮೇಲೆ ಬಿದ್ಕಂಡು ಒದ್ದಾಡ್ತಿದಾಗ ಹತ್ರ ಬಂದು ನಿನ್ನ ಕಷ್ಟ ಏನು ಅಂತ ವಿಚಾರಿಸುವವರು ಇರಲಿಲ್ಲ. ಇವತ್ತು 'ಹಾಳನಿಷ್ಟ ಬಡ್ಡೀದು ಅನ್ನೊಕೆ' ಬಂದವರೆ ಅಂತ ರುದ್ರ ತನ್ನ ಮನಸ್ಸಿನಲ್ಲಿ ವ್ಯಥೆ

ಪಟ್ಟ. ದಲಿತನಾದ ತಿಮ್ಮಜ್ಜನ ಕಾರ್ಯವೈಖರಿಯನ್ನು ಗುರುತಿಸಿದರು ಕೂಡ ಕೆಳಜಾತಿಯ ತಿಮ್ಮಜ್ಜನನ್ನು ನಿಕೃಷ್ಟವಾಗಿ ಕಾಣುವುದು ಸಾಮಾಜಿಕ ವ್ಯವಸ್ಥೆಯ ಒಂದು ಪ್ರತಿರೂಪವಾಗಿದೆ.

"ರುದ್ರ ತನ್ನ ಜನಾಂಗದವರನ್ನು ಸ್ವಾಭಿಮಾನವಿಲ್ಲವೆಂದು ನಿಂದಿಸುತ್ತಾನೆ. ಬೋರಪ್ಪನ್ಗೆ 'ಹೂವ್ನಾಂಗಿ' ಅಂದ್ರೆ ಸಾಕು, ಕುಟ್ಟ ಕುಟ್ಟಾಂತ ಕುಟ್ಕೊಕ್ಕೆ ತಮಟೆ ತಕ್ಕಂಡು ಕಡದ್ಬುಡ್ತಾರೆ ತಮ್ಡುಪ್ಪ ಕೊಡೊ ಪಂಚಾಮೃತಕ್ಕೆ ಕಾಯ್ಕಂಡು ನಿಂತಿರುತ್ತಾರೆ. ಈ ಕೇರಿ ಹೆಂಗಸರು ಗೌಡರ ಮದ್ವೆ, ತಿಥಿ ಮಾಡಿ ಬನ್ರಮ್ಮಿ ಅಂದರೆ ಸಾಕು ಆ ಹಿಂಡೆಕೂಳೀಸ್ಕೊ ಬರೋಕೆ ಕಂಕುಳಲ್ಲಿ ಪುಟ್ಟೊತಪ್ಲೆ ಇರಿಕಂಡು ಕೊರಕೊರನೆ ಕಡದ್ಬುಡ್ತಾರೆ. ಅದ ತಕ್ಕಂಬಂದು ತಿಂದ್ರೇ ಇದ್ರೆ ಏನೂ ನಿಗತ್ಕೋದಿಲ್ಲಕನ. ಅಂಬ್ಲಿಯೋ ತುಂಬೆಸೊಪ್ಪೋ ಇರೋದ್ನೇ ಬೆಯಿಸ್ಕಂಡು ತಿನ್ರಿ ಅಂದ್ರೆ ಕೇಳ್ತರಾ? ಒಬ್ಬೊಬರಿಗೂ ಜೋಡ್ತಕಂದು ಹೊಡೀಬೇಕು ಎನ್ನುತ್ತಾನೆ"**(ಶಿವಳ್ಳಿ ಕಂಪೇಗೌಡ, ಚಮ್ಮಾವುಗೆ, ೨೦೦೮, ಪುಟ-೭೧).** ಇಲ್ಲಿ ರುದ್ರನಿಗೆ ತಮ್ಮ ಜಾತಿಯ ಜೀವಮಾನದ ಬಗ್ಗೆ ಬೇಸರ ವ್ಯಕ್ತವಾಗುತ್ತದೆ.

ರುದ್ರನಿಗೆ ಬುದ್ಧಿ ಕಲಿಸಬೇಕೆನ್ನುವ ಕರೀಗೌಡನ ಮಾತುಗಳು ರುದ್ರನಿಗೆ ಗೊತ್ತಾಗಿ "ಏನಾ ಅವ್ರು ನಂಗೆ ಬುದ್ಧಿ ಕಲಿಸೋದು ಹೋಡಿಬೋದು. ಬಡೀಬೊದು ಕದ್ಮರೇಲಿ ನನ್ನ ತಲೇ ಮೇಲೆ ಕಲ್ಲೆತ್ತಾಕುಸ್ಬೋದು. ನನ್ನ ಅಜ್ಜ ಮುತ್ತಜ್ಜರ ಕಾಲದಿಂದ ಅಂಜುಕೊಂಡು ಅಳಿಕೊಂಡು ತಗ್ಗಿಬಗ್ಗಿ ನಡೆದುಕೊಂಡು ಬಂದುದಕ್ಕೆ ಹೋಡೀದು ಬಡೀದು ಇಂಥದನ್ನೆಲ್ಲಾ ಗುತ್ತಿಗೆ ತೆಗೆದುಕೊಂಡು ಬಿಟ್ಟವರೆ. ಸಾವು ಬಂದರೆ ಬರಲಿ, ನಗುನಗುತ್ತಾ ಸಾಯ್ತೀನಿ. ಎಷ್ಟು ದಿನ ಅಂತ ಈ ಕುರೊಕರೋ ಬಾಳ ಬಾಳ್ಕಂದು ದಿನಾಹುಟ್ಟಿ ದಿನಾ ಸಾಯೊದು"**(ಶಿವಳ್ಳಿ ಕಂಪೇಗೌಡ, ಚಮ್ಮಾವುಗೆ, ೨೦೦೮, ಪುಟ-೮೧).** ರುದ್ರನ ಈ ಮಾತುಗಳಲ್ಲಿ ತನ್ನ ಜನಾಂಗದ ಮೇಲೆ ನಡೆದಿರುವ ಶೋಷಣೆಯನ್ನು ವಿರೋಧಿಸುತ್ತಾ ಮತ್ತು ತನ್ನ ಮೇಲೂ ಇದೇ ರೀತಿಯ ಶೋಷಣೆಯನ್ನು ಮಾಡುವ ಮೇಲ್ವರ್ಗದವರನ್ನು ಟೀಕಿಸುತ್ತಾನೆ. ಜೀತಕ್ಕೆ ಇದ್ದು ತನ್ನನ್ನು ಮಾರಿಕೊಳ್ಳುವ ಬದಲು ಸಾವೇ ಬರಲಿ ಎಂಬುದು ತಾತ್ವಿಕವಾಗಿದೆ.

ರುದ್ರ ಶಾಲೆಯಲ್ಲಿ ಚನ್ನಾಗಿ ಓದುತ್ತಿರುವುದು ಗೊತ್ತಾದ ಕರೀಗೌಡ ರುದ್ರನ ತಂದೆಗೆ ಇಲ್ಲದ ಚಾಡಿ ಹೇಳುತ್ತಾನೆ. 'ಓದ್ದೋರೆಲ್ಲಾ ಕೆಲ್ಸಿಲ್ದೆ ಎಂಜಲ್ಲೋಟ ಎತ್ತಾ ಅವ್ರೆ. ಪೋಲ್ಪೋಲಿ ಅಲೀತಾ ಅವ್ರೆ' ಅಂತ ಗೌಡ ಚಾಡಿ ಹೇಳಿ ತನ್ನ ತಲೆ ಮೇಲೆ ಚಪ್ಪಡಿ ಎಳೆದ. ಇಲ್ಲಿಯೂ ಕೂಡ ಗೌಡನ ಹೀನ ಬುದ್ಧಿಗಳು ಕಾಣುತ್ತವೆ.

ದಲಿತನೊಬ್ಬ ಓದು–ಬರೆಯುವುದು ಕಲಿತುಬಿಟ್ಟರೆ ಮನೆಗೆ ಒಬ್ಬ ಕಸ ಸುರಿಯುವವನು, ಬಚ್ಚಲು ಬಳಿಯುವನು ಸಿಗುವುದಿಲ್ಲವೆಂದು ತಂತ್ರಗಾರಿಕೆ ತೋರುತ್ತಾನೆ.

ಕರೀಗೌಡ್ರ ಮಗನ ಮದ್ವೆಯಲ್ಲಿ, ಗಂಡಿನ ಮೆಟ್ಟುಗಳನ್ನು ದಲಿತನಾದ ರುದ್ರ ಕೈಯಲ್ಲಿ ಹಿಡಿದುಕೊಂಡು ಹೋಗಿ ಗಂಡು ಇರುವ ಕಡೆ ತೆಗೆದುಕೊಂಡು ಹೋಗಬೇಕೆಂದು ರುದ್ರನಿಗೆ ಆಜ್ಞೆಯಾಗುತ್ತದೆ. ರುದ್ರ ತನ್ನ ಮನಸ್ಸಿನಲ್ಲಿದ ಶೋಷಣೆಯ ವಿರುದ್ಧದ ಆಕ್ರೋಶವನ್ನು ಧೈರ್ಯವಾಗಿ ಹೊರಹಾಕುತ್ತಾನೆ. ಕಾಲ್ನೆಲಿ ಮೆಟ್ಟೂದ ಕೈಲೆಕ್ಕಂದೋಗ್ಬೇಕೂಂತ ಯಾರೇಳಿದ್ದಾರು? ಯಾವ ಕಾನೂನೇಳಿದ್ದಾತು? 'ಅಂತ ದಬಾಯಿಸುತ್ತಾನೆ. ಅಲ್ಲೆ ಇದ್ದ ಕರೀಗೌಡರು ಇವನ ಮಾತುಗಳಿಗೆ ತಿರುಗಿ ಬೀಳುತ್ತಾರೆ. ಯಾವುದಕ್ಕೂ ಹೆದರದ ರುದ್ರ' ಮಗ್ನ ಎಕ್ಡ ಅಪ್ಪ ಎತ್ಕೋಂಡೋದ್ರೆ ಅವಮಾನ ಆದದಾ, ಎತ್ಕಂಡೋಗಿ' ಎಂದು ಒಳಗಿದ್ದ ಧ್ವನಿಯನ್ನು ಆಚೆಗೆಸೆದ. ಕರೀಗೌಡ ಮತ್ತು ಅವನ ಆಳುಗಳು ರಕ್ತ ಚಿಮ್ಮುವ ಹಾಗೆ ರುದ್ರನಿಗೆ ಬಡಿಯುತ್ತಾರೆ. ಯಾವುದಕ್ಕೂ ಹೆದರದ ರುದ್ರ 'ಹೂತಾಕುದ್ರೂ ಸರಿ, ತಿಥಿ ಮಾಡಿದ್ರು ಸರಿ, ನಾನ್ಮಾತ್ರ ಈ ಹೇಸ್ಗೆ ಕೆಲ್ಸ ಮಾಡುದಿಲ್ಲ' ಎಂದು ದಿಟ್ಟವಾಗಿ ಉತ್ತರಿಸುತ್ತಾನೆ.

ಈ ಕಥೆಯಲ್ಲಿ ಜಾತಿಯ ಸಂಘರ್ಷ ನಡೆದಿದೆ. ರುದ್ರನು ಹೆಸರಿಗೆ ತಕ್ಕಂತೆ ತನ್ನ ರೌದ್ರವಾತಾರವನ್ನು ತೋರುತ್ತಾನೆ. ಶೋಷಣೆಯಿಂದ ತನ್ನ ಜನಾಂಗವನ್ನು ಮುಕ್ತಿಗೊಳಿಸುವ ಹೋರಾಟ ದಲಿತ ಕಥಾಸಾಹಿತ್ಯದ ಶ್ರೇಷ್ಠ ಕಥೆಯಲ್ಲಿ ಉಳಿಯುತ್ತದೆ. ಇದೇ ಗುಂಪಿಗೆ ಸೇರುವ ಮತ್ತೊಂದು ಕಥೆ '**ದೀವಳಿಗೆ**'. ಈ ಕಥೆಯಲ್ಲಿ ಬರುವ ಮುಖ್ಯ ಪಾತ್ರ ಸಿದ್ಧಣ್ಣ. ಕೆಳಜಾತಿಯಲ್ಲಿ ಹುಟ್ಟಿ ತಾವು ಪಟ್ಟ ಕಷ್ಟಗಳು ಸಾಕೆಂದು ತನ್ನ ಮಕ್ಕಳ ಕಾಲಕ್ಕೆ ಜೀತ ನಿಲ್ಲಬೇಕೆಂದು ಆಶಿಸುತ್ತಾನೆ. ಮಕ್ಕಳನ್ನು ಶಾಲೆಗೆ ಸೇರಿಸಿ ಮುಂದಿನ ದಿನಗಳು ಜೀತ ಮುಕ್ತವಾಗಿರಲೆಂದು ಕನಸು ಕಟ್ಟುತ್ತಾನೆ. ನಮ್ಮಪ್ಪ ನೆಟ್ಟಗಿದ್ದಿದ್ದರೆ ಈ ಗದ್ದೆ ನನ್ನದೇ! ಈ ಗದ್ದೆಯನ್ನು ಉತ್ತು, ಬಿತ್ತಿ, ಬೆಳೆದು ಫಸಲು ಉಣ್ಣುತ್ತಿದ್ದವನು ನಾನೇ. ಆದರೆ ಈ ಗದ್ದೆಯನ್ನು ಈಗಲೂ ಉಳುತ್ತಿದ್ದೇನೆ–ಗೌಡರ ಹಟ್ಟಿಯ ಆಳು ಮಗನಾಗಿ, ಎಂದು ಸಿದ್ಧಣ್ಣನು ವ್ಯಥೆ ಪಡುತ್ತಾನೆ ಇದು ವ್ಯವಸ್ಥೆಯ ಅವರಣವಾಗಿದೆ.

ಸಿದ್ಧಣ್ಣ ತನ್ನ ಅವ್ವ ನೋವಿನಿಂದ ಹೇಳುತ್ತಿದ್ದ ಹಿಂದಿನ ಬದುಕನ್ನು ನೆನಪುಗೊಳ್ಳುತ್ತಾನೆ. ಮನೆಯಲ್ಲಿ ಹೆಂಡತಿ–ಮಕ್ಕಳ ಬಗ್ಗೆ ಯಾವ ಚಿಂತೆಯು ಇಲ್ಲದೆ ಅಪ್ಪ ಕುತ್ತಿಗೆ ಮಟ್ಟಕ್ಕೆ ಸೇಂದಿ ಕುಡಿಯುವುದು. ಒಂದು ಗುಡ್ಡೆ ಬಾಡು

ಒಂದೇ ಸಾರಿ ತಿನ್ನುತ್ತಿದ್ದನಂತೆ. ಕಾಲುವೆ ನೀರು ಬಂದ ಮೇಲೆ ನಮ್ಮ ದರಿದ್ರ ಹೋಯಿತು ಎನ್ನುತ್ತಿದ್ದಳು. ಕಾಲುವೆ ನೀರು ಬರುವ ಮೊದಲು ರಾಗಿ, ಉಳ್ಳಿ, ಆರ್ಕ ಬೆಳೆದು ರಾಗಿ ಅಂಬಲಿ ಕುಡಿಯುತ್ತಿದ್ದರಂತೆ. ಮುಂಜಾನೆ ತಂಗಳಿಟ್ಟು-ಮಜ್ಜಿಗೆ ಕಲಸಿ, ಈರುಳ್ಳಿ ನಂಜ್ಕೊಂಡು ತಿನ್ನುತ್ತಿದ್ದರಂತೆ. ಮಹಾರಾಜರ ಕೃಪೆಯಿಂದ ಕನ್ನಂಬಾಡಿ ಕಟ್ಟೆ ಕಟ್ಟಿದಾದ ಮೇಲೆ ಭೂಮಿ ತಾಯಿ ಕೈಬಿಡಲಿಲ್ಲ ಎನ್ನುವುದನ್ನು ನೆನೆಪಿಸಿಕೊಳ್ಳುತ್ತಾರೆ. ಇಲ್ಲಿ ಕಥೆಗಾರರು ಪ್ರಾದೇಶಿಕ ಬದುಕಿನ ವಾಸ್ತವತೆಯನ್ನು ಕಟ್ಟಿಕೊಟ್ಟಿದ್ದಾರೆ.

ಸಿದ್ಧಣ್ಣ ತಂದೆ ತನ್ನ ಕುಡಿತಕ್ಕೆ ಹಣ ಸಾಲದೆ ಕಪನೀಗೌಡನಿಗೆ ಆಸ್ತಿಯನ್ನೆಲ್ಲ ಮಾರಿದನೆಂದು ತಿಳಿದು ನೋವುಗೊಂಡ. ಇಂದು ತನ್ನ ಜಮೀನಿನಲ್ಲಿ ದುಡಿದರೂ ಸಹ ಅದು ಕಪನೀಗೌಡನ ಆಸ್ತಿಯಾಗಿದೆಯೆಂದು ನೊಂದುಕೊಳ್ಳುವನು. ಒಂದು ಕಾಲಕ್ಕೆ ಕಪನೀಗೌಡನ ಹೆಂಡತಿ ಮನೆಯಲ್ಲಿ ರಾಗಿ ಕಾಳಿಗೂ ಗತಿಯಿಲ್ಲದೆ ಸಿದ್ಧಣ್ಣ ಅವ್ವನ ಬಳಿ ಮಕ್ಕಳು ಹಸಿದವರೆಂದು ಮುಸ್ಸಂಜೆಯಲ್ಲಿ ಬಂದು ಕೇಳಿದಾಗ ಇಲ್ಲ ಎನ್ನದೆ ತುಂಬಿಕಳಿಸಿದ್ದಳು. ಅಂದೇ ಮನೆಯ ಸಂಪತ್ತು ಕಪನೀಗೌಡ ಮನೆಯನ್ನು ಸೇರಿತ್ತೆಂದು ಅವ್ವನ ಮಾತುಗಳನ್ನು ನೆನೆಯುತ್ತಾನೆ. ಮುಸ್ಸಂಜೆಯಲ್ಲಿ ಮನೆಯಿಂದ ಧಾನ್ಯಗಳನ್ನು ಹೊರಗೆ ಕೊಟ್ಟರೆ ಸಂಪತ್ತಿನ ಲಕ್ಷ್ಮೀ ಹೊರಹೋಗುವಳೆಂಬ ನಂಬಿಕೆ ಗ್ರಾಮೀಣ ಜನರಲ್ಲಿ ಹಿಂದೆ ಇರುವುದನ್ನು ಮತ್ತು ಈಗಲೂ ಈ ನಂಬಿಕೆ ಉಳಿದುಕೊಂಡು ಬಂದಿದೆ. ನಂತರದಲ್ಲಿ ಸಿದ್ಧಣ್ಣ ಹೆಂಡತಿಯ ಮಾತಿನಂತೆ ಕಪನೀಗೌಡರ ಹೆಂಡತಿ ಚನ್ನವ್ವಳ ಬಳಿ ಬೆಲ್ಲ-ಕಾಯಿ, ಬೇಳೆ, ಅಕ್ಕಿ ಕೇಳಿ ತರುವಂತೆ ಹೇಳಿದ್ದನು ನೆನೆಯುತ್ತಾನೆ. ಒಂದು ಕ್ಷಣ ಸಿದ್ಧಣ್ಣನಿಗೆ 'ಅವ್ವ ಮೊರದಲ್ಲಿ ತುಂಬಿ ಕೊಟ್ಟ ರಾಗಿಯೊಂದಿಗೆ ಇವರ ಹಟ್ಟಿಗೆ ಬಂದ ನಮ್ ಮನೆ ಲಕ್ಸುಂದೇವಿ ಈ ಅಕ್ಕಿ ಬೆಲ್ಲದೊಂದಿಗೆ ತಿರ್ಗ ನಮ್ಮ ಹಟ್ಟಿಗೆ ಬಂದಾಳೇನೋ' ಎಂದು ಆಸೆ ಪಟ್ಟ. ತಕ್ಷಣವೇ ತನ್ನ ದುರಾಸೆ ಸರಿಯೆಲ್ಲವೆಂದು ಸಿದ್ಧಣ್ಣ ಕನಸು-ಮನಸ್ಸಿನಲ್ಲೂ ಬೇರೆಯವರಿಗೆ ಕೇಡುಎಣಿಸಬಾರದೆಂದು ಪಶ್ಚಾತ್ತಾಪ ಪಡುತ್ತಾನೆ.

ಸಿದ್ಧಣ್ಣ ಬಡವನಾದರೂ ದುರಾಸೆ ಇಲ್ಲದ ಮನುಷ್ಯ. ಅನಕ್ಷರಸ್ಥನಾದರೂ ಪ್ರಂಪಚ ವ್ಯವಹಾರ ತಿಳಿದಿಲ್ಲವಾದರು ಮಾನವೀಯತೆ ಅವನಲ್ಲಿ ನೆಲೆಗೊಂಡಿದೆ. ಜೀತದ ಆಳಾಗಿ ದುಡಿಯವ ಸಿದ್ಧಣ್ಣ ತನ್ನ ಮಕ್ಕಳ ತಲೆಮಾರಿಗೆ ನಿಲ್ಲಬೇಕೆಂಬ ಚಿಂತನೆ ಪ್ರಜ್ಞಾಪೂರ್ವಕವಾಗಿ ಕಥೆಯಲ್ಲಿ ಮೂಡಿದೆ. ಕೆಲ ನುಡಿಗಳು ಈ ಸಂದರ್ಭದಲ್ಲಿ ನೆನಪಾಗುತ್ತದೆ.

ಕುಲ ಕುಲ ಕುಲವೆಂದು ಹೊಡೆದಾಡದಿರಿ ನಿಮ್ಮ
ಕುಲದ ನೆಲೆಯನ್ನೇನಾದರೂ ಬಲ್ಲಿರ.

ಹರಿದಾಸರಾದ ಕನಕದಾಸರು ತಮ್ಮ ಈ ಕೀರ್ತನೆಯಲ್ಲಿ ಜಾತಿಯ ಹೆಸರನ್ನು ಹೇಳಿಕೊಂಡು ಕಚ್ಚಾಡುವ ಮನುಷ್ಯರನ್ನು ತರಾಟೆಗೆ ತೆಗೆದುಕೊಂಡಿದ್ದಾರೆ. ಅತ್ಯಂತ ಉಚಿತವಾದ ಮತ್ತು ಪರಿಚಿತವಾದ ಉದಾಹರಣೆಗಳ ಮೂಲಕ ಜಾತಿಯ ಅಸ್ತಿತ್ವವನ್ನು ಅಲ್ಲಗೆಳೆದು ಆಧ್ಯಾತ್ಮಿಕ ದೃಷ್ಟಿಯಲ್ಲಿ ನೀರುಗುಳ್ಳೆಯಂತೆ ಕ್ಷಣಿಕವಾದ ದೇಹವನ್ನು ನೆನಪಿಸುತ್ತಾರೆ.

ಸಿಲುಕದಿರಿ ಮತವೆಂಬ ಮೋಹದ ಜ್ಞಾನಕ್ಕೆ
ಮತಿಯಿಂದ ದುಡಿಯಿರೈ ಲೋಕಹಿತಕ್ಕೆ
ಆ ಮತದ ಈ ಮತದ ಹಳೆಮತದ ಸಹವಾಸ
ಸಾಕಿನ್ನು ಸೇರಿರೈ ಮನಮತಕ್ಕೆ
ಓ, ಬನ್ನಿ, ಸೋದರರಂತೆ ವಿಶ್ವಪಥಕ್ಕೆ

ಮಹಾಕವಿ ಕುವೆಂಪು ಅವರು ತಮ್ಮ ಈ ಕವನದಲ್ಲಿ ಜಾತಿ, ಮತ, ಪಂಥ, ಗುಂಪು, ವರ್ಗವ್ಯವಸ್ಥೆ, ವರ್ಣವ್ಯವಸ್ಥೆ ಮುಂತಾದ ಸಂಕುಚಿತ ದೃಷ್ಟಿಯ ನಾನಾ ಅಡ್ಡಗೋಡೆಗಳನ್ನು ಕೆಡವಿ, ಅಜ್ಞಾನದ ಕತ್ತಲೆಯನ್ನು ಭೇದಿಸಿಕೊಂಡು ಹೊರಬಂದು ಮಾನವ ಮತವನ್ನು ಹಿಡಿದು, ವಿಶ್ವಪಥದಲ್ಲಿ ನಡೆಯಬೇಕೆಂಬುದು ಕಳಕಳಿಯ ಸಂದೇಶವಾಗಿದೆ.

ಹಾವು ತಿಂದವರ ನುಡಿಸಬಹುದು
ಗರ ಹೊಡೆದವರ ನುಡಿಸಬಹುದು
ಸಿರಗರ ಹೊಡೆದವರ ನುಡಿಸಲು ಬಾರದು ನೋಡಯ್ಯ
ಬಡತನವೆಂಬ ಮಂತ್ರವಾಗಿ ಹೋಗಲು
ಒಡನೆ ನುಡಿವರು ಕೂಡಲಸಂಗಮದೇವ॥

ಧಾರ್ಮಿಕ-ಸಾಮಾಜಿಕ ಮಹಾಕ್ರಾಂತಿಕಾರ ಹನ್ನೆರಡನೆಯ ಶತಮಾನದ ವಚನಕಾರ ಬಸವಣ್ಣನವರು ಬಡತನ-ಸಿರಿತನದ ಸಾಮಾಜಿಕ ವಿಡಂಬನೆಯನ್ನು ತಮ್ಮ ಮೊನಚು ಮಾತುಗಳಿಂದ ವಚನವನ್ನು ಕಟ್ಟಿದ್ದಾರೆ.

ಈ ನಿಟ್ಟಿನಲ್ಲಿ ಬಹು ಹಿಂದೆಯೇ ಬುದ್ಧ ಹುಟ್ಟಿದ ಸಮಯದಲ್ಲಿ ಭರತ ಖಂಡಕ್ಕೆ ಅಥವಾ ವಿಶ್ವಕ್ಕೆ ಒಬ್ಬ ದೊಡ್ಡ ಆಧ್ಯಾತ್ಮಿಕ ನಾಯಕನ, ಪ್ರವಾದಿಯ ಅವಶ್ಯಕತೆಯಿತ್ತು. ಆತನ ಸಾಮಾಜಿಕ ಸುಧಾರಣೆಯಿಂದ ಹಿಡಿದು ಇಂದಿನವರೆಗೂ ಜಾತಿ-ವರ್ಗವ್ಯವಸ್ಥೆಯ ವಿರುದ್ಧ ಡಾ. ಅಂಬೇಡ್ಕರ್, ಮಹಾತ್ಮಗಾಂಧಿಯವರೆಗೂ ಖಂಡಿಸಿರುವುದಷ್ಟೇ ಅಲ್ಲದೆ ಸಮಾಜಕ್ಕೆ ತಿಳಿವಳಿಕೆ

ಮತ್ತು ಎಚ್ಚರ ಎರಡನ್ನೂ ಹೇಳಿದ್ದಾರೆ. ಮೇಲಾಗಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ಇಂಥ ಒಂದು ಸಾಮಾಜಿಕ ನಿಕೃಷ್ಟ ನಡವಳಿಕೆಯನ್ನು ಮಂಡ್ಯ ಜಿಲ್ಲೆಯ ಕಥೆಗಾರರು ತೀವ್ರವಾಗಿ ಗಮನಿಸಿದ್ದಾರೆ. ಅವರ ಕಣ್ಣಿಗೆ ಬೀಳುತ್ತಿದ್ದ ಶೋಷಿತ ಘಟನೆಗಳು ಮನಕರಗುವುದಷ್ಟೇ ಅಲ್ಲ ಖಂಡಿಸಿದ್ದಾರೆ. ಸಾಹಿತ್ಯ ರೂಪದಲ್ಲಿ ಅದನ್ನು ಎಳೆ ಎಳೆಯಾಗಿ ಬಿಡಿಸಿದ್ದಾರೆ. ಆಯ್ಕೆ ಮಾಡಿಕೊಂಡಿರುವ ಕಥಾ ವಸ್ತು, ಭಾಷೆ ನಿರ್ದಿಷ್ಟ ಪ್ರಾದೇಶಿಕವಾಗಿಯೇ ಗೋಚರಿಸುತ್ತದೆ. ಅಂಥ ವ್ಯತ್ಯಾಸಗಳೂ ಕಾಣಬರುವುದಿಲ್ಲ. ಇನ್ನಿತರ ಅಧ್ಯಾಯಗಳಲ್ಲಿ ತಿಳಿಸಿರುವಂತೆ ಬಹುತೇಕ ಕಥೆಗಳು ಸ್ವಾತಂತ್ರ್ಯಪೂರ್ವ ಹಾಗೂ ನಂತರದ ಕೆಲ ಅವಧಿಯಲ್ಲಿ ಇದ್ದಂತ ಸಾಮಾಜಿಕ ಪರಿಸ್ಥಿತಿ. ಈಗ ಮಂಡ್ಯ ಜಿಲ್ಲೆಯಲ್ಲಿ ಜೀತ ಪದ್ಧತಿ ಕ್ಷೀಣಿಸುತ್ತಿದೆ. ಕಥೆಗಳಲ್ಲಿ ಕಾಣಬರುವ ಜೀತ, ಗೌಡಿಕೆ, ಪಟೇಲ, ಶಾನುಭೋಗ ಇವೆಲ್ಲ ಪ್ರಜಾತಂತ್ರ ವ್ಯವಸ್ಥೆಯಲ್ಲಿ ಅಳಿದುಹೋಗಿವೆ. (ಈ ಸ್ಥಾನಗಳನ್ನು ತುಂಬಿಕೊಂಡಿರುವ ಸರಕಾರಿ ನೌಕರರು, ಅಧಿಕಾರಿಗಳು, ಲೇವಾಧಾರರು ದಲಿತರನ್ನಷ್ಟೇ ಅಲ್ಲ ಇಡೀ ಹಳ್ಳಿ ಅಥವಾ ಕೃಷಿಕರನ್ನೆ ಶೋಷಣೆಗೆ ಒಳಪಡಿಸಿದ್ದಾರೆ).

ಒಟ್ಟಾರೆ ಶಿಕ್ಷಣ ದಲಿತರನ್ನಷ್ಟೇ ಅಲ್ಲ ಬಡವರನ್ನೂ ಉದ್ಧರಿಸಿದೆ. ಕಥೆಗಳಲ್ಲಿ ಕೇಳಿ ಬರುವ ಗೌಡಿಕೆ ಅಥವಾ ಶ್ರೀಮಂತರ ಕ್ರೌರ್ಯದ ಮಾತುಗಳು ಒಂದು ಕಾಲಕ್ಕಾದ್ದವು. ಈಗ ಅಂಥ ಕ್ರೌರ್ಯದ ಮಾತುಗಳು ಕ್ಷೀಣಿಸಿವೆ. ಹಳ್ಳಿಗರ ವಿದ್ಯಾವಂತರಲ್ಲಿ ಹಾಗೂ ತಿಳಿದವರಲ್ಲಿ ಸಮಾನತೆಯನ್ನು ಕಾಣಬಹುದು. ಶೋಷಣೆ, ಶೋಷಿತ ಎನ್ನುವುದು ಮಂಡ್ಯ ಜಿಲ್ಲೆಯಲ್ಲಿ ಈಗ ಸವಕಲಾಗಿವೆ. ಹಳ್ಳಿಯಲ್ಲಿ ವಾಸ ಮಾಡುವರೆಲ್ಲ ಒಂದೇ ವರ್ಗಕ್ಕೆ ಸೇರಿದವರಾಗಿದ್ದಾರೆ. ಕಾರಣ ಕೃಷಿ ಕೃಷಿಕರನ್ನು ಹಲವಾರು ಕಾರಣಗಳಿಂದ ಕಷ್ಟಕಾರ್ಪಣ್ಯಗಳಿಗೆ ಈಡುಮಾಡಿದೆ. ಅದು ವೈಯಕ್ತಿಕವಾಗಿ ಹಾಗೂ ಇನ್ನಿತರ ಕಾರಣಗಳಿಂದಾಗಿ ರೈತರ ಆತ್ಮಹತ್ಯೆಗಳೇ ಈ ಜಿಲ್ಲೆಯಲ್ಲಿ ಸರಣಿಗಳಲ್ಲಿ ನಡೆಯುತ್ತಿವೆ.

ಒಟ್ಟಾರೆ ಜಿಲ್ಲೆಯ ಕಥೆಗಾರರು ತಮ್ಮ ಕಥೆಗಳಲ್ಲಿ 'ಶೋಷಿತ' ಎಂಬ ಪದವನ್ನು ಹೇರಳವಾಗಿ ಬಳಸಿದ್ದಾರೆ. ಬಡವ-ಶ್ರೀಮಂತರ ನಡುವಿನ ವ್ಯತ್ಯಾಸವನ್ನು ತಾವು ಕಂಡುಂಡುಂತೆ ಬರವಣಿಗೆ ರೂಪದಲ್ಲಿ ಇಳಿಸಿದ್ದಾರೆ. ದಲಿತರ ಬಗ್ಗೆ ಅಪಾರ ಪ್ರೀತಿಯನ್ನು ಇಟ್ಟುಕೊಂಡಿದ್ದಾರೆ. 'ಶೋಷಣೆ, ಶೋಷಿತರು' ಎನ್ನುವುದು ಜಿಲ್ಲೆಯಲ್ಲಿ ಸವಕಲು ನಾಣ್ಯಗಳಂತಾಗಿವೆ ಎಲ್ಲೋ ಕೆಲವಷ್ಟು

ಉಳಿದಿವೆಯಾದರೂ ಮುಂದಿನ ದಿನಗಳಲ್ಲಿ ಸುಧಾರಣೆ ಆಗಬಹುದು ಎಂಬ ನಿರೀಕ್ಷೆ ಹುಟ್ಟಿಸುತ್ತದೆ. ಏಕೆಂದರೆ ಪ್ರಮುಖ ಮಾಧ್ಯಮವಾದ 'ಶಿಕ್ಷಣ' ಪರಿಣಾಮಕಾರಿ ಯಾಗಿ ಕೆಲಸ ಮಾಡುತ್ತಿದೆ ಹಾಗೂ ಎಲ್ಲರನ್ನೂ ಒಗ್ಗೂಡಿಸುವಂಥ ದಿಕ್ಕಿನತ್ತ ಒಯ್ಯುತ್ತದೆ.

ಜಿಲ್ಲೆಯ ಕಥೆಗಾರರ ಕಥಾ ವಸ್ತುಗಳು ಒಂದು ಕಾಲದ ಜನಜೀವನವನ್ನು ಪ್ರತಿಬಿಂಬಿಸಿವೆ. ಹಳೆಯಜಾಡನ್ನು ಬಿಟ್ಟು ಹೊಸ ದಿಕ್ಕಿನತ್ತ ನೋಡುವುದು ಉಚಿತವೇ ಸರಿ.

## ವರ್ಗ ಸಂಘರ್ಷದ ನೆಲೆಗಳು

ಸಮಾಜದಲ್ಲಿ ವರ್ಗದ ಸ್ವರೂಪವನ್ನು ನಿರೂಪಿಸುವುದು ಸುಲಭವಲ್ಲ. ಏಕೆಂದರೆ ಒಂದು ಸಮಾಜದಲ್ಲಿ ಜನಗಳ ವರ್ಗೀಕರಣ ಅನೇಕ ಬಗೆಯಲ್ಲಿ ಅನೇಕ ಆಧಾರಗಳ ಮೇಲೆ ಆಗುತ್ತದೆ. ಆರ್ಥಿಕ ದೃಷ್ಟಿಯಿಂದ ಒಂದು ಜನಸಮುದಾಯವನ್ನು ಶ್ರೀಮಂತರು, ಮಧ್ಯಮ ವರ್ಗದವರು, ಬಡವರು ಎಂದು ವರ್ಗೀಕರಿಸಬಹುದು. ಶಿಕ್ಷಣದ ದೃಷ್ಟಿಯಿಂದ ಅದೇ ಸಮಾಜವನ್ನು ವರ್ಗೀಕರಿಸುವಾಗ ಅದು ವಿದ್ಯಾವಂತರು, ಅವಿದ್ಯಾವಂತರು ಎಂಬುದಾಗಿ ಬೇರೆ ರೀತಿಯಾಗುತ್ತದೆ. ವಿದ್ಯಾವಂತರಲ್ಲಿ ಅನೇಕ ಪ್ರಭೇದಗಳನ್ನು ಮಾಡಬಹುದು. ಕುಶಲತೆಯ ದೃಷ್ಟಿಯಿಂದ ಅದೇ ಸಮಾಜವನ್ನು ಕಾರ್ಯಕುಶಲರು, ಸಾಧಾರಣರು ಎಂದು ವರ್ಗೀಕರಿಸಬಹುದು. ಅಥವಾ ಅದೇ ಸಮಾಜವನ್ನು ವ್ಯವಸಾಯ ಮಾಡುವವರು ಹಾಗೂ ಕೈಗಾರಿಕೆಗಳನ್ನು ಮಾಡುವವರು ಎಂದು ವಿಭಾಗಿಸಬಹುದು. ಅಥವಾ ವರ್ಣ ವಿಭಾಗದ ರೀತಿಯಲ್ಲಿ ಆಯಾ ವ್ಯಕ್ತಿಯ ಗುಣಗಳ ಆಧಾರದ ಮೇಲೆ ಸಾತ್ವಿಕ, ರಾಜಸ, ತಾಮಸ ಗುಣವುಳ್ಳವರು ಎಂದು ವಿಭಜನೆ ಮಾಡಬಹುದು. ಹೀಗೆ ಒಂದು ಸಮಾಜದ ಜನಗಳನ್ನು ಅನೇಕ ರೀತಿಯಲ್ಲಿ ವರ್ಗೀಕರಿಸಬಹುದು. ನಿರ್ಧಿಷ್ಟವಾಗಿ ಇದೇ ರೀತಿಯಲ್ಲಿ ವರ್ಗೀಕರಿಸಬೇಕೆಂಬ ನಿರ್ಬಂಧವಿಲ್ಲ.

ವಿದ್ಯಾವಂತರು ಶ್ರೀಮಂತರಾಗಿರಬಹುದು, ವ್ಯವಸಾಯಗಾರರಾಗಿರ ಬಹುದು, ಸುಗುಣವುಳ್ಳವರಾಗಿರಬಹುದು. ಅವಿದ್ಯಾವಂತರು ಸಾತ್ವಿಕ ಗುಣವುಳ್ಳವರಾಗಿರಬಹುದು, ಶ್ರೀಮಂತರಾಗಿರಬಹದು. ಹೀಗೆ ಸಮಾಜದಲ್ಲಿ ಒಂದು ಬಗೆಯ ವರ್ಗೀಕರಣ ಇನ್ನೊಂದು ಬಗೆಯ ವರ್ಗೀಕರಣದಲ್ಲಿ ಬೆರೆತುಹೋಗಲು ಸಾಧ್ಯ. ಸಾಮಾನ್ಯವಾಗಿ ವರ್ಗೀಕರಣವೆಂದಾಗ ಆರ್ಥಿಕ ದೃಷ್ಟಿಯಿಂದ ಮಾಡುವ ವರ್ಗೀಕರಣವನ್ನೇ ನಾವು ಗಮನಿಸುವುದು. ಆದರೆ ಇದು ಸರಿಯಲ್ಲ. ಶ್ರೀಮಂತ ವರ್ಗವೆಂದಾಗ ಅದು ಎಲ್ಲ ಬಗೆಯಲ್ಲಿಯೂ ಶ್ರೇಷ್ಠವೆಂದಲ್ಲ. ದಟ್ಟದರಿದ್ರರಲ್ಲಿಯೂ ಮಹಾಪ್ರಾಜ್ಞರು ಇರಬಹುದು. ಆದುದರಿಂದ ಸಮಾಜದಲ್ಲಿ ವರ್ಗೀಕರಣ ನಿರ್ದಿಷ್ಟವಾಗಿ ಇಂತಹುದೇ ರೀತಿಯಲ್ಲಿ ಇರಬೇಕೆಂದೂ ಅಥವಾ ಯಾವುದೇ ಒಂದು ಬಗೆಯ ವರ್ಗೀಕರಣ ಇಡೀ ಸಮಾಜದ ಸ್ವರೂಪವನ್ನು

ನಿರೂಪಿಸುವುದೆಂದೂ ಹೇಳಲು ಸಾಧ್ಯವಿಲ್ಲ. ಸಮಾಜದ ಎಲ್ಲಾ ಭಾಗಗಳಲ್ಲಿ ಸೌಲಭ್ಯವುಳ್ಳವರು ಮತ್ತು ಸೌಲಭ್ಯ ವಂಚಿತರು, ಉಳ್ಳವರು ಮತ್ತು ಇಲ್ಲದವರು, ಮುಂದುವರಿದ ವರ್ಗಗಳು ಮತ್ತು ಹಿಂದುಳಿದ ವರ್ಗಗಳಿವೆ. ಸಮಾನತೆಯನ್ನು ಸ್ಥಾಪಿಸಿ ಎಲ್ಲರಿಗೂ ಒಂದೇ ರೀತಿಯ ಸ್ಥಾನಮಾನ, ಸೌಲಭ್ಯ ಸವಲತ್ತುಗಳು ಹಾಗೂ ಸಾಮಾಜಿಕ ಮನ್ನಣೆಯನ್ನು ನೀಡುವುದಕ್ಕೆ ಇದುವರೆಗೆ ಯಾವ ಸಮಾಜಕ್ಕೂ ಸಾಧ್ಯವಾಗಲಿಲ್ಲ. ಎಲ್ಲಾ ಸಮಾಜಗಳಲ್ಲೂ, ಸಿರಿವಂತರು ಸ್ಥಿತಿವಂತರು ಇರುವಂತೆ ದೀನರು, ದುರ್ಬಲರು, ಶೋಷಿತರು, ದು:ಖಿತರು, ದೌರ್ಜನ್ಯಗಳಿಗೆ ಬಲಿಯಾದವರೂ ಇದ್ದಾರೆ. ಈ ವರ್ಗಗಳು ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ಸಾಂಸ್ಕೃತಿಕವಾಗಿ ಬಹಳ ಹಿಂದುಳಿದಿವೆ.

ವರ್ಗ ಎಂದು ಪದವನ್ನು ತಪ್ಪು ಅರ್ಥದಲ್ಲಿ ಬಳಸಲಾಗಿದೆ. ಕಲೆಗಾರರು, ವೈದ್ಯರು, ತಾಂತ್ರಿಕ ಪರಿಣಿತರು ಇವರ ಗುಂಪುಗಳು ವರ್ಗಗಳಾಗಿರದೆ ವೃತ್ತಿಪರ ವಿಭಜನೆಯಾಗಿವೆ. ಆಗ್ಬರ್ನ್ ಮತ್ತು ನಿಮ್ಕಾಫ್ ಪ್ರಕಾರ "ಸಮಾಜದಲ್ಲಿ ಒಂದೇ ರೀತಿಯ ಸಾಮಾಜಿಕ ಅಂತಸ್ತನ್ನು ಹೊಂದಿರುವ ಜನರ ಒಕ್ಕೂಟವೇ ಸಾಮಾಜಿಕ ವರ್ಗ"(ಎಂ. ನಾರಾಯಣ, ಸಾಮಾನ್ಯ ಸಮಾಜಶಾಸ್ತ್ರ, ೨೦೦೦, ಪುಟ–೩೦). ಸಾಮಾಜಿಕ ವರ್ಗವು ಅಂತಸ್ತನ್ನು ಪ್ರತಿಪಾದಿಸುವ ಸಮೂಹವಾಗಿದೆ. ಎಲ್ಲೆಲ್ಲಿ ಸಾಮಾಜಿಕ ಸಂಸರ್ಗವು ಅಂತಸ್ತು ಮತ್ತು ಮೇಲು ಕೀಳೆಂಬ ಭೇದ ಭಾವದಿಂದ ಸೀಮಿತವಾಗಿರುತ್ತದೆಯೋ ಅಲ್ಲೆಲ್ಲಾ ವರ್ಗಪದ್ಧತಿ ಇದೆ.

ಸಮಾನ ಜೀವನ ಮಟ್ಟ ಹೊಂದಿರುವ ನಾವೆಲ್ಲರೂ ಸಮಾನರೆಂದು ತಿಳಿದಿರುವ, ಬೇರೆ ವರ್ಗಗಳಿಗಿಂತ ತಾವೆಲ್ಲರೂ ಮೇಲು ಕೀಳೆಂಬ ಅರಿವನ್ನು ಹೊಂದಿರುವ ಆಯ್ದ ವೃತ್ತಿಗಳನ್ನು ಹೊಂದಿರುವ ಮತ್ತು ಒಂದೇ ರೀತಿಯ ವರ್ತನೆ ಮತ್ತು ಮನೋಭಾವನೆಗಳನ್ನು ಹೊಂದಿರುವ ಸಮೂಹವೇ ವರ್ಗ. ಅವರು ತಮ್ಮದೇ ಆದ ಜೀವನ ಕ್ರಮ, ಉಡುಪಿನ ವೈಖರಿ, ಆಹಾರ, ವಾಸಸ್ಥಾನ, ಗೃಹ ಸೌಕರ್ಯಗಳು, ಮನರಂಜನೆಯ ವಿಧಾನ ಮತ್ತು ಖರ್ಚು ವೆಚ್ಚ ಹೊಂದಿದ್ದಾರೆ.

ವರ್ಗ ಪದ್ಧತಿಯು ಆಧುನಿಕ ಸಮಾಜದ ವಿಶೇಷ ಲಕ್ಷಣವಾಗಿದೆ. ಸರಳ ಗ್ರಾಮೀಣ ಸಮುದಾಯಗಳಲ್ಲಿ ವರ್ಗಗಳ ಸಂಖ್ಯೆ ಕಡಿಮೆ ಇದ್ದು, ಆಧುನಿಕ ನಗರ ಸಮಾಜಗಳಲ್ಲಿ ವರ್ಗಗಳ ಸಂಖ್ಯೆ ಹೆಚ್ಚೆನ್ನಬಹುದು. ಸಾಮನ್ಯವಾಗಿ ಎಲ್ಲಾ ಸಮುದಾಯಗಳಲ್ಲೂ ಉನ್ನತ ವರ್ಗ, ಮಧ್ಯಮ ವರ್ಗ ಮತ್ತು ಕೆಳವರ್ಗವೆಂಬ ವೃತ್ತಿ, ಆರ್ಥಿಕ ಅಂತರ ವರ್ಗಗಳನ್ನು ಹೆಚ್ಚುತ್ತಿರುವ ಜನಸಂಖ್ಯೆ ವೈವಿಧ್ಯಮಯ ವೃತ್ತಿ,

ಆರ್ಥಿಕ ಅಂತರ ವರ್ಗಗಳನ್ನು ಹೆಚ್ಚಿಸಲು ಕಾರಣವಾಗಿದೆ. ಉನ್ನತ ವರ್ಗದಲ್ಲಿ ಆಗರ್ಭ ಶ್ರೀಮಂತರು, ವಂಶಪಾರಂಪರ್ಯವಾಗಿ ಬೆಳೆದು ಬಂದು ಶ್ರೀಮಂತ ಕುಟುಂಬಗಳು, ಮಧ್ಯಮ ವರ್ಗದಲ್ಲಿ ವ್ಯಾಪಾರಿಗಳೂ, ಉತ್ತಮ ಕೌಟುಂಬಿಕ ಹಿನ್ನೆಲೆ ಹೊಂದಿರುವರು. ಅರೆ ವೃತ್ತಿಪರರು ಮತ್ತು ಕುಶಲಕರ್ಮಿಗಳು ಈ ವರ್ಗಕ್ಕೆ ಸೇರುತ್ತಾರೆ. ಕೆಳವರ್ಗದಲ್ಲಿ ಕಾರ್ಮಿಕರು, ಅರೆ ಉದ್ಯೋಗಿಗಳು ಮತ್ತು ವಲಸೆ ಕಾರ್ಮಿಕರು ರೈತರು ಈ ವರ್ಗಕ್ಕೆ ಸೇರುತ್ತಾರೆ. ಜಾತಿ ಮತ್ತು ವರ್ಗಗಳೆರಡೂ ಲಕ್ಷಣಗಳಲ್ಲಿ ವ್ಯತ್ಯಾಸ ಹೊಂದಿವೆ. ಜಾತಿಯು ಜಟಿಲವಾದ ಮತ್ತು ನಿರ್ಬಂಧಿತ ವ್ಯವಸ್ಥೆಯಾಗಿದೆ. ಆದರೆ ವರ್ಗವು ಚಲನಾತ್ಮಕ ಮತ್ತು ಮುಕ್ತ ವ್ಯವಸ್ಥೆಯಾಗಿದೆ. ಜಾತಿಯ ಸದಸ್ಯತ್ವವು ವಂಶಪಾರಂಪರ್ಯವಾಗಿ ನಿರ್ಧರಿತವಾಗುತ್ತದೆ. ಒಬ್ಬ ವ್ಯಕ್ತಿಯು ಒಂದು ಜಾತಿಯಲ್ಲಿ ಹುಟ್ಟಿದ ಮೇಲೆ ಜಾತಿಯ ಸದಸ್ಯನಾಗಿ ಮುಂದುವರಿಯುತ್ತಾನೆ. ವರ್ಗದಲ್ಲಿ ಸಾಮಾಜಿಕ ಚಲನೆಗೆ ಅವಕಾಶವಿದೆ. ಒಬ್ಬ ವ್ಯಕ್ತಿಯು ಕೆಳವರ್ಗದ ತಂದೆ-ತಾಯಿಗಳ ಮಗನಾಗಿದ್ದರೂ, ಅವನ ಸ್ವಪ್ರಯತ್ನದಿಂದ ಸ್ವಸಾಮರ್ಥ್ಯ ಮತ್ತು ವೈಯಕ್ತಿಕ ಸಾಧನೆಗಳಿಂದ ಉನ್ನತ ವರ್ಗಕ್ಕೆ ಸೇರುವ ಅವಕಾಶಗಳಿದೆ.

ಮಂಡ್ಯ ಜಿಲ್ಲೆಯ ಜನ ಸಾಮಾನ್ಯರ ಬದುಕು ಎಲ್ಲ ರೀತಿಯ ವರ್ಗಗಳಿಂದ ಕೂಡಿದ್ದು ಇಲ್ಲಿಯೂ ಕೂಡ ಜಾತಿ ಆಧಾರಿತ ವರ್ಗಗಳು ಹೆಚ್ಚು ಚಾಲ್ತಿಯಲ್ಲಿವೆ. ಇಡೀ ಜಿಲ್ಲೆಯ ಬದುಕನ್ನು ಇಲ್ಲಿಯ ಕಥೆಗಾರರು ತಮ್ಮ ಕಥಾ ಸಾಹಿತ್ಯದಲ್ಲಿ ಒಡಮೂಡಿಸುವ ಪ್ರಯತ್ನ ಮಾಡಿದ್ದಾರೆ. ಸ್ಥಳೀಯ ಬದುಕನ್ನು ಕಟ್ಟಿಕೊಡುವ ಪ್ರಯತ್ನದಲ್ಲಿ ಎಲ್ಲ ಕಥೆಗಾರರು ಸಫಲವಾಗಿದ್ದಾರೆ ಎಂದರೆ ತಪ್ಪಾಗಲಾರದು. ಸಾಮಾಜಿಕ ಜೀವನದಲ್ಲಿರುವ ಏರುಪೇರುಗಳನ್ನು ಇದ್ದುದ್ದನ್ನು ಇದ್ದ ಹಾಗೆ ಕಟ್ಟಿಕೊಡುವ ಪ್ರಾಮಾಣಿಕ ಪ್ರಯತ್ನವನ್ನು ನಾವು ಜಿಲ್ಲೆಯ ಹಲವಾರು ಕಥೆಗಾರರ ಕಥೆಗಳಲ್ಲಿ ಕಾಣಬಹುದು. ಕಾಲ, ಸಮಾಜ, ಸಂದರ್ಭಗಳ ಅನುಸಾರವಾಗಿ ಕಥೆಯೊಳಗೆ ಸಮಾಜದ ವ್ಯವಸ್ಥೆಯನ್ನು ತಮ್ಮ ಮನೋಧರ್ಮಕ್ಕೆ ಅನುಗುಣವಾಗಿ ಚಿತ್ರಿಸಿದ್ದಾರೆ, ಇಲ್ಲಿಯ ಕಥೆಗಳಲ್ಲಿ ಶ್ರೀಮಂತರು ಬಡವರು, ಸಾಲಗಾರರು, ಕೂಲಿ ಸ್ತ್ರೀಯರು, ಶೋಷಿತರು, ಶೋಷಿಸುವವರು ಹೀಗೆ ನಾನಾ ಮುಖಗಳಲ್ಲಿ ಸಮಾಜದ ಪರಿಸ್ಥಿತಿಗಳ ಪಾತ್ರಗಳ ರೂಪು ಪಡೆದುಕೊಂಡಿವೆ. ಪ್ರಸ್ತುತ ಅಧ್ಯಾಯನವು ಈ ವರ್ಗಗಳ ನಡುವಿನ ಸಾಮ್ಯ-ವೈಷಮ್ಯಗಳನ್ನು ಅವಲೋಕಿಸುವ ಉದ್ದೇಶವನ್ನು ಒಳಗೊಂಡಿದೆ.

ಹೆಚ್.ಎಲ್. ನಾಗೇಗೌಡ ಅವರ **'ಸಿದ್ಧಣ್ಣನ ಸಂಸಾರ'** ಕಥೆಯಲ್ಲಿ ಬಡ ರೈತನ ಕೌಟುಂಬಿಕ ಸ್ಥಿತಿ ಸಾಲದಿಂದ ಶೂಲಕ್ಕೆ ಎನ್ನುವುದನ್ನು ಗುರುತಿಸಬಹುದು. ಸಿದ್ಧಣ್ಣನ ಸಂಸಾರ ಹಳ್ಳಿಯಲ್ಲಾಗುವ ಅಪೂರ್ವ ಘಟನೆಯೇನಲ್ಲ. ಅಕ್ಕಪಕ್ಕದವರಿಗೆ ಸಭ್ಯರಂತೆ ಕಂಡು ಸಿಕ್ಕಿದವನನ್ನು ನುಂಗಿಬಿಡುವರು. ಒಮ್ಮೆ ಅಂತಹ ಸಾಲಗಳಿಗೆ ಸಿಕ್ಕಿಬಿದ್ದನೆಂದರೆ ಅಪ್ರಾಮಾಣಿಕನಾದ ರೈತ ಪುನ: ಬಿಡಿಸಿಕೊಳ್ಳುವಂತಹ ಪರಿಸ್ಥಿತಿ ಬರುವುದೇ ಇಲ್ಲ.

"ಐನೂರು ರೂಪಾಯಿ ಸಾಲಮಾಡ್ದೆ ಅದರ ಅಸಲು ಬಡ್ಡಿ ಎಲ್ಲಾ ಸೇರಿ ಈಗೆಂಟು ನೂರಾಗ್ಯದೆ. ತಳ್ಳೂರಿನ ಶಾಂತ ರಾಜಯ್ಯನೋರು ದಿನಾ ಬೆಳಗಾದ್ರೆ ಸಾಬರ್ನ ಕಳಸ್ತಾ ಅವ್ರೆ. ಅಲ್ದೆ ವರ್ಷಕ್ಕೆ ಹದ್ನೈದು ರೂಪಾಯಿ ಕಂದಾಯ ಕಟ್ಟಬೇಕು. ಇದ್ಕೆ ಸಾಲ ಮಾಡ್ದೆ ಇನ್ನೆಲ್ಲಿ ತರ್ಲಿ ಪಟೇಲ್ರ ಹತ್ರ ಮೈಸಾಲ ನೂರೈವತ್ತಾಗೈತೆ. ಇನ್ನು ಮನಿಗೆ ಉಪ್ಪು ಮೆಣಸು ಜೀರಿಗೆ ಸೀಮೆಎಣ್ಣೆ ಹಾಳು ಮೂಳು ಅಂತ ಅಲ್ಲಲ್ಲಿ ಕೈಸಾಲ ನಲವತ್ತೋ ಐವತ್ತೋ ಆಗಿರ್ಬೇಕು ಅಂತೂ ಎಲ್ಲಾ ಒಂದಾಗ್ಯದೆ ಅನ್ನಪ್ಪಾ" (ಎಚ್.ಎಲ್. ನಾಗೇಗೌಡ, ಕಂಡು ಕೇಳಿದ ಕಥೆಗಳು, ೧೯೭೯, ಪುಟ-೦೫). ಸಿದ್ಧಣ್ಣನ ಸಂಸಾರ ಹೀಗಾಯಿತೆಂದು ಹೇಳುವುದು ತುಂಬಾ ವ್ಯಥೆಯಾಗುತ್ತದೆ. ಬಡವರ ಕೌಟುಂಬಿಕ ಜೀವನ ನಿರ್ವಾಹಣೆಯ ಸ್ಥಿತಿಯನ್ನು ಇಲ್ಲಿ ಗುರುತಿಸಲಾಗಿದೆ. ಅವರ ಆಸ್ತಿ ಪಾಸ್ತಿಯೇಲ್ಲಾ ತಳ್ಳೂರ ಶಾಂತರಾಜಯ್ಯನವರಲ್ಲಿ ಮಾಡಿದ ಸಾಲಕ್ಕೆ ಹರಾಜಾಯ್ತು. ಮನೆ ಒಂದು ಬಿಟ್ಟು ಅವರೂ ಅವರ ಹೆಂಡತಿಯೂ ಮಲೇರಿಯಾಕ್ಕೆ ತುತ್ತಾದರು. ಗಂಡು ಮಕ್ಕಳಿಬ್ಬರೂ ನೀಲಗಿರಿ ಕಾಫಿ ತೋಟ ಸೇರಿದರು. ಕಥೆಗಾರರು ಹೀಗೆ ನಿರೂಪಿಸುತ್ತಾ ರೈತ ಕುಟುಂಬದ ಬವಣೆಯನ್ನು ಮನಮುಟ್ಟುವಂತೆ ಚಿತ್ರಿಸುತ್ತಾರೆ. ಹಾಗೆಯೇ ಅದರ ಸ್ವರೂಪವನ್ನೂ ಸಹ ಹೀಗೆ ಚಿತ್ರಿಸುತ್ತಾರೆ. "ಮುಖದ ಮೇಲೆ ಮೂರು ತಿಂಗಳ ಬಿಳೀಗಡ್ಡ, ಅಲ್ಲಲ್ಲಿ ಹರಿದ ಕರೀಬೆಕ್ಕಿನ ಅಂಗಿ, ಲಂಗೋಟಿಕಟ್ಟಿ ಮೇಲೆ ಸೊಂಟಕ್ಕೆ ಸುತ್ತಿದ ಆರು ಮೊಳದ ದಟ್ಟಿ, ಮಾಗಿಯ ಕೊರೆತಕ್ಕೆ ಕೆರೆಯ ಅಂಗಳ ಬೀಟಿ ಸೆಳೆದಂತೆ ಬಿರಿದ ಒರಟು ಅಂಗಾಲುಗಳು, ಸೊರಗಿ ಕೊರಗಿ ಸುಸ್ತಾದ ದೇಹ, ಕಾಂತಿಹೀನಕಣ್ಣುಗಳು"(ಎಚ್.ಎಲ್. ನಾಗೇಗೌಡ, ಕಂಡು ಕೇಳಿದ ಕಥೆಗಳು, ೧೯೭೯, ಪುಟ-೦೩). ಕಥೆಗಾರರು ಸಮಾಜದಲ್ಲಿ ಕಂಡ ಹಸಿವಿನಿಂದ ಬಳಲುತ್ತಿರುವ ಕುಟುಂಬಗಳನ್ನು ಸೂಕ್ಷ್ಮವಾಗಿ ಗ್ರಹಿಸಿ ಕಥೆ ಎಣೆದಿದ್ದಾರೆ. "ಕಷ್ಟದ ಬಾಳು ಅನುಭವಿಸಿ ಅವರು ಕಗ್ಗಲ್ಲಾಗಿದ್ದರು. ಹಳ್ಳಿಯ ಕೊಂಪೆಯಲ್ಲಿದ್ದ ಸಿದ್ಧಣ್ಣನ ಕಷ್ಟ ಯಾರಿಗೆ ಅರಿಯಬೇಕು? ಅರಿತ ನಾನಾದರೂ ಏನು ಮಾಡಬಲ್ಲೇ?

ಇಂತವರಿಗೆ ದೇವರೇ ಊರುಗೋಲು. ಅದೊಂದು ಇಲ್ಲದಿದ್ದರೆ ಸಿದ್ಧಣ್ಣನಂಥ ಕೋಟಿ ಕೋಟಿ ಜನ ಯಾವತ್ತೊ ವಿಷ ತೆಗೆದುಕೊಂಡು ಸತ್ತು ಹೋಗುತ್ತಿದ್ದರು" (ಎಚ್.ಎಲ್. ನಾಗೇಗೌಡ, ಕಂಡು ಕೇಳಿದ ಕಥೆಗಳು, ೧೯೭೯, ಪುಟ-೦೮). ಕಥೆಗಾರರ ಇಂತಹ ಮಾತುಗಳು ರೈತರ ಬದುಕಿನ ಸಮಸ್ಯೆಗಳನ್ನು ಸೂಕ್ಷ್ಮವಾಗಿ ಗುರುತಿಸಿದ್ದಾರೆ. ಪ್ರಸ್ತುತ ಸಮಾಜದಲ್ಲಿ ಈ ಕಥೆಯ ಸನ್ನಿವೇಶದಂತೆ ರೈತ ಸಾಲ ಭಾದೆಯನ್ನು ತಡೆಯದೆ, ಸಾಲದ ಸಮಸ್ಯೆಗೆ ಸಾವೇ ಪರಿಹಾರವೆಂಬಂತೆ ಕಂಡುಬರುತ್ತಿರುವುದು ದುರದೃಷ್ಟದ ಸಂಗತಿಯಾಗಿದೆ. ಆದರೆ ಇಂದು ರೈತರ ಆತ್ಮಹತ್ಯಯು ಹೆಚ್ಚಾಗಿ ಸಂಭವಿಸುತ್ತಿರುವುದು ದುರದೃಷ್ಟ ಸಂಗತಿಯಾಗಿ ಪರಿಣಮಿಸಿದೆ. ಇಂದು ರೈತರಿಗೆ ಮನಶಕ್ತಿ ತುಂಬುವ ಕೆಲಸವಾಗಬೇಕಾಗಿದೆ. ಅದಕ್ಕೆ ಆಳುವ ಸರ್ಕಾರಗಳು, ಅಧಿಕಾರಿಗಳು ರೈತರ ಪರ ಕಾಳಜಿಗಳ ಬಗ್ಗೆ ಗಮನಹರಿಸಬೇಕಾಗಿದೆ.

ಜೀ.ಶಂ. ಪರಮಶಿವಯ್ಯ ಅವರ **'ಬಾಳು ಸವೆಯುತ್ತಿದೆ'** ಇಂತಹದೇ ಕಥೆಯಲ್ಲಿ ಬಡತನದ ಬದುಕಿನ ದಾರುಣತೆಯನ್ನು ಬಿಂಬಿಸಲಾಗಿದೆ. ಈ ಕಥೆಯಲ್ಲಿ ಬಡವನಾದ ರಂಗಣ್ಣ ರಸ್ತೆ ಕೆಲಸ ಮಾಡುವಾಗ ಅನುಪಮವಾದ ರೂಪ, ಆಕರ್ಷಕವಾದ ಉಡುಪು ಧರಿಸಿದ್ಧ ಮಗುವನ್ನು ಕಂಡು ಆನಂದ ಪಟ್ಟ. ಅವನಿಗೂ ಒಂದು ಪುಟ್ಟ ಮಗುವಿದೆ. ಈಗೀಗ ಅಂಬೆಗಾಲಿಡುತ್ತಾನೆ, ಅವನ ಚಲುವಿನ ರಾಮು. ಆದರೆ ರಾಮುನಿಗೂ ಈ ಮಗುವಿಗೂ ಎಲ್ಲಿಯ ಹೋಲಿಕೆ. ಅವನನ್ನು ಕೂಡಿಹಾಕಿ ಬಂದಿದ್ದಾರೆ. ಕಂಬಕ್ಕೆ ಬೇರೆ ಬಿಗಿದು ಬಂದಿದ್ದಾರೆ! ಅತ್ತಿತ್ತ ಓಡಾಡಿ ಮಡಕೆಗಳನ್ನು ಒಡೆಯದಿರಲಿ ಎಂದು. ಕಟ್ಟದೆ ವಿಧಿಯಿಲ್ಲ-ಗಂಡ, ಹೆಂಡತಿ ಇಬ್ಬರೂ ಕೆಲಸಕ್ಕೆ ಬರಬೇಕು. ರಾಮನೆಂದು ಕುಳಿತರೆ ಸಂಜೆ ಹೊಟ್ಟೆ ಬರಿದಾಗುವ ಸಂಭವ. "ನನ್ನ ಮಗು !ಓ! ಅದಕ್ಕೆ ಸ್ನಾನವಿಲ್ಲ; ತೊಡಲು ಸರಿಯಾದ ಅಂಗಿಯಿಲ್ಲ, ಕಾಲಂದುಗೆ ಇಲ್ಲ, ನಡುವಿಗೆ ಬೆಳ್ಳಿಯ ಉಡಿದಾರವಿಲ್ಲ. ತಲೆಗೆ ಸರಿಯಾದ ಕುಲಾವಿಯಿಲ್ಲ. ಅವನೇ ಇವರ ಹೊಟ್ಟೆಯಲ್ಲಿ ಹುಟ್ಟಿದ್ದರೆ! ಇದೇ ವೈಭವ ಅವನಿಗೂ ಇರುತ್ತಿತ್ತೋ ಏನೋ? ನಾವು ಪಾಪಿಗಳು. ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳನ್ನೂ ಸರಿಯಾಗಿ ನೋಡಿಕೊಳ್ಳುವುದಿಲ್ಲ, ನನ್ನ ಕಂದ, ಅವನಿಗೂ ಈ ಉಡುಪಿದ್ದಿದ್ದರೆ" (ಜೀ.ಶಂ ಪರಮಶಿವಯ್ಯ, ಮಬ್ಬು ಜಾರಿದ ಕಣಿವೆಯಲ್ಲಿ, ೧೯೮೮, ಪುಟ - ೧೦೮). ಇದು ರಂಗಣ್ಣನ ಮನಸ್ಸಿನ ಆಲೋಚನೆಯ ಮಾತುಗಳು. ಬಡತನದ ಬವಣೆ ಕೇವಲ ಒಂದು ಪ್ರದೇಶಕ್ಕೆ ಸೀಮಿತವಾದುದ್ದಲ್ಲ, ಬಹುಶ: ಮನುಷ್ಯ ವರ್ಗ ವಾಸಿಸುತ್ತಿರುವ ಎಲ್ಲಾ ಪ್ರದೇಶದಲ್ಲೂ ಕಂಡು ಬರುತ್ತದೆ.

ರಂಗಣ್ಣನ ಮನಸ್ಸಿನ ಮೇಲೆ ಉಳ್ಳವರ ಮಗು ವಿಶೇಷ ಪರಿಣಾಮವನ್ನುಂಟು ಮಾಡಿತು. ತನ್ನ ಮಗುವಿಗೂ ಒಂದು ಜೊತೆ ಬಟ್ಟೆ ಹೊಲಿಸುವ ಉದ್ದೇಶದಿಂದ ರಂಗಣ್ಣ ಅಂದಿನ ತನ್ನ ಮತ್ತು ಹೆಂಡತಿಯ ದಿನಗೂಲಿಯನ್ನು ತೆಗೆದುಕೊಳ್ಳದೆ ಮೇಸ್ತ್ರಿಯಲ್ಲಿಯೇ ಇರಿಸಿ ಬರಿಗೈಯಲ್ಲಿ ಮನೆಗೆ ಬರುವನು. ಆದರೆ ಅಂದಿನ ಕೂಲಿ ತರದೆ ಇರುವುದರಿಂದ ಹೊಟ್ಟೆಗೆ ಊಟವಿಲ್ಲ. ಇದು ಬಡತನದ ದಾರಿದ್ರ್ಯವನ್ನು ತೋರುತ್ತದೆ. 'ನಾವು ಎಂತ ಪಾಪಿಸ್ಟ್ರು. ಇರೋ ಒಂದು ಮಗೀಗೆ ಒಂದು ಅಂಗೀ ವಲ್ಸಾಕು ತಿಕಾಣಿಲ್ಲವಲ್ಲ' ಅಂತ. "ಅಯ್ಯೋ ನಾವೆಲ್ಲಂದ ಹೊಲ್ಸಾನ ಹೇಳಿ ಪಡಕೊಂಡು ಬಂದೋರು ಅವರ ಮಕ್ಕಳಿಗೆ ಬೇಕಾದ್ದು ಬೇಡ್ವಾದ್ದು ಎಲ್ಲಾನು ಮಾಡಿಸ್ತಾರೆ ನಾವು ಬಡುವು ನಮ್ಮ ಮಕ್ಕಳೂ ಬಡವ್ರು, ಉಗಾದಿಗೋ ಸಿವರಾತ್ರಿಗೋ ಒಂದೊಂದೊಲಿಸ್ಕೊಂಡ್ರಾಯ್ತು ನಮ್ಮ ಮಕ್ಕಳ ಪುಣ್ಯ ಒಳ್ಳೊಳ್ಳೆ ಬಟ್ಟೆಗೆ ಎಲ್ಲಿ ತರಾನ! ನಿಮ್ಗೇನು ತಿಳೀದ!"(ಜೀ.ಶಂ ಪರಮಶಿವಯ್ಯ, ಮಬ್ಬು ಜಾರಿದ ಕಣಿವೆಯಲ್ಲಿ, ೧೯೮೮, ಪುಟ-೧೧೨)ರಂಗಣ್ಣನ ಹೆಂಡತಿ ಕೆಂಚಿಯ ಈ ಮಾತುಗಳು ಬಡತನದ ದಾರುಣ್ಯವನ್ನು ತೊರುತ್ತದೆ. ರಂಗಣ್ಣನು ಕೂಲಿ ತರದೆ ಇರುವುದರಿಂದ ನಾಳಿನ ಸಮಸ್ಯೆ ಮೂಡಿತು. ನಾಳೆ ಮತ್ತೆ ರಸ್ತೆಯ ಕೆಲಸಕ್ಕೆ ಹೋಗಬೇಕು. ಹೊಟ್ಟೆಗಿಲ್ಲದೆ ಒಂದು ಗಳಿಗೆಯು ಕೆಲಸ ಮಾಡಲಾಗುವುದಿಲ್ಲ. ಈ ರಾತ್ರಿ ಉಪವಾಸ ಇರುವುದು ಅಸಾಧ್ಯವೆ. ಬೆಳಗಿನಿಂದ ಒಂದು ಜೋಳದ ಮುದ್ದೆ ಉಂಡ ರಂಗಣ್ಣನ ದಂಪತಿಗಳಿಗೆ ಹಸಿವನ್ನು ತಡೆಯಲಾಗದೆ ಧಾನ್ಯವನ್ನು ಸಾಲ ಕೇಳಿ ಎಲ್ಲೂ ಸಿಗದೆ, ರಂಗಣ್ಣನು ರಾಗಿ ತೆನೆಯನ್ನು ಕದ್ದು ಹಸಿವನ್ನು ನೀಗಿಸಿ ಕೊಳ್ಳಬೇಕೆನ್ನುವಷ್ಟರಲ್ಲಿ ಗೌಡರ ಹೆಂಡತಿಯು ತಮ್ಮ ಜಮೀನಿನಿಂದ ತೆನೆಯನ್ನು ಕದ್ದವರಿಗೆ 'ಅವರ ಮಕ್ಕಳಿಗೆ ವಾಂತಿಭೇದಿ ಬರಾ' ಅಂತ ಹನುಮಂತರಾಯವನಿಗೆ ಕೈಮುಗೀತಾಳಂತೆ!' ಎಂಬ ಮಾತುಗಳು ರಂಗಣ್ಣನ ಕಿವಿಗೆ ಬಿದ್ದಾಗ ಆತಂಕಕ್ಕೆ ಒಳಗಾದನು. ಶ್ರೀಮಂತರ ಕುಟುಂಬದ ಮಗುವನ್ನು ನೋಡಿ ತನ್ನ ಮಗುವಿಗೂ ಬಟ್ಟೆ ಹೊಲಿಸುವ ಆಸೆಯಿಂದ ಕೂಲಿಯನ್ನು ಕೂಡಿಟ್ಟ. ಆದರೆ ತನ್ನ ಹಸಿವನ್ನು ನೀಗಿಸಿಕೊಳ್ಳಲು ಯಾವತ್ತೂ ಕದಿಯದ ರಂಗಣ್ಣ ಕದ್ದು ಕಳ್ಳನಾಗಿ ಪಂಚಾಯಿತಿಯಲ್ಲಿ ದಂಡ ಕಟ್ಟಿದನು.

"ರಸ್ತೆಯ ಕೆಲಸ ಮುಗಿದಿಲ್ಲ; ರಂಗಣ್ಣನ ಬಡತನವೂ ಹರಿದಿಲ್ಲ. ಆ ತಿಟ್ಟಿನಲ್ಲಿ, ಈ ಸೇತುವೆಯಾಚೆ ಜಲ್ಲಿಯನ್ನು ಸುರಿಯುತ್ತಿದ್ದಾರೆ. ಕೂಲಿಯಾಳುಗಳು ತಂಡತಂಡವಾಗಿ ಹೋಗುತ್ತಿದ್ದಾರೆ. ರಂಗಣ್ಣನೂ ಮಡದಿಯೊಡನೆ ಕೆಲಸಕ್ಕೆ

ಬರುತ್ತಾನೆ. ಬರಿಯ ಮೈಯಲ್ಲಿ ಅವನ ಮಗ ರಾಮು ಮನೆಯ ಮುಂದೆ ಆಡುತ್ತಾನೆ. ರಸ್ತೆಯಂತೆ ಬಾಳು ಮಾತ್ರ ಸವೆಯುತ್ತಿದೆ.!" (ಜೀ.ಶಂ ಪರಮಶಿವಯ್ಯ, ಮಬ್ಬು ಜಾರಿದ ಕಣಿವೆಯಲ್ಲಿ, ೧೯೮೮, ಪುಟ-೧೧೭)ರಂಗಣ್ಣ ಮತ್ತು ಹೆಂಡತಿ ಕೆಂಚಿ ರಸ್ತೆ ಕೆಲಸ ಮಾಡುತ್ತಿರುವುದನ್ನು ಬಡತನದ ಬದುಕಿಗೆ ಸಮೀಕರಿಸಿರುವುದು ಈ ಕಥೆಯ ವೈಶಿಷ್ಟವಾಗಿದೆ. ಕೆಲಸ ಮುಗಿದ ಮೇಲೆ ರಸ್ತೆ ಹಸನಾಗಬಹುದು ಆದರೆ ರಂಗಣ್ಣನ ಬದುಕು ಹಸನಾಗಲಿಲ್ಲ, ಆಗುವುದೂ ಸಾಧ್ಯವಿಲ್ಲ. ಭಾರತಕ್ಕೆ ಸ್ವತಂತ್ರ ಬಂದು ದಶಕಗಳು ಕಳೆದಿವೆ. ನಗರೀಕರಣ, ಗಣಕೀಕರಣ, ಜಾಗತೀಕರಣ ವ್ಯಾಪಿಸಿದರೂ ಬಡವ ಬಡವನಾಗಿಯೇ, ಶ್ರೀಮಂತ ಇನ್ನೂ ಶ್ರೀಮಂತ ನಾಗುತ್ತಿರುವುದು ಕಂಡು ಬರುತ್ತದೆ. ದೇಶದ ಹೀನ ರಾಜಕೀಯ, ಭ್ರಷ್ಟಚಾರ, ಅನ್ಯಾಯಗಳಿಂದ ಬಡವರಿಗೆ ಉತ್ತಮ ಶಿಕ್ಷಣ ಮರೀಚಿಕೆಯಾಗಿ ತನ್ನ ಸ್ಥಿತಿಯನ್ನು ಬದಲಾಯಿಸಲು ಸಾಧ್ಯವಾಗದ ಸಂದರ್ಭ ಕಾಣುತ್ತಿದ್ದೇವೆ.

ಇಲ್ಲಿ ಶ್ರೀಮಂತ ಬಡವರ ನಡುವೆ ನಡೆಯುವ ತಿಕ್ಕಾಟ ಸ್ಫೋಟಗೊಳ್ಳುವ ಪರಿಸ್ಥಿತಿ ಬೆಸಗರಹಳ್ಳಿ ರಾಮಣ್ಣ ಅವರ **'ಅವ್ವ'** ಕಥೆಯಲ್ಲಿ ಕಾಣಬಹುದು. ಸಾಹುಕಾರ ವೀರಭದ್ರಯ್ಯನವರು ಅಸಲು ಬಡ್ಡಿ ವಸೂಲು ಮಾಡಲು ಬಂದಾಗ 'ಸ್ವಾಮಿ ಬಡವಿ, ಜೊತೆಗೆ ಮುಂಡೆ, ಬಡ್ಡಿ ಕೊಡಲಾರೆ ಅಸಲು ಕೊಟ್ಟುಬುಡ್ತೀನಿ ಎಂದು ಕೆಂಪಿ ಕೈ ಮುಗಿದು ನಿಂತರೂ' ಕೂಡ ವೀರಭದ್ರಯ್ಯ ಬಡ್ಡಿ ಕೊಡಲೇಬೇಕು ಎಂದು ಅಧಿಕಾರ ಚಲಾಯಿಸುತ್ತಾನೆ. ಇನ್ನೂ ಮಾತು ಮುಂದುವರಿಸಿ 'ಇಲ್ಲದಿದ್ರೆ ನಿನ್ನ ಮಗನನ್ನು ಎರಡು ವರ್ಷ ನಮ್ಮ ಮನೆಯಲ್ಲಿ ಜೀತಕ್ಕಿರಿಸು ಎನ್ನುತ್ತಾನೆ.' ಇಲ್ಲಿ ಅಸಹಾಯಕ ಸ್ಥಿತಿಯಲ್ಲಿರುವ ಬಡ ಕುಟುಂಬಗಳನ್ನು ಶೋಷಿಸುತ್ತಿರುವ ರೀತಿಯನ್ನು ಗಮನಿಸುವುದು. ಇದು ಕೇವಲ ಒಂದು ಜಿಲ್ಲೆಯ ಭಾಗದಲ್ಲಿ ಮಾತ್ರವಲ್ಲ, ಜಗತ್ತಿನ ಎಲ್ಲಾ ಕಡೆಯು ಶ್ರೀಮಂತರು ಬಡವರನ್ನು ನಿಷ್ಕರುಣೆಯಿಂದ ಕಾಡುತ್ತಿದ್ದಾರೆ. ಜೀತಕ್ಕೆ ಕಳಿಸು ಎನ್ನುವ ಸಾಹುಕಾರನ ಮಾತನ್ನು ಕೇಳಿದ ಕೆಂಪಿ 'ಇನ್ನೊಂದು ಬಾರಿ ಜೀತ ಎನ್ನುವ ಮಾತನ್ನು ಆಡಬ್ಯಾಡಿ ನಾಳೆ ಬಡ್ಡಿಯನ್ನು ಬಿಸಾಕುತ್ತೇನೆ' ಎಂದು ತನ್ನಲ್ಲಿರುವ ಚಿನ್ನದ ಆಭರಣಗಳನ್ನು ಮಾರಿ ಸಾಹುಕಾರನಿಗೆ ಹಿಂತಿರುಗಿಸಿ ತನ್ನ ಕುಟುಂಬದ ಅಸ್ತಿತ್ವವನ್ನು ಉಳಿಸಿಕೊಳ್ಳುತ್ತಾಳೆ. ಇಲ್ಲಿ ಕಥೆಗಾರರು ಕುಟುಂಬವನ್ನು ರಕ್ಷಿಸುವ ಸ್ತ್ರೀಶಕ್ತಿಯ ನೆಲೆಯನ್ನು ಗುರುತಿಸಿದ್ದಾರೆ. ಜೀತ ಪದ್ಧತಿಗೆ ಅಂತ್ಯ ಹಾಡಲು ಸೂಚಿಸಿರುವುದನ್ನು ಕಥೆಯಲ್ಲಿ ಗುರ್ತಿಸಬಹುದು.

ಬೆಸಗರಹಳ್ಳಿ ರಾಮಣ್ಣ ಅವರ **'ಗರ್ಜನೆ'** ಕಥೆಯಲ್ಲಿ ಶೀರ್ಷಿಕೆಯ ಹೆಸರಿನಂತೆ ವರ್ಗ ಘರ್ಷಣೆ ಕಂಡುಬರುತ್ತದೆ. ಮರಿನಂಜನ ಹುಟ್ಟಿನ ಹಿನ್ನೆಲೆಯನ್ನು ಅರಿತ ನಂತರ ತನ್ನನ್ನು ಹಿಯಾಳಿಸಿ ಮಾತನಾಡುವ ಪಟೇಲರ ಹೆಂಡತಿ ಮತ್ತು ತನ್ನ ಜನ ಆಡುವ ಮಾತಿಗೆ ತಿರುಗೇಟು ಕೊಡುವ ಧೈರ್ಯವನ್ನು ತಂದುಕೊಂಡ ಮರಿನಂಜ, ಸುಬ್ಬಮ್ಮ ಮರಿನಂಜನಿಗೆ ನಿನ್ನ ತಂದೆ ತೀರಿಕೊಂಡ ಬಳಿಕ ನಿಮ್ಮವ್ವನ ಆಸ್ತಿ ಪಾಸ್ತಿ ಎಲ್ಲಾ ಪಟೇಲರ ಪಾಲಾಯ್ತು. ಆಮೇಲೆ ನೀನು ಹುಟ್ಟಿದೆ, ನೀನು ನಾಲ್ಕು ವರ್ಷದವನಾಗಿದ್ದಾಗ ನಿಮ್ಮವ್ವ ಕಾಲರ ತಗುಲಿ ಸತ್ತಳು ಎಂಬ ವಿಷಯ ತಿಳಿದ ಮೇಲೆ ತಾನು ಪಟೇಲರಿಗೆ ಹುಟ್ಟಿದವನೇ ಎಂಬ ಸತ್ಯ ತಿಳಿದು "ನನ್ನ ಅವರಿವರು ಹಾದರಕ್ಕೆ ಹುಟ್ಟಿದೋನೆ ಅಂದ್ರೆ ನಿಮಗೇನೂ ಅನ್ನಸೋದೇ ಇಲ್ವೆ? ಮರಿನಂಜ ಅನ್ನೊ ಬದಲು ಕುರಿನಂಜ, ಕುರಿನಂಜ ಅಂತ ಕೂಗಿ ಹಂಗಿಸಿದ್ರೆ ನಿಮ್ಗೆ ಹೊಟ್ಟೆ ತಣ್ಣಗಾದದೇ"(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೬, ಪುಟ – ೧೬೬)ಎಂದು ಪಟೇಲರನ್ನು ಹಿಡಿದು ಜಗ್ಗಿಸಿ ಕೇಳಬೇಕು ಎನ್ನುವ ಆಕ್ರೋಶ ವ್ಯಕ್ತಪಡಿಸಲಾಗಿದೆ. ಮರಿನಂಜ ತಂದೆ-ತಾಯಿಲ್ಲದ ತಬ್ಬಲಿ, ಬಡವನಾಗಿದ್ದು ಅವನ ಸುತ್ತಲಿನ ಜನ ಅವನ ಹುಟ್ಟು ಹಾಗೂ ವ್ಯಕ್ತಿತ್ವವನ್ನು ಹೀಗಳೆಯುತ್ತಿದ್ದರು, ಇದಕ್ಕೆ ಪ್ರತಿಕಾರವಾಗಿ ಮರಿನಂಜ ಹೀಗಳೆಯುವವರಿಗೆ ಹಿಂದಿರುಗಿ ಕುಡುಗೋಲು ತೋರಿಸುವ ಮೂಲಕ ಉತ್ತರ ಕೊಡುವ ಸನ್ನಿವೇಶ ಕಥೆಯಲ್ಲಿ ಮೂಡಿದೆ. ಕಥೆಗಾರರು ತಮ್ಮ ಬಂಡಾಯ ಮನೋಧೋರಣೆಯನ್ನು ಕಥೆಯ ಮೂಲಕ ವ್ಯಕ್ತಪಡಿಸಿದ್ದಾರೆ. ಬಡವ ಎಂಬ ಕಾರಣಕ್ಕೆ ಎಲ್ಲಾವನ್ನು ಸಹಿಸಿಕೊಳ್ಳುವ ಅಗತ್ಯವಿಲ್ಲ ಎಂಬುದನ್ನು ಮನವರಿಕೆ ಮಾಡಿಸಿದ್ದಾರೆ.

ನಮ್ಮ ಸುತ್ತಲಿನ ಸಮಾಜವು ಅದರೊಳಗೆ ಬದುಕುತ್ತಿರುವ ವ್ಯಕ್ತಿಗಳಿಗೆ ಸಮಾನವಾದ ಬದುಕನ್ನು ಕೊಟ್ಟಿಲ್ಲ. ಶ್ರೀಮಂತರಿಗೆ ಒಂದು, ಬಡವರಿಗೊಂದು ನ್ಯಾಯ ಇದು ಸ್ವಾತಂತ್ರ ನಂತರ ದಿನಗಳಲ್ಲಿ ಹೆಚ್ಚಾಗಿ ಮೂಡಿರುವುದು ಎಂಬ ಚಿತ್ರಣವನ್ನು **'ಗಾಂಧಿ'** ಕಥೆಯ ಶೀರ್ಷಿಕೆಗೆ ವಿರುದ್ಧವಾದ ಸನ್ನಿವೇಶಗಳನ್ನು ತಂದೊಡ್ಡುತ್ತದೆ. ಸುಮಾರು ಹದಿನೈದು ವರ್ಷದ ಹುಡುಗ ತನ್ನ ತಾಯಿಯೊಂದಿಗೆ ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ಮುಂಜಾನೆಯೆ ಬಂದು, ತುಂಬಾ ಹೊತ್ತು ಕಳೆದ ಬಳಿಕವು ಯಾರು ಇವರನ್ನು ವಿಚಾರಿಸಲಿಲ್ಲ. ಗಾಂಧಿ(ಹುಡುಗನ ಹೆಸರು) ಊರಿಗೆ ಹೊಗುವ ಎಂದು ತಾಯಿಗೆ ಹೇಳಿದಾಗ ತಾಯಿಯು "ಹೊತ್ತುಡಕೆ ಮುಂಚೆ ಬಂದೋ ನಾವು, ಇಲ್ಲಿ ನನ್ನ ನಿನ್ನ ರಾಗವ ಯಾರು ಕೇಳಾರು?"(ಬೆಸಗರಹಳ್ಳಿ ರಾಮಣ್ಣ,

ಕನ್ನಂಬಾಡಿ, ೧೯೮೭, ಪುಟ-೨೭೮) ಇದು ಬಡತನದ ಅಸಹಾಯಕತೆಯಾಗಿ ಕಂಡುಬರುತ್ತದೆ. ಹುಡುಗನು 'ನಾನು ಇದ್ದರೇಷ್ಟು, ಸತ್ತರೆಷ್ಟು ನಡಿಯವ್ವಾ ಹೋಗುವ, ಊರಿಗೆ, ಇದ್ದು ನಾನು ಯಾವ ರಾಜ್ಯ ಆಳಬೇಕು' ಈ ಮಾತುಗಳು ಬಡತನ ಬೇಗೆಯಿಂದ ಮತ್ತು ತಮಗೆ ಸಿಗದ ಸೌಕರ್ಯಗಳಿಂದ ಬೇಸತ್ತ ಗಾಂಧಿ ಎಂಬ ಹುಡುಗನ ಪರಿಸ್ಥಿತಿಯಾಗಿದೆ. ನಿಜಕ್ಕೂ ಈ ಧಾರುಣ ಪರಿಸ್ಥಿತಿ ಕಥೆಯಲ್ಲಿ ಬರುವ 'ಗಾಂಧಿ'ಯೊಬ್ಬನ ಕಥೆಯಾಗಿರದೆ ನಮ್ಮ ಸುತ್ತಲಿನ ಬಡತನ ಬಳಲಿಕೆಯಿಂದ ಬದುಕುತ್ತಿರುವವರ ಸ್ಥಿತಿಯನ್ನು ಕಟ್ಟಿಕೊಡುತ್ತದೆ. ವೈದ್ಯರ ಕೊಠಡಿಗೆ ತೆರಳಿದ ಹುಡುಗನ ಹೆಸರನ್ನು ಕೇಳಿದ ಡಾಕ್ಟರ್ 'ಗಾಂಧಿ' ಎಂಬ ಉತ್ತರ ಬರುತ್ತಿದ್ದಂತೆ ಹಾಸ್ಯಸ್ಪದ ತೋರುತ್ತಾರೆ. ವೈದ್ಯಾಧಿಕಾರಿ ನರಸಿಂಹಮೂರ್ತಿ ಮತ್ತು ಅವನ ಬಳಗ ಆ ಹುಡುಗನನ್ನು ಮತ್ತು ಪೋಟೊದಲ್ಲಿರುವ ಮಹಾತ್ಮ ಗಾಂಧಿಯನ್ನು ಸೋಜಿಗವೆಂಬಂತೆ ನೋಡುತ್ತಾರೆ. ಗಾಂಧಿ ಎಂಬ ಹುಡುಗನಿಗೆ ಲಿವರ್ ಕಾಯಿಲೆ ಮತ್ತು ಹೃದಯಕ್ಕೆ ಸಂಬಂಧಪಟ್ಟ ಕಾಯಿಲೆ ಎಂದು ದೊಡ್ಡಆಸ್ಪತ್ರೆಗೆ ತೋರಲು ನಿರ್ದೇಶನ ಕೊಡುತ್ತಾರೆ. ತಾತನಾದ ಕರಿಸಿದ್ಧೇಗೌಡ ಮೊಮ್ಮಗನನ್ನು ಕಂಡರೆ ಬಹಳ ಪ್ರೀತಿ, ಶಿವಪುರದ ಸತ್ಯಾಗ್ರಹಕ್ಕೆ ಬಂದ ಮಹಾತ್ಮಗಾಂಧಿಯನ್ನು ನೋಡಿ, ಅವರಂತೆ ಅಗಲವಾದ ಕಿವಿಗಳಿದ್ದುದ್ದರಿಂದ ಮೊಮ್ಮಗನಿಗೆ 'ಗಾಂಧಿ' ಎಂದು ಹೆಸರಿಸಿದ್ದರು.

'ಗಾಂಧಿ'ಯನ್ನು ದೊಡ್ಡಆಸ್ಪತ್ರೆಗೆ ಸೇರಿಸಲು ಹೊರಗಿನ ರೋಗಿಗಳ ವಿಭಾಗದಲ್ಲಿ ಹೆಸರು ಬರೆಯುವ ಗುಮಾಸ್ತ 'ಮಹಂತೇಗೌಡ' ಎಂದು ಬರೆಯಲು ಮಹಾತ್ಮಗಾಂಧಿ ಎಂದು ತಪ್ಪಾಗಿ ಬರೆದಿರಬಹುದೆಂದು ನಕ್ಕ. ಕಥೆಗಾರರು ಇಲ್ಲಿ ಗಾಂಧಿ ಹೆಸರನ್ನು ಕಂಡ ತಕ್ಷಣ ಹಾಸ್ಯಸ್ಪದ ಮಾಡುವ ಘಟನೆಗಳನ್ನು ಇವತ್ತಿನ ಸಮಾಜದಲ್ಲಿ ಗಾಂಧಿ ತತ್ವವಾದ ಸರಳತೆ ಮತ್ತು ಅಹಿಂಸೆ ಕೇವಲ ಪುಸ್ತಕ, ಭಾಷಣಗಳಲ್ಲಿ ಉಳಿದಿವೆ ಹೊರತು, ಜಾರಿಯಲಿಲ್ಲ ಎಂದು ಅಭಿಪ್ರಾಯಿಸಿದ್ದಾರೆ. ದೊಡ್ಡ ಆಸ್ಪತ್ರೆಯಲ್ಲಿ 'ಗಾಂಧಿ' ಎಂಬ ಹೆಸರಿನ ಕಾರಣಕ್ಕಾಗಿ ಮತ್ತು ಕರಿಸಿದ್ಧೇಗೌಡ ತನ್ನ ಬಡತನವನ್ನು ವೈದ್ಯರ ಬಳಿ ಹೇಳಿಕೊಂಡಾಗ ಆಸ್ಪತ್ರೆಗೆ ಸೇರಿಸಿಕೊಂಡರು. ಗಾಂಧಿಯನ್ನು ಪರೀಕ್ಷಿಸಿ ಕೆಲವು ಔಷಧಿಗಳನ್ನು ಬರೆದು ತಕ್ಷಣ ತರುವಂತೆ ಹೇಳಿದರು. ಕರಿಸಿದ್ಧೇಗೌಡ ಮಗಳ-ಮೊಮ್ಮಗಳ ಓಲೆಗಳನ್ನು ಬಿಚ್ಚಿಸಿಕೊಂಡು ಮಾರಲು ಹೋದರೆ ಸರಿಯಾದ ಬೆಲೆಬಾರದೆ, ತನ್ನ ಹಲಸಿನ ಮರವನ್ನು ಮಾರಿ

ಇನ್ನೂರ ಐವತ್ತು ರೂಪಾಯಿಗಳನ್ನು ಹೊಂದಿಸಿಕೊಂಡು ಬರುವಷ್ಟರಲ್ಲಿ ಎರಡು ದಿನಗಳು ಕಳೆದು ಔಷದೋಪಾಚಾರವಿಲ್ಲದೆ ಗಾಂಧಿ ಸತ್ತನು.

'ಗಾಂಧಿ' ಕಥೆಯ ಯುವಕ ಗಾಂಧಿ ಮತ್ತು ಸ್ವಾತಂತ್ರ್ಯ ಹೋರಾಟದ ಗಾಂಧೀಜಿ ಇಲ್ಲಿ ಹೆಚ್ಚು ಚರ್ಚೆಗೆ ಒಳಗಾಗುವುದನ್ನು ಕಾಣಬಹುದು. ಯುವಕ ಗಾಂಧಿಗೆ ಇರುವ ರೋಗಕ್ಕೆ ಮದ್ದಿಲ್ಲದೆ ಆತ ಸತ್ತರೆ, ಮಹಾತ್ಮಗಾಂಧಿ ದೇಶದೊಳಗಿನ ರೋಗಗ್ರಸ್ಥ ಮನಸ್ಸಿನ ಮನುಷ್ಯನ ಗುಂಡಿಗೆ ಬಲಿಯಾಗಿ ಇಬ್ಬರ ಬದುಕು ದುರಂತದಲ್ಲಿ ಕೊನೆಯಾಗುವುದನ್ನು ಕಾಣಬಹುದು. ಈ ಕಥೆಯು ಬಡತನದಲ್ಲಿರುವ ಕುಟುಂಬಗಳ ವ್ಯವಸ್ಥೆಯ ಬವಣೆಯನ್ನು ಪ್ರತಿಬಿಂಬಿಸುತ್ತಿದೆ. ಇದಕ್ಕೆ ಪರಿಹಾರ ಮರೀಚಿಕೆಯೇ ಆಗಿದೆ. ಕಥೆಗಾರರು ಸ್ವತಃ ವೈದ್ಯರಾದ್ದರಿಂದ ಈ ಗಾಂಧಿ ಕಥೆ ಮನ ಮಿಡಿಯುವುದರ ಜತೆಗೆ ಸರ್ಕಾರಿ ಆಸ್ಪತ್ರೆಯ ಸ್ಥಿತಿ ಗತಿಗಳ ಬಗ್ಗೆ ನಿಸ್ಸಂಕೋಚವಾಗಿ ಹೇಳಿದ್ದಾರೆ.

'ಗಾಂಧಿ' ಕಥೆಗೆ ಹೊಂದಿಕೆ ಎಂಬಂತೆ ಬಡವರ್ಗದ ಕೂಲಿಕಾರ್ಮಿಕರ ಜೀವನವನ್ನು **'ಸಂತೆಯ ಒಳಗೊಂದು ಮನೆಯ ಮಾಡಿ'** ಎಂಬ ಕಥೆಯು ಕಟ್ಟಿಕೊಡುತ್ತದೆ. ಹೊಂಬಾಳೆ ಎಂಬುವಳು ತನ್ನ ಮಗ ರಾಜುವನ್ನು ಉಪ್ಪು ತರಲು ಕಳುಹಿಸಿರುತ್ತಾಳೆ. ಬರುವಾಗ ದಾರಿಯಲ್ಲಿ ಅನಾಮಿಕನೊಬ್ಬ ಹಿಂದಿನಿಂದ ಬಂದು ಸೈಕಲಲ್ಲಿ ಚೀಳಿಸುತ್ತಾನೆ. ಅವನಿಗೆ ತಲೆಗೆ ಪೆಟ್ಟು ಬಿದ್ದು ಅತಿಯಾದ ರಕ್ತಸ್ರಾವ ವಾಗುತ್ತಿದ್ದರು ಊರಿನ ಅಂಗಡಿ ಬೀದಿಯಲ್ಲಿ ಜನಕ್ಕೇನು ಬರ ಇರಲಿಲ್ಲ. ಹುಡುಗ ಹೊಲೆಯರ ಜಾತಿಯವನಾದುದರಿಂದ ಅಲ್ಲಿದ್ದವರ ಹೃದಯದಲ್ಲಿ ಕರುಣೆ ಸತ್ತಿತ್ತು. ತಲೆಗೆ ಪೆಟ್ಟು ಬಿದ್ದ ರಾಜುವನ್ನು ವೈದ್ಯರಲ್ಲಿ ತೋರಿಸುತ್ತಾರೆ. ವೈದ್ಯರು ತಲೆಗೆ ಹೊಲಿಗೆ ಹಾಕಿ, ಮತ್ತೆ ನಾಳೆಯೇ ಬರಬೇಕಾಗಿ ಹೇಳಿರುತ್ತಾರೆ. ಕೂಲಿ ಮಾಡುವ ಕಾರ್ಮಿಕರಾದ್ದರಿಂದ ರಾಜುವಿನ ತಂದೆ ರಾಜುವನ್ನು ಆಸ್ಪತ್ರೆಗೆ ಕರೆದೊಯ್ಯಲಿಲ್ಲ ಇದರಿಂದ ತಲೆಯಲ್ಲಿ ಕೀವು ತುಂಬಿ ಬೆಂಗಳೂರಿನ ಹುಚ್ಚಾಸ್ಪತ್ರೆಗೆ ಹೋಗಲು ಹೇಳುತ್ತಾರೆ. ತಕ್ಷಣ ಆಸ್ಪತ್ರೆ ವ್ಯಾನನ್ನು ಕಳುಹಿಸಿಕೊಡಿ ಎಂದಾಗ ೧೫೦ ರೂಪಾಯಿಗಳು ಕಟ್ಟಬೇಕು ಇಲ್ಲದಿದ್ದರೆ ಸಾಧ್ಯವಿಲ್ಲವೆಂದಾಗ ಅಷ್ಟು ಹಣ ಇಲ್ಲದ ಕಾರಣ ಸಕಾಲಕ್ಕೆ ಶುಶ್ರೂಶೆ ಇಲ್ಲದೆ ಸಾಯುತ್ತಾನೆ. ಇದರಿಂದ ಬಿಸಿಲ ಜೋರಾಗಿ ಅಳುವನು ಬಸ್ಸಿನಲ್ಲಿದ್ದವರು ಹೆಣವನ್ನು ಕೆಳಗಿಳಿಸಬೇಕೆಂದು ಗಲಾಟೆ ಮಾಡುತ್ತಾರೆ. ಹೇಗೋ ಬಸ್ಸಿನಲ್ಲಿ ತನ್ನ ಮಗನ ಕಳೇಬರ ಹೊತ್ತಿ ಊರಿಗೆ ಹೋಗುತ್ತಾರೆ. ತಾವು

ಇಲ್ಲಿ ಶಾಶ್ವತವಲ್ಲ ಎಂಬುದನ್ನು ಮರೆತ ಬಸ್ಸಿನ ಜನ ತುಂಬಾ ಕಠಿಣವಾಗಿ ನಡೆದು ಕೊಳ್ಳುತ್ತಾರೆ.

ರಾಜುವಿನ ಸಾವನ್ನು ಪ್ರತಿರೋಧಿಸಿ ರಾಜುವಿನ ತಂದೆ ಚಿಸಿಲನ ಜಾತಿಯ ಯಜಮಾನ (ದಲಿತ) ಪುಟ್ಟಣ್ಣ ಸೈಕಲ್ ಸವಾರನ ಮೇಲೆ ಕಂಪ್ಲೇಂಟು ಕೊಡಲು ಹೋದರೆ ಪೋಲಿಸ್ ಅಧಿಕಾರಿ ನೀವೆ ಹುಡಗನನ್ನು ಕೊಂದಿರೆಂದು ಲಾಕಪ್‌ಗೆ ಹಾಕುವುದು ಹಾಗೂ ಚಿಸಿಲನಿಗೆ ನಿಮ್ಮ ಊರ ಶಾನುಭೋಗರು ಮತ್ತು ಪಟೇಲರನ್ನು ಕರೆದುಕೊಂಡು ಬರುವಂತೆ ಹೇಳಿದರು. ಒಟ್ಟಾರೆ ಈ ಕಥೆಯು ಬಡವನಾಗಿ ಹುಟ್ಟಿದರೆ ವಂಚಿತರಾಗುವ ಸಾಧ್ಯತೆಯೇ ಹೆಚ್ಚು ಎಂಬುದಲ್ಲದೆ ತಮ್ಮ ಬದುಕನ್ನು ಅಂತ್ಯಗೊಳಿಸುವ ಕುಟುಂಬಗಳ ಚಿತ್ರಣಗಳನ್ನು ಕಾಣಬಹುದು. ಸ್ವಾತಂತ್ರ ಭಾರತದಲ್ಲಿ ಗಾಂಧೀಜಿಯವರ ಸರ್ವೋದಯ ತತ್ವ ಹೇಗೆ ಅಪಮೌಲ್ಯಗೊಳ್ಳುತ್ತಿದೆ ಎಂಬುದು ಗೋಚರಿಸುತ್ತದೆ. ಇದಕ್ಕೆಲ್ಲಾ ಸಮಾಜದಲ್ಲಿನ ಅಸಮಾನತೆ ಕಾರಣವಾಗಿ ಸ್ವಾತಂತ್ರ್ಯ ಸ್ವೇಚಾಚಾರಕ್ಕೆ ತಿರುಗುವ ಮುನ್ಸೂಚನೆಯನ್ನು ಕಾಣಬಹುದು. ಬಡವರಿಗೆ ಎಲ್ಲಾ ಕಾಲಕ್ಕೂ ನೋವಿನ ಶೋಷಣೆಯ ಬದುಕೇ ಗತಿಯೆಂಬುದು ಮನದಟ್ಟಾಗುತ್ತದೆ. ಹೆಚ್ಚಾಗಿ ಅಂತ:ಕರಣ ಕಲಕುವ ಕಥೆಗಳಾಗಿ ರೂಪುಗೊಂಡಿವೆ.

**'ಚಲುವನ ಪರಂಗಿ ಗಿಡಗಳು'** ಕಥೆಯು ಮೇಲ್ನೋಟಕ್ಕೆ ಪರಂಗಿ ಹಣ್ಣಿಂದ ಪೌಷ್ಠಿಕಾಂಶ 'ಎ' ಅನ್ನಾಂಗ ಜಾಸ್ತಿ ಇದೆ ಎಂದು ಸರ್ಕಾರದ ವತಿಯಿಂದ ಪೌಷ್ಠಿಕಾಂಶದ ಕಾರ್ಯಕ್ರಮ ರೂಪಿಸಿ ಪ್ರತಿಯೊಬ್ಬ ವಿದ್ಯಾರ್ಥಿಯು ಇದರಲ್ಲಿ ತೊಡಗಿಕೊಂಡು ತಮ್ಮ ಪೌಷ್ಠಿಕಾಂಶವನ್ನು ಕಾಪಾಡಿಕೊಳ್ಳಬೇಕಾಗಿ ತಿಳಿವಳಿಕೆ ನೀಡುತ್ತದೆ. ಇದರಿಂದ ಪ್ರೇರಣೆಗೊಂಡ ಚಲುವ ತನ್ನ ಮನೆಯ ಸುತ್ತ ತಂದೆ-ಮೂಗೂರ, ತಾಯಿ ಕಲ್ಲಕ್ಕ, ಇವರ ಅಣ್ಣನಾದ ಸಣ್ಣ, ಅಕ್ಕ ಚಿಕ್ಕತಾಯಿ ಎಲ್ಲರ ಸಹಕಾರದಿಂದ ಮತ್ತು ತೋಟಗಾರಿಕೆ ಮೇಲ್ವಿಚಾರಕ ಸುಬ್ಬಣ್ಣರ ಸಹಾಯದಿಂದ ಪರಂಗಿ ಗಿಡಗಳು ಮತ್ತು ತರಕಾರಿಗಳನ್ನು ಬೆಳೆಸಿದ. ಸುಣ್ಣದಳ್ಳಿಯ ಮಾಧ್ಯಮಿಕ ಶಾಲೆಯ, ಶಾಲಾಭಿವೃದ್ಧಿ ಸಮಿತಿಯ ಅಧ್ಯಕ್ಷ ಗೋವಿಂದಸ್ವಾಮಿ ಶಾಲೆ ಪಂಪ್‌ಸೆಟ್ ಇತರ ವಸ್ತುಗಳನ್ನು ತನ್ನ ಗದ್ದೆಗೆ ಹಾಕಿಕೊಂಡು, ನಿರ್ಗತಿಕರಾದ ಬಡವರನ್ನು ಶೋಷಿಸುವುದು ಈ ಕಥೆಯಲ್ಲಿರುವ ಅಂಶವಾಗಿದೆ. ದೇವರಾಜು ಅರಸು ಅವರು ಜಾರಿಗೆ ತಂದ ಭೂಸುಧಾರಣ ಕಾಯಿದೆ ಹಿನ್ನೆಲೆಯಲ್ಲಿ ಮೂಡಿಬಂದ ಕಥೆ 'ಚಲುವನ ಪರಂಗಿ ಗಿಡಗಳು'. 'ಉಳುವವನಿಗೆ ಭೂಮಿ' ತತ್ವದ ಹಿನ್ನೆಲೆಯಲ್ಲಿ

ಬೆಸಹಗರಳ್ಳಿ ರಾಮಣ್ಣ ಅವರು ಈ ಕಥೆಯನ್ನು ಹೆಣಿದಿದ್ದಾರೆ. ಆದರೆ ಅಂದು ಭೂಸುಧಾರಣ ಕಾಯಿದೆಯಿಂದ ತಮ್ಮ ಆಸ್ತಿಗಳನ್ನು ಕಳೆದುಕೊಳ್ಳಬೇಕಾದ ಸಂದರ್ಭದಲ್ಲಿ ಹೇಗೆ ರೈತರಿಗೆ ಮೋಸ ಮಾಡಿ ಉಳ್ಳವರು ತಮ್ಮ ಆಸ್ತಿಗಳನ್ನು ಉಳಿಸಿಕೊಂಡರು ಎಂಬುದನ್ನು ಈ ಕಥೆಯಲ್ಲಿ ಮನದಟ್ಟುಮಾಡಿದ್ದಾರೆ. ಮೂಗೂರನಂಥ ಮೂವತ್ತು ಬಡ ರೈತರು, ಗೋವಿಂದಸ್ವಾಮಿಗೆ ಸೇರಿದ ಇಪ್ಪತ್ತಾರು ಎಕರೆ ಗದ್ದೆಯನ್ನು ಗುತ್ತಿಗೆ ಮಾಡುತ್ತಿದ್ದರು. ಸರ್ಕಾರ ಶಾಲೆಗೆ ಕೊಟ್ಟ ಪಂಪುಸೆಟ್ಟನ್ನು ತನ್ನ ತೋಟದ ಬಾವಿಗೆ ಅಳವಡಿಸಿಕೊಂಡ ಗೋವಿಂದಸ್ವಾಮಿ ಕಾಲುವೆ ಕೆಳಗಿನ ಫಲವತ್ತಾದ ಮೂವತ್ತೆರಡು ಎಕರೆ ಭೂಮಿಯಲ್ಲಿ ವ್ಯವಸಾಯ ಮಾಡಿದ. ಉಳಿದ ಇಪ್ಪತ್ತಾರು ಎಕರೆ ಭೂಮಿ ಮೊದಲಿನಿಂದಲೂ ಕಲ್ಲುಬಿದ್ದು ಹೋಗಿದ್ದುದರಿಂದ ಮತ್ತು ಸರಿಯಾಗಿ ಬೆಳೆ ಬರುತಿಲ್ಲವಾದುದರಿಂದ ಬಡ ಗೇಣಿದಾರರಿಗೆ ನೀಡಿದ್ದರೇ ಹೊರತು ಇನ್ನಾವ ಕಾರಣದಿಂದಲೂ ಅಲ್ಲ. ಭೂ ಸುಧಾರಣೆಯ ಶಾಸನದ ಪ್ರಕಾರ ಇವರೆಲ್ಲ ಸರ್ಕಾರಕ್ಕೆ ತಾವು ಇಂಥವರ ಭೂಮಿಯನ್ನು 'ಗೇಣಿ' ಮಾಡುತ್ತಿರುವುದಾಗಿ ಘೋಷಣೆ ಮಾಡಿಕೊಳ್ಳಲು ಹಕ್ಕಿದ್ದರೂ, ಯಾರು ಇದನ್ನು ಮಾಡುವ ಗೋಜಿಗೆ ಹೋಗಲಿಲ್ಲ. ಕಾರಣ ಗೋವಿಂದ ಸ್ವಾಮಿಯೇ "ಒಂದು ಊರಿನಲ್ಲಿರುವ ನಾವು ಭೂಪಂಚಾಯಿತಿಗಳ ಮೆಟ್ಟಿಲು ಹತ್ತಿ ಗುದ್ದಾಡುವುದು ಬೇಡ, ನಾವೇ ಕುಳಿತುಕೊಂಡು ತೀರ್ಮಾನ ಮಾಡಿಕೊಳ್ಳುವ, ಉಳುವವನಿಗೆ ಭೂಮಿ ಎಂದು ಇರುವಾಗ, ನಮ್ಮಂಥವರ 'ಆಟ' ನಡೆಯೋದಿಲ್ಲ" ಎಂದು ತನ್ನ ನಯವಾದ ಮಾತುಗಳಿಂದ ಎಲ್ಲರನ್ನು ಮರುಳು ಮಾಡಿ ಯಾರು ತಮ್ಮ ಹಕ್ಕುಗಳನ್ನು ಪಡೆದುಕೊಳ್ಳದಂತೆ ನೋಡಿಕೊಂಡಿದ್ದ. ಗೋವಿಂದಸ್ವಾಮಿ ಗೇಣಿದಾರರಿಗೆ ನೀಡಿದ್ದ ಭೂಮಿಯಲ್ಲಿ ಬೆಳೆದ ಬತ್ತವನ್ನು ತಾನೆ ನಿಂತು ಮತ್ತು ಪೋಲಿಸರ ಕುಮ್ಮಕ್ಕಿನಿಂದ ನೂರಾರು ಜನರಿಂದ ಬತ್ತ ಕಟಾವು ಮಾಡಿಸಿಕೊಂಡ.

ಕಥೆಯಲ್ಲಿ ಬರುವ ಪ್ರಜ್ಞಾವಂತ ಸುಬ್ಬಣ್ಣ ಮತ್ತು ವ್ಯವಸಾಯ ವಿಸ್ತರಣ ಅಧಿಕಾರಿಗೆ ಗೋವಿಂದಸ್ವಾಮಿಯ ಮೋಸ-ವಂಚನೆಗಳು ತಿಳಿದು ತಕ್ಷಣವೇ ತಮ್ಮ ತಾಲ್ಲೂಕು ಭೂನ್ಯಾಯ ಮಂಡಲಿಗೆ ಆಗಿರುವ ಅನ್ಯಾಯಗಳನ್ನು ಸಂಪೂರ್ಣವಾಗಿ ವಿವರಿಸಿ ಗೇಣಿದಾರರಿಗೆ ವೈಯಕ್ತಿಕ ಅರ್ಜಿಗಳನ್ನು ಸಲ್ಲಿಸಬೇಕೆಂದು ತಿಳಿಸಿದರು. ಇತ್ತ ಮೂಗೂರನ ಹೋರಾಟಕ್ಕೆ ನ್ಯಾಯ ಸಿಗಲಿಲ್ಲ. ಮೂಗೂರ ಕಷ್ಟಪಟ್ಟು ಬೆಳೆದ ಭತ್ತ ದರ್ಪವ್ಯಕ್ತಿ ಗೋವಿಂದಸ್ವಾಮಿಯ ವಶವಾಗಿದ್ದಲ್ಲದೆ, ಮಾತಿನ ಮೂಲಕವೇ ಮೂಗೂರನನ್ನು ಹೀನಾಯವಾಗಿ ನಡೆಸಿಕೊಂಡ. ಇಲ್ಲಿ ಬೆಸಗರಹಳ್ಳಿ

ರಾಮಣ್ಣನವರು ತಮ್ಮ ಕಾಲಮಾನದಲ್ಲಿ ಹಣ ಮತ್ತು ಅಧಿಕಾರವುಳ್ಳವರು ಬಡವರನ್ನು ಶೋಷಿಸುವುದನ್ನು ಸೂಕ್ಷ್ಮವಾಗಿ ಕಥೆಯಲ್ಲಿ ಗ್ರಹಿಸಿದ್ದಾರೆ.

ಚಲುವ ತನ್ನ ಮನೆಯ ಸುತ್ತ ಬೆಳೆದ ಪರಂಗಿ ಹಣ್ಣುಗಳು ಮತ್ತು ತರಕಾರಿಗಳನ್ನು ಗೋವಿಂದಸ್ವಾಮಿ ತನ್ನ ದರ್ಪದಿಂದ ಆಳುಗಳ ಕೈಯಲ್ಲಿ ವಶಪಡಿಸಿಕೊಂಡ. ಮೂಗೂರ ತನ್ನ ತಾಳ್ಮೆಯನ್ನು ಕಳೆದುಕೊಂಡು ಮಚ್ಚನ್ನು ಹಿಡಿದು ಗೋವಿಂದಸ್ವಾಮಿಯ ಶಿಷ್ಯ ಗಣೇಶನ ಪುಂಡತನಕ್ಕೆ ತಕ್ಕ ಪಾಠ ಕಲಿಸಲು ಮುಂದಾದ. ಇದರಿಂದ ಹೆದರಿ ಗಣೇಶ ಓಡಿ ಹೋಗುವನು. ಇದು ಪ್ರತಿಭಟನೆ ಎನಿಸಿದರು ತಕ್ಕ ಪ್ರತಿಫಲ ಸಿಗಲಿಲ್ಲ. "ಇವರು ಯಾವತ್ತು ಉತ್ತು, ಬಿತ್ತು ನಾಟಿ ಮಾಡಿದ್ದರು? ಕಳೆ ಕಿತ್ತಿದ್ದರು? ಇವರು ಎಳೆದ ಕಡೆ 'ನ್ಯಾಯ' ಬರುತ್ತದೆ!" (ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೨, ಪುಟ – ೩೫೫)ಮೂಗೂರನ ಮಾತುಗಳು ತಾನು ಪಡುವ ಕಷ್ಟ, ತಾನು ಬೆಳೆದ ಫಸಲನ್ನು ಬೇರೆಯವರು ಕಿತ್ತುಕೊಂಡಾಗ ಆಗುವ ನೋವುಗಳನ್ನು ವ್ಯಕ್ತಪಡಿಸುತ್ತವೆ. ತನ್ನ ಬದುಕಿನಲ್ಲಿ ಆದ ಅನ್ಯಾಯವನ್ನೇ ಅಸಹಾಯಕನಾಗಿ ಸದ್ದಿಲ್ಲದೆ ನ್ಯಾಯ ಎಂದು ಉಣ್ಣಬೇಕಾಗಿ ಬಂದುದ್ದನ್ನು ನೆನೆದು ಮೂಗೂರನ ಕಣ್ಣುಗಳಲ್ಲಿ ಅರಿವಿಲ್ಲದಂತೆಯೇ ನೀರು ಸುರಿಯಲಾರಂಬಿಸಿದವು. ಮನುಷ್ಯ-ಮನುಷ್ಯನನ್ನು ಶೋಷಿಸಿ ಮಾನವೀಯತೆಯನ್ನು ಮರೆಯುವ ವರ್ಗದ ಅನಿಷ್ಟತೆ ಜಾತಿ ಪದ್ಧತಿಯಷ್ಟೆ ಅನಿಷ್ಠ. ಶ್ರೀಮಂತ ವರ್ಗದವರಿಗೆ ಏನೆಲ್ಲ ರಕ್ಷಣೆ ಇರುವುದರಿಂದ, ಇವತ್ತಿನ ಜಾಗತೀಕರಣದ ಸಮಾಜದಲ್ಲಿಯೂ ಅಟ್ಟಹಾಸದಿಂದ ಬಡವರನ್ನು ಶೋಷಿಸುತ್ತಿರುವುದು ಶೋಚನೀಯ ಸ್ಥಿತಿಯಾಗಿದೆ. ಉಳ್ಳವರ ಮತ್ತು ಇಲ್ಲದವರ ನಡುವಿನ ಘರ್ಷಣೆ ತಲೆತಲಾಂತರದಿಂದ ನಡೆಯುತ್ತಿದೆ. ಶಿಕ್ಷಣದ ಮೂಲಕ ಬಡತನವನ್ನು ನೀಗಿ ಶೋಷಣೆ ಮುಕ್ತಗೊಳ್ಳಬೇಕು ಎಂಬ ಆಸೆಯನ್ನು ಮೂಗೂರ ತನ್ನ ಮಗ ಚಲುವನಲ್ಲಿ ಕಾಣುತ್ತಾನೆ.

ಬಡವರ ಶೋಷಣೆಗೆ ಅಂತ್ಯವೇ ಇಲ್ಲವೆಂಬಂತೆ **'ಬೆಟ್ಟದ ಮೇಲೊಂದು ಮನೆಯ ಮಾಡಿ'** ಕಥೆಯಲ್ಲಿ ಬೆಸಗರಹಳ್ಳಿ ರಾಮಣ್ಣ ತಾವು ಕಂಡ ಸತ್ಯಾಸತ್ಯತೆಯನ್ನು ಚಿತ್ರಿಸಿದ್ದಾರೆ. 'ಉರುಗ ನೀನು ದನವೋ, ಎಮ್ಮೆಯೋ ಆಗಿ ಹುಟ್ಟು ಬೇಕಾಗಿತ್ತು ಅನ್ನುಸ್ತದೆ ಕನ್ಲ' ಎಂಬ ಮಾತುಗಳು ಕೇಳಿಬರುತ್ತದೆ. ಕಥೆಯಲ್ಲಿ ಉರುಗ ಶ್ರಮ ಜೀವಿ ಹಾಗೂ ಮುಗ್ಧತೆಯ ಮನುಷ್ಯ. 'ಏನೋ ಈ ಮನ್ಸ್ ಜನ್ಮ ಬರಬಾರದಿತ್ತು, ಬಂದು ಬುಡ್ತಲ್ಲಪ್ಪ' ಎನ್ನುವ ಉರುಗಯ್ಯನ ಮಾತುಗಳ ಜೊತೆಗೆ ಅವನಲ್ಲಿ ಕಣ್ಣೀರು ಹರಿಯಿತು.

ಉರುಗಯ್ಯನ ಹೆಂಡತಿ ಮಸಣ್ಣಮ್ಮ, ಹಿರಿಯ ಮಗ ಊರಯ್ಯ, ಮಗಳು ಚಿಕ್ಕಿ, ಕರಿಯನ ಮಗ ಹದಿನಾಲ್ಕು ವರ್ಷಗಳ ಶಿವರಾಮು ಇವರೆಲ್ಲಾ ಹೊಟ್ಟೆಗಿಲ್ಲದೆ ತಮ್ಮ ಎಲ್ಲಾ ಶಕ್ತಿಯನ್ನು ಒಗ್ಗೂಡಿಸಿ ಹರಿಶ್ಚಂದ್ರಯ್ಯನೋರ ಗದ್ದೆಯನ್ನು ಗುತ್ತಿಗೆ ಮಾಡಿಕೊಂಡಿದ್ದರು. ಅಕ್ಷರ ಜ್ಞಾನ ಇಲ್ಲದ ಉರುಗಯ್ಯ ಸಾಹುಕಾರನ ಲೆಕ್ಕವನ್ನು ನಂಬುತ್ತಿದ್ದನು. ಮೋಸ ಮಾಡಿ ಸುಳ್ಳು ಲೆಕ್ಕ ಬರೆಯಲಾಗಿ ಉರುಗಯ್ಯನ ಪ್ರತಿವರ್ಷದ ಗೇಣಿ ತೀರುತ್ತಿರಲಿಲ್ಲ. ಆದರೂ ಬಹಳ ಧೈರ್ಯದಿಂದ ಉರುಗಯ್ಯ ಈ ಭಾರಿ ಉಣ್ಣಲು ಸ್ವಲ್ಪ ಭತ್ತ ಕೊಡಬೇಕಾಗಿ ಕೇಳಿಕೊಳ್ಳುವನು. ಇಲ್ಲಿನ ಕಥಾನಾಯಕ ಓರ್ವ ಭೂಹೀನ ರೈತ. ಇವನನ್ನು ಕುಕ್ಕಿ ತಿನ್ನುವ ಒಂದು ಮಾನವ ಕಾಗೆ ಇದೆ ಎಂದು ಕಥೆಗಾರರು ಹೇಳುವ ಮಾತು ಬಹಳ ಮಾರ್ಮಿಕವಾಗಿದೆ. ಆದರೂ ಕಾಗೆ ಏನಾದರೂ ಆಹಾರ ಸಿಕ್ಕರೆ ತನ್ನ ಬಳಗದವರನ್ನು ಕೂಗಿಕೊಡುವುದು. ಇಲ್ಲಿ ಅದ್ಯಾವ ಪರಿವೆಯೇ ಇಲ್ಲ, ತಾನು ಒಬ್ಬ ಜಮೀನುದಾರ ಅನ್ನಿಸಿಕೊಳ್ಳಬೇಕೆಂಬ ತನ್ನ ಹುಟ್ಟಿದಂದಿನ ಬಯಕೆ ಈಡೇರುವುದೋ ಇಲ್ಲವೋ, ಹಾಳಾಗಿ ಹೋಗಲಿ ತನಗೂ ಜಮೀನು ದೊರಕಬೇಕೆಂಬ ಇಚ್ಛೆ, ಅದರೊಳಗೆ ನನ್ನ ಹೆಣ ಹೂಳೂವಂಗಾದ್ರೆ, ನಾನೂ ಈ ಹಾಳು ಧರೆ ಮೇಲೆ ಹುಟ್ಟಿದ್ದೂ ಸಾರ್ಥಕ ಎನ್ನುವ ಕಥಾನಾಯಕನ ಅರ್ಥವಂತಿಕೆ ಮಾತುಗಳು ಕಾರಂತರ 'ಚೋಮನದುಡಿಯನ್ನು' ನೆನಪಿಸುತ್ತದೆ. ಚೋಮನ ಸ್ಥಿತಿಯೆ ಈ ಕಥಾನಾಯಕನ ಸ್ಥಿತಿಯೂ ಒಂದೇ ಆಗಿದೆ.

"ದೊಡ್ಡ ಮನ್ಸ್ ಮಾಡಿ ಎರಡು ವರ್ಷದಿಂದ ನಾನು ನನ್ನೆಂಡ್ತಿ ಮುಕ್ಳು ಗೇದೂ ಗೇದೂ ಸತ್ತು ಸುಣ್ಣಾಗೀವಿ ನಿಮ್ಮೆಸರು ಹೇಳ್ಕೊಂಡು ವಸಿ ಅನ್ನ ಉಣ್ಣಕೋತೀವಿ"(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೩, ಪುಟ – ೩೨೩)ಎನ್ನುವ ಮಾತುಗಳು ಇಲ್ಲಿ ಕೇವಲ ಉರುಗಯ್ಯನ ಸ್ಥಿತಿ ಮಾತ್ರವಲ್ಲ. ಭಾರತ ದೇಶದ ಅನೇಕ ಭೂರಹಿತರ ಸ್ಥಿತಿಯಾಗಿದೆ. ಹಸಿವಿನಿಂದ ಬಳಲುತ್ತಿರುವವರನ್ನು ಕಂಡು ಮನಕರಗದ ಸಾಹುಕಾರನನ್ನು ಮನುಷ್ಯತ್ವವಿರುವ ಮನುಷ್ಯನೆಂದು ಕರೆಯಲಾಗದು.

'ಬುದ್ಧಿ ಬುದ್ಧಿ, ಅನ್ಯಾಯ ಮಾಡ್ಬ್ಯಾಡಿ' ಎಂದು ಸಾಹುಕಾರನ ಕಾಲುಗಳಿಗೆ ಉರುಗಯ್ಯ ಕೈಹಾಕಿದ. ಕೂಡಲೇ ಸಾಹುಕಾರ ಉರುಗಯ್ಯನ ಮುಖಕ್ಕೆ ಝಾಡಿಸಿ ಒದ್ದೇ ಬಿಟ್ಟ. ಉರುಗಯ್ಯನ ಮೂಗಿನಲ್ಲಿ ರಕ್ತ ಜಿನುಗಿತು. ಇದರಿಂದ ರೋಸಿಹೋದ ಹಿರಿಯ ಮಗ ಕ್ರಾಂತಿಗೆ ಬುನಾದಿ ಎಂಬಂತೆ ಮಿಂಚಿನಂತೆ

ಗಾಡಿಯ ಕಡೆ ನುಗ್ಗಿದವನು ತೆಂಗಪ್ಪನ ಮೇಲೆ ಕೈ ಮಾಡಿದನು. ತೆಂಗಪ್ಪ ಸಾಹುಕಾರನ ಸೋದರ ಮಾವ ಹಾಗೂ ಲೆಕ್ಕಚಾರಗಳನ್ನು ನೋಡಿಕೊಳ್ಳುತ್ತಿದ್ದವ. "ಈ ಅನ್ಯಾಯ ನೋಡ್ತಾ ನಿಂತಿದ್ದೀಯಲ್ಲ... ನೀನೂ ಒಬ್ಬ ಊರೇಲಿ ನ್ಯಾಯಸ್ಥ ಅಲ್ಲವೇನಯ್ಯ? ಎಂದು ಬುಡ್ಡೇಗೌಡನಿಗೆ ಮೂದಲಿಸಿದ. ಇವ್ರು ನಮ್ಮಪ್ಪನಿಗೆ.... ವರ್ಷ ವರ್ಷ ಗೇದು ಇವ್ರ ಕಣಜ.... ಇವರ ಗುಡಾಣದ ಹೊಟ್ಟೆ ತುಂಬಿಸೋನ್ಗೆ.... ಕಾಲೇಲಿ ಒದ್ದುದ್ದು ಗೌಡರೆ"(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೭, ಪುಟ – ೩೯೭)ಎಂದು ತನ್ನ ತಂದೆಗೆ ಆದ ಅವಮಾನವನ್ನು ಪ್ರಶ್ನಿಸಿಯೇ ಬಿಟ್ಟ, ತಮಗಾಗುತ್ತಿರುವ ಅನ್ಯಾಯವನ್ನು ನೋಡಿ ಬೇಸತ್ತ ಊರಯ್ಯ ಇದಕ್ಕೆ ಕೊನೆ ಹಾಕಬೇಕೆಂದು ತನ್ನಲ್ಲಿದ್ದ ಚಿಟುಗತ್ತಿಯ ಅಂಚಿನಿಂದ ರಂಗಪ್ಪನ ರುಂಡವನ್ನು ದೇಹದಿಂದ ಬೇರ್ಪಡಿಸಿ ತಾನು ಮಾಡಿದ್ದು ಸರಿಯಾಗಿದೆ ಎಂದು ತಾನೇ ಪೋಲೀಸ್ ಸ್ಟೇಷನಿಗೆ ಹೋಗಿ ಶರಣಾಗತನಾಗುವನು. ನಮ್ಮಂಥ ಭೂರಹಿತರಿಗೆ ಆಗುವ ಅನ್ಯಾಯವನ್ನು ಯಾರು ಬಂದು ಬದಲಾಯಿಸಲಾರರು ಎಂದೂ ಅದಕ್ಕೆ ನಾವೇ ಉತ್ತರ ಕಂಡುಕೊಳ್ಳುವ ಸಲುವಾಗಿ ಊರಯ್ಯ ತನ್ನ ನಿರ್ಧಾರದಿಂದ ತಾನು ಶಿಕ್ಷೆ ಅನುಭವಿಸಿದರು ಸಹ ಊಳಿಗವರಾದರು ಮುಂದೆ ತಾವು ಪಟ್ಟ ಶ್ರಮಕ್ಕೆ ಪ್ರತಿಫಲ ಉಣ್ಣಲೆಂದು ಭಾವಿಸಿದ್ದಾನೆ. ಕಥೆಗಾರರು ವರ್ಗ ಸಂಘರ್ಷವನ್ನು ಊರಯ್ಯನ ಮೂಲಕ ಅಭಿವ್ಯಕ್ತಪಡಿಸಿದ್ದಾರೆ.

ಹಣವುಳ್ಳವರು ಕಾನೂನುಗಳನ್ನು ತಮಗೆ ಬೇಕಾದ ರೀತಿಯಲ್ಲಿ ತಿರುಚಿ ಅನುಕೂಲಕರವಾಗುವಂತೆ ಮಾಡಿಕೊಳ್ಳುತ್ತಾರೆ. ಸಾಮಾನ್ಯವಾಗಿ ಅಸಹಾಯಕ ಸ್ಥಿತಿಯ ಜನರನ್ನು ತಮ್ಮ ಲಾಭಕ್ಕಾಗಿ ಶೋಷಿಸುತ್ತಾರೆ. ಇದು ಒಂದು ರೀತಿಯ ಹಗಲು ದರೋಡೆಯಂತೆ. ಬೆಸಗರಹಳ್ಳಿ ರಾಮಣ್ಣನವರ **'ತಾಯಿ'** ಕಥೆಯಲ್ಲಿ ಚನ್ನಮ್ಮ ಎಂಬುವಳಿಗೆ ಎರ್ಡೂವರೆ ಎಕರೆ ಗದ್ದೆ ಇರುವುದು. ಆದರೆ ವಿಧವೆಯಾಗಿದ್ದು, ೧೪ ವರ್ಷದ ಮತ್ತು ೩ ವರ್ಷದ ಇಬ್ಬರು ಮಕ್ಕಳಿದ್ದರು. ಚನ್ನಮ್ಮ ಗದ್ದೆಯ ಪಕ್ಕದಲ್ಲಿ ಚಂದ್ರಪ್ಪಸೆಟ್ಟಿ ಎನ್ನುವ ಹಣವಂತನ ಆರೂವರೆ ಎಕರೆ ಗದ್ದೆ ಇದೆ. ಚನ್ನಮ್ಮ ಬಡವೆಯಾಗಿದ್ದು ಗಂಡು ದಿಕ್ಕಿಲ್ಲದ (ಯಾಜಮಾನನಿಲ್ಲದ) ಮನೆಯಾದ್ದರಿಂದ ಚನ್ನಮ್ಮನಿಗೆ ಮೋಸಮಾಡಿ ಅವಳ ಎರ್ಡೂವರೆ ಎಕರೆ ಭೂಮಿಯನ್ನು ಕಸಿಯಲು ಸಂಚು ರೂಪಿಸುವನು.

ಚಂದ್ರಪ್ಪಸೆಟ್ಟಿ ವಿ.ಎ. ಪುಟ್ಟರಾಜುಗೆ ಒಂದುಸಾವಿರ ಲಂಚ, ಶೇಕ್‌ದಾರರಿಗೂ ಎರಡೂವರೆ ಸಾವಿರ ಕೊಟ್ಟು ಇನ್ನು ಸಂಬಂಧಪಟ್ಟವರಿಗೆ ಯೋಗ್ಯತಾನುಸಾರ ಹಣ

ಕೊಟ್ಟು ಚನ್ನಮ್ಮನಿಗೆ ಸೇರಿದ ಜಮೀನನ್ನು ಪಾಣಿಯಲ್ಲಿ ಚಂದ್ರಪ್ಪಸೆಟ್ಟಿಗೆ ಸೇರಿದೆಂದು ಮೋಸದಿಂದ ಬರೆಸುತ್ತಾನೆ. ವಿ.ಎ. ಪುಟ್ಟುರಾಜು ತಾಯಿ ಉರಗಮ್ಮ ಹೊಟ್ಟೆ ಕ್ಯಾನ್ಸರ್‌ನಿಂದ ಬಳಲುತ್ತಿದ್ದಳು. ಪಕ್ಕದ ಮನೆಯ ಬೋರಮ್ಮ ಚಂದ್ರಪ್ಪಸೆಟ್ಟಿಯು ಪುಟ್ಟರಾಜುವಿಗೆ ಲಂಚ ಕೊಟ್ಟು ದಿಕ್ಕು ದೆಸೆಯಿಲ್ಲದ ಬಡವಳಾದ ಚನ್ನಮ್ಮನಿಗೆ ಸೇರಿದ ಜಮೀನನು ಕಸಿಯುವಲ್ಲಿ ನಿನ್ನ ಮಗ ಸಹಾಯ ಮಾಡುತ್ತಿದ್ದಾನೆ ಎಂದು ಉರಗವ್ವನಿಗೆ ವಿಚಾರ ಮುಟ್ಟಿಸಿದಳು. ನಿನ್ನ ಮಗನಿಂದ ವಿಧವೆ ಮನೆ ಉಳಿಯಬೇಕಾದರೆ ಸತ್ಯವನ್ನು ಸುಳ್ಳಾಗಿಸದೆ ಇರುವುದರಿಂದ ಮಾತ್ರ ಸಾದ್ಯ. ನಿನ್ನ ಮಗನಿಗೆ ಕೇವಲ ೭೫೦ ರೂಪಾಯಿ ಸಂಬಳ (ಕಥೆ ರಚಿಸುವ ಕಾಲಕ್ಕೆ), ಆದರೆ ಹೆಂಡತಿಯ ಮೈಮೇಲೆ ೭೫ ಸಾವಿರ ಬೆಲೆಬಾಳುವ ಒಡವೆ ಮನೆಯಲ್ಲಿ ಐಷರಾಮಿ ವಸ್ತುಗಳು, ಸಿಗರೇಟು, ಬೆಲೆಬಾಳುವ ಇನ್ನಿತರ ವಸ್ತುಗಳನ್ನೆಲ್ಲಾ ಗಮನಿಸಿದ ತಾಯಿ ಉರಗವ್ವ ತನ್ನ ಮಗ ಅಪ್ರಮಾಣಿಕ ಎಂದು ತೀರ್ಮಾನಿಸಿದಳು. ತನಗೆ ಬಂದಿರುವ ಕ್ಯಾನ್ಸರ್ ಖಾಯಿಲೆ ಈ ಪಾಪಿ ಮಾಡಿರುವ ಪಾಪದಿಂದಲೇ ಇರಬೇಕು ಎಂದು ಅವಳ ಮನಸ್ಸು ಬಾದಿಸತೊಡಗಿತು. ಇಲ್ಲಿ ಹೆತ್ತ ಮಗನೆ ತಪ್ಪುದಾರಿ ಹಿಡಿದು ಶ್ರೀಮಂತನಾಗುತ್ತಿರುವುದನ್ನು ಕಂಡ ಹೆತ್ತ ತಾಯಿ ಅದನ್ನು ವಿರೋಧಿಸುವಳು. ಇದು ಒಬ್ಬ ತಾಯಿಯ ಸಂಸ್ಕಾರವನ್ನು ಸಮಾಜಕ್ಕೆ ನಿರೂಪಿಸುತ್ತದೆ.

ಚಂದ್ರಪ್ಪಸೆಟ್ಟಿ ಮಾಡಿದ ಅನ್ಯಾಯವನ್ನು ಊರಿನ ಹೆಗ್ಗಪ್ಪನವರು ಸಹಿಸುವುದಿಲ್ಲ. ಸೆಟ್ಟಿ ನೀಡಿದ ಹಣದ ಗಂಟನ್ನು ಪಡೆದು ಪಹಣಿಯಲ್ಲಿದ್ದ ಮೂಲ ಹೆಸರನ್ನು ಬದಲಾಯಿಸಿ ಬಡವೆ ಹಾಗೂ ವಿಧವೆಯಾದ ಚನ್ನಮ್ಮನಿಗೆ ಮೋಸ ಮಾಡುತ್ತಿದ್ದಾರೆ ಎಂದು ಮುದಿಯೂರ ತಾಲ್ಲೂಕಿನ ಭೂನ್ಯಾಯ ಮಂಡಲಿಯ ಅಧ್ಯಕ್ಷರಿಗೆ ಮತ್ತು ಶ್ರೀರಂಗಪುರದ ಅಸಿಸ್ಟೆಂಟ್ ಕಮಿಷನರಾದ ಕೃಷ್ಣಕುಮಾರ್ ರವರಿಗೆ ಪತ್ರ ಬರೆದು ನಿಜ ಸ್ಥಿತಿ ತಿಳಿಸುತ್ತಾರೆ. ಅಸಿಸ್ಟೆಂಟ್ ಕಮಿಷನರ್ ಕೃಷ್ಣಕುಮಾರ್ ತಾವೇ ಖುದ್ದಾಗಿ ಸ್ಥಳ ಪರಿಶೀಲನಗೆ ತೆರಳಿದಾಗ ಜಮೀನಿನ ನೆರೆಹೊರೆಯವರಾದ ಕೆಂಪಲಿಂಗೇಗೌಡ ಮತ್ತು ಅಬ್ದುಲ್‌ವಹಾಬ್ ಸಾಹೇಬರಿಗೆ ಚಂದ್ರಪ್ಪಸೆಟ್ಟಿ ಸಾಕಷ್ಟು ಹಣ ಕೊಟ್ಟಿದ್ದರಿಂದ ಸೆಟ್ಟಿಯ ಪರವಾಗಿ ಸಾಕ್ಷಿ ಹೇಳುವರು. ಜನರು ಆತಂಕದಿಂದ ಯಾವ ತೀರ್ಮಾನ ಬರಬಹುದೆಂದು ಕಾಯುತ್ತಿದ್ದರು. ಅವರ ದೃಷ್ಟಿಯಲ್ಲಿ ಸತ್ಯ ಮತ್ತು ಧರ್ಮಗಳಿಗೆ ಪ್ರಪಂಚದಲ್ಲಿ ಅದರಲ್ಲೂ ಕಲಿಯುಗದ

ಈ ಸಂದಿಗ್ಧ ಸಮಯದಲ್ಲಿ ಬೇರೆ ಇದೆಯೇ ಅಥವಾ ಸುಳ್ಳು ಅಧರ್ಮಗಳೇ ಜಯಭೇರಿ ಬಾರಿಸುತ್ತವೆಯೇ ಎನ್ನುವ ನಿರೀಕ್ಷೆಯಲ್ಲಿದ್ದರು.

ಉರುಗಮ್ಮ "ದೇವ್ರೆ ಚನ್ನಮ್ಮನಿಗೆ ನ್ಯಾಯ ದೊರಕಿಸಿ ಕೊಡಪ್ಪ ಎಂದು ಆಕಾಶದ ಕಡೆಗೆ ಕೈ ಜೋಡಿಸಿ; ಚನ್ನಮ್ಮನಿಗೆ ಒಳ್ಳೆಯದಾಗಿ ನಾನು ಬದುಕಿದ್ದರೆ ನೀಲಸಂದ್ರದ ಮಾಯಮ್ಮನಿಗೆ ಬಂದು ನನ್ನ ತಲೆ ಮುಡಿ ಕೊಡ್ತೀನಿ ಕನವ್ವ"(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೩, ಪುಟ – ೮೦೦)ಎಂದು ಹರಕೆ ಕಟ್ಟಿಕೊಂಡಳು. ನಮ್ಮ ಪೂರ್ವಿಕರು ಒಳ್ಳೆಯದನ್ನು ಬಯಸುವುದು ಕೇವಲ ರಕ್ತ ಸಂಬಂಧಗಳೇ ಆಗಬೇಕು ಎಂದೇನು ಇಲ್ಲ. ನ್ಯಾಯ ಇರುವ ಕಡೆ ಜಯ ಸಿಗಲೆಂದು ದೇವರನ್ನು ಪ್ರಾರ್ಥಿಸುವ ಉರುಗಮ್ಮ ಇಂದಿನ ಪೀಳಿಗೆಗೆ ಮಾದರಿಯಾಗಿದ್ದಾಳೆ. ಇಲ್ಲಿ ಕಥೆಗಾರರು ಪಾರಂಪರಿಕ ಸಂಸ್ಕಾರವನ್ನು ಉಳಿಸಿಕೊಳ್ಳುವಲ್ಲಿ ಯಶಸ್ವಿಯಾಗಿದ್ದಾರೆ. ಕೆಂಪಲಿಂಗೇಗೌಡ ಮತ್ತು ವಹಾಬ್‌ಸಾಹೇಬರ ಸುಳ್ಳು ಸಾಕ್ಷಿಯಿಂದ ನ್ಯಾಯ ಸತ್ತು ಹೋಗಬಾರದೆಂದು ತನ್ನ ದೇಹ ಕೃಶವಾದರು ಉರುಗಮ್ಮ ಓಡೋಡಿ ಬಂದು ಎ.ಸಿ. ಸಾಹೇಬರ ಬೂಟುಗಳ ಮೇಲೆ ರಪ್ಪನೆ ಬಿದ್ದು, "ವಿ.ಎ. ಪುಟ್ಟರಾಜನ ತಾಯಿ ನಾನು ಎಂದು ಹೇಳುತ್ತಾ, ಪಾಣೀಲಿ ಚಂದ್ರಪ್ಪಶೆಟ್ಟಿಯೇ ಚನ್ನಮ್ಮನ ಭೂಮಿಯನ್ನು ಆಬಾದು ಮಾಡ್ತಾ ಅವ್ನೆ ಅಂತ ಬರೆದಿರೋದು ಸುಳ್ಳು. ಹೆತ್ತೋಳಿಗಿಂತ ಇವನಿಗೆ ಸೆಟ್ರ ನೋಟಿನ ಕಂತೆಯೇ ಜಾಸ್ತಿ ಆಯ್ತು ಥೂ! ಇಂಥ ಮಕ್ಕಳು ಬದುಕಿರೋದಕ್ಕಿಂತ ಸಾಯೋದು ಲೇಸು. ಈಗ ಇವನಿಗೆ ಇದ್ದಕ್ಕಿದ್ದಂಗೆಯೇ ನೆಲಪಟ್ಟು ಕಾಯಿಲೆ ಬಡ್ದು ಸತ್ರೆ ನಂಗೆ ಬೋ ಸಂತೋಷ ಆಯ್ತುದೆ"ಎಂದಳು (ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೩, ಪುಟ–೮೦೩). ಇಲ್ಲಿ ಸತ್ಯಕ್ಕಾಗಿ ಮನುಷ್ಯನಿರಬೇಕು, ಸತ್ಯವಿಲ್ಲದ ಜೀವನ ಸತ್ತರೆ ಒಳ್ಳೆಯದು ಎನ್ನುವ ಧೋರಣೆ ನಮ್ಮ ಅಕ್ಷರ ಕಲಿಯದ, ಹೊರಗಿನ ಪ್ರಪಂಚ ಜ್ಞಾನವಿಲ್ಲದ ಮುಗ್ಧ ಜೀವ ಉರಗಮ್ಮನದು.

ಉರಗವ್ವನ ಮಾತುಗಳು ಸತ್ಯವೆಂದು ತಿಳಿದ ಎ.ಸಿ.ಸಾಹೇಬರು ಪುಟ್ಟುರಾಜುವನ್ನು ತಾನು ಮಾಡಿದ ತಪ್ಪನ್ನು ಒಪ್ಪಿಕೋ ಶಿಕ್ಷೆ ಕಡಿಮೆ ಮಾಡಿಸುತ್ತೇನೆಂದು ಹೇಳುವರು. ಪುಟ್ಟರಾಜ ತನ್ನ ತಪ್ಪನ್ನು ಒಪ್ಪಿಕೊಂಡಾಗ, ಉರುಗಮ್ಮ ಮಗನನ್ನು ತನ್ನ ಕಣ್ಣುಗಳಲ್ಲೇ ತುಂಬಿಕೊಳ್ಳುವಂತೆ ನೋಡಿ, ಆನಂದದಿಂದ ಪ್ರಾಣತ್ಯಜಿಸಿದಳು. ಕಥೆಗಾರರು ಕೆಲವು ಪ್ರಾಮಾಣಿಕ ಅಧಿಕಾರಿಗಳಿಂದ ಮತ್ತು ಪುಟ್ಟರಾಜನ ತಾಯಿಯ ಸತ್ಯತೆಯ ಮಾತುಗಳಿಂದ, ಸೆಟ್ಟಿಯ ದೌರ್ಜನ್ಯಕ್ಕೆ ಒಳಪಟ್ಟ ಬಡವೆ ಚನ್ನಮ್ಮನಿಗೆ ನ್ಯಾಯ ದೊರಕಿಸುವುದು

ಲೇಖಕರ ಆದರ್ಶವಾಗಿದೆ. ಈ ಕಥೆಯ ಮೂಲಕ ಮನೆಯವರಿಂದಲೇ ಬಡವರ ಶೋಷಣೆ ಆಗುವುದನ್ನು ತಡೆಯುವ ತಾಯಿ ಪಾತ್ರ ಬಹಳ ಔಚಿತ್ಯವಾಗಿದೆ.

**'ಕರುಣಾಳು ಬಾ ಬೆಳಕೆ'** ಕಥೆಯಲ್ಲಿ ಬೆಸಗರಹಳ್ಳಿ ರಾಮಣ್ಣನವರು ನಡೆದಿರುವ ಘಟನೆಯೊಂದನ್ನು ತಮ್ಮ ಕೃತಿಯಲ್ಲಿ ಕಥೆಯಾಗಿಸಿದ್ದಾರೆ. ಈ ಕಥೆಯು ಮೇಲುನೋಟಕ್ಕೆ ಭಾರತೀಯ ಹೆಣ್ಮಕ್ಕಳು ರಕ್ತಹೀನತೆಯಿಂದ ಬಳಲುತ್ತಿರುವುದನ್ನು ಒಳಗೊಂಡಿದೆ. ಬಡವ-ಶ್ರೀಮಂತ ಎಂಬ ವರ್ಗೀಕರಣ ಉಣ್ಣುವ, ಉಡುವುದಕ್ಕೆ ಮಾತ್ರ ಸೀಮಿತವಾಗಿರದೆ, ಜೀವ ಉಳಿಸಿಕೊಳ್ಳುವಲ್ಲಿಯೂ ಪ್ರಮುಖ ಪಾತ್ರವನ್ನು ಕಾಣುತ್ತೇವೆ. ಸರಿಯಾದ ಸೌಲಭ್ಯಗಳಿಲ್ಲದ ಜೀವ ತೆಗೆಯುವ ಸರ್ಕಾರಿ ಆಸ್ಪತ್ರೆಗಳು ಬಡವರಿಗಾದರೆ, ಎಲ್ಲಾ ಸೌಲಭ್ಯಗಳನ್ನು ಹೊಂದಿರುವ ಜೀವ ಉಳಿಸುವ ಖಾಸಗಿ ಆಸ್ಪತ್ರೆಗಳು ಶ್ರೀಮಂತರ ಸೊತ್ತಾಗಿರುವುದನ್ನು 'ಕರುಣಾಳು ಬಾ ಬೆಳಕೆ' ಕಥೆಯಲ್ಲಿ ಕಾಣಬಹುದು.

ಸರೋಜಳ ತಂದೆ ಮರಿಸಿದ್ದೇಗೌಡ ಮಗಳನ್ನು ಉಳಿಸಿಕೊಳ್ಳುವ ಸಲುವಾಗಿ ತಾಲೂಕು ಹೆರಿಗೆ ಆಸ್ಪತ್ರೆಗೆ ಕರೆದುಕೊಂಡು ಹೋದರೆ ಅಲ್ಲಿ ಲೇಡಿ ಡಾಕ್ಟರನ್ನೆ ಹೆರಿಗೆಗಾಗಿ ಬೆಂಗಳೂರಿಗೆ ಕರೆದುಕೊಂಡು ಹೋಗಿರುತ್ತಾರೆ. ಮರಿಸಿದ್ದೇಗೌಡ ಮಗಳನ್ನು ಮೈಸೂರಿನ ಡಿಸ್ಟ್ರಿಕ್ ಆಸ್ಪತ್ರೆಗೆ ಕರೆತಂದರು. ಆದರೆ ಅವಳಿಗೆ ಸಹಜ ಹೆರಿಗೆ ಆಗುವುದಿಲ್ಲ. ಆಪರೇಷನ್ ಮಾಡಬೇಕು, ಆಪರೇಷನ್ ಮಾಡಲು ಮೂರು ಬಾಟಲಿ ರಕ್ತ ಬೇಕು. ಅದಕ್ಕಾಗಿ ಖಾಸಗಿ ಆಸ್ಪತ್ರೆ 'ಅಂಬಾ ವಿಲಾಸ' ಆಸ್ಪತ್ರೆಗೆ ಬರುತ್ತಾರೆ. ರಕ್ತದ ಜೊತೆಗೆ ಆಪರೇಷನ್ ಮಾಡಲು ದೊಡ್ಡ ಡಾಕ್ಟರಮ್ಮನವರನ್ನು ಕರೆದುಕೊಂಡು ಬರಲು ಚಿಕ್ಕ ಡಾಕ್ಟರಮ್ಮ ಹೇಳಿದ್ದಾರೆ ಎಂದು ದೊಡ್ಡ ಡಾಕ್ಟರ್ ನೀಲಾದೇವಿಯವರಲ್ಲಿ ಕೇಳಿಕೊಂಡರು, ಅವರು ಒಪ್ಪುವುದಿಲ್ಲ. "ತಾಯಿ ಇಲ್ಲಿ ಎಂಟುನೂರು ರೂಪಾಯಿ ಅದೆ ತಗೊಳ್ಳಿ, ನಿಂದಮ್ಮಯ್ಯ ನನ್ ಮಗಳ ಪ್ರಾಣ ಉಳಿಸಿ ಎಂದು ಮರಿಸಿದ್ದೇಗೌಡ ಕೇಳಿಕೊಳ್ಳುವನು. ಡಾಕ್ಟರ ಮನೆಕಾಯುವ ಸರ್ದಾರ ಎಂಟುನೂರು ರೂಪಾಯಿಗೆ ಆಗದು, ಇದೇ ಕೇಸಿಗೆ ಬೇರೆ ಕಡೆ ೨-೩ ಸಾವಿರ ಕೊಡುತ್ತಾರೆ ಎನ್ನುವನು"(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೭, ಪುಟ-೫೧೪). ಇಲ್ಲಿ ವೈದ್ಯನಾರಾಯಾಣ ಎನ್ನುವ ಮಾತಿಗೆ ಅಪವಾದವಾಗಿದೆ. ಬಡವರಿಗೆ ಖಾಸಗಿ ಆಸ್ಪತ್ರೆಯಲ್ಲಿ ಅವಕಾಶವಿಲ್ಲ ಎನ್ನುವ ಪರಿಸ್ಥಿತಿಯನ್ನು ಕಥೆಗಾರರು ಬಿಂಬಿಸಿದ್ದಾರೆ. ಶ್ರೀಮಂತರಾದ ಭಾರತಮಾತಾ ಅಗರಬತ್ತಿ ಪ್ರೊಪರೈಟರ್ ಮಗಳಿಗೆ ತುರ್ತಾಗಿ ಆಪರೇಷನ್ ಮಾಡಬೇಕು, ಅವರ ಮನೆಯವರು ಎಷ್ಟು ಬೇಕಾದರು ಹಣ

ನೀಡುವರೆಂದು ತಿಳಿದ ದೊಡ್ಡ ಡಾಕ್ಟರ್ ನೀಳಾದೇವಿ ಮತ್ತು ಚಿಕ್ಕ ಡಾಕ್ಟರ್ ಪ್ರಮೀಳ, ಹಳ್ಳಿಯಿಂದ ಬಂದ ಬಡವರಾದ ಸರೋಜನ ಕೇಸನ್ನು ರಕ್ತವಿಲ್ಲವೆಂಬ ನೆಪಹೇಳಿ ಖಾಸಗಿ ಆಸ್ಪತ್ರೆಗೆ ತೆರಳಿ ಶ್ರೀಮಂತರಾದ ಅಗರಬತ್ತಿ ಪ್ರೊಪರೈಟರ್ ಮಗಳಿಗೆ ಆಪರೇಷನ್ ಮಾಡಿ ಜೀವ ಉಳಿಸಿ ಕೈತುಂಬಾ ಸಾವಿರಗಟ್ಟಲೆ ಹಣಗಳಿಸುತ್ತಾರೆ.

ಸರೋಜಳ ಸ್ಥಿತಿ ತೀರ ಹದಗೆಟ್ಟು ನಂತರದಲ್ಲಿ ಖಾಸಗಿ ಆಸ್ಪತ್ರೆಗೆ ಹೊತ್ತು ತಂದು ಡಾಕ್ಟರ್ ನೀಳಾದೇವಿಯೇ ಆಪರೇಷನ್ ಮಾಡಿದರೂ ಸಹ ಮಗು ಮತ್ತು ತಾಯಿ ಸರೋಜ ಸಾವನ್ನಪ್ಪುತ್ತಾರೆ ಎಂದು ಹೇಳುವುದಕ್ಕಿಂತ ಕೊಲ್ಲುತ್ತಾರೆ ಎನ್ನಬಹುದು. ಕಥೆಗಾರರು ಸ್ವತ: ವೈದ್ಯರಾಗಿದ್ದರಿಂದ ವೈದ್ಯಕೀಯ ಅವ್ಯವಸ್ಥೆಯನ್ನು ಕಥೆಯಲ್ಲಿ ತೆರೆದಿಟ್ಟಿದ್ದಾರೆ. ಡಾಕ್ಟರ್ ನೀಳಾದೇವಿ ಗಂಡ ಡಾ|| ಈಶ್ವರ್ ನೇತ್ರ ವೈದ್ಯ. ಅವನಿಗೆ ಕೆಲವು ರೌಡಿಗಳಿಂದ ಬೆದರಿಕೆ ಕರೆಬಂದಿತು. ಒಬ್ಬ ದರೋಡೆಕೋರನಿಗೆ ಆಪರೇಷನ್ ಮಾಡಿ ಬೇರೊಬ್ಬರ ಕಣ್ಣನ್ನು ಜೋಡಣೆ ಮಾಡಿಕೊಡಬೇಕೆಂದು! ಇಂತ ಪರಿಸ್ಥಿತಿಯಲ್ಲಿ ಸರೋಜಳ ಸ್ಥಿತಿಯ ಲಾಭ ಮಾಡಿಕೊಂಡ ಮನುಷ್ಯ ರೂಪದ ರಾಕ್ಷಸ ಡಾ|| ಈಶ್ವರ್ ತನಗೆ ಬಂದ ಬೆದರಿಕೆ ಕರೆಯಿಂದ ಬಿಡಿಸಿಕೊಳ್ಳಲು ಸರೋಜಳ ತಂದೆ ಕೈಯಲ್ಲಿ ಖಾಲಿ ಪತ್ರಕ್ಕೆ ಸಹಿ ಪಡೆದು, ಅವಳ ಕಣ್ಣುಗಳನ್ನು ದಾನವಾಗಿ ಕಿತ್ತುಕೊಳ್ಳುವುದಾಗಿ ಹೇಳಿದನು. ಏನು ತಿಳಿಯದ ಮುಗ್ಧ ಮರಿಸಿದ್ದೇಗೌಡ ಒಪ್ಪಿದ. ಆದರೆ ಲಕ್ಷಾಂತರ ರೂಪಾಯಿಗಳಿಸಿದ ಡಾ|| ಈಶ್ವರ್ ಜೊತೆಗೆ ಈ ಕಥೆಯಲ್ಲಿ ಬರುವ ವಾಚ್‌ಮನ್, ಲ್ಯಾಬ್ ಟೆಕ್ನಿಷಿಯನ್, ವೈದ್ಯರು ಎಲ್ಲರು ಬಡವರ ರಕ್ತ ಹೀರುವ ಮೃಗಗಳು ಎಂದು ಕಥೆಗಾರರು ಗುರುತಿಸಿದ್ದಾರೆ.

ಕ್ಯಾತನಹಳ್ಳಿ ರಾಮಣ್ಣನವರ **'ಆ ಆರಾಣೆಗಳು'** ಕಥೆಯಲ್ಲಿ ಬಡತನದ ದಾರಿದ್ರ್ಯವನ್ನು ಹೇಳುವ ಮೂಲಕ ಸಮಾಜದ ಅವ್ಯವಸ್ಥೆಯನ್ನು ಗುರುತಿಸಲಾಗಿದೆ. ಕಥೆಯಲ್ಲಿ ಬರುವ ಗ್ಯಾದೆ ಕ್ಷೌರಿಕ ವೃತಿ ಮಾಡುವವನು. ಊರಿನಲ್ಲಿ ನಲ್ವತ್ತಕ್ಕು ಹೆಚ್ಚು ಕುಳಗಳಿದ್ದವು. ಒಂದೊಂದು ಮನೆಯಲ್ಲಿ ಒದೊಂದು ತರಹ ಅಡಿದೆ ದೊರೆಯುತ್ತಿತ್ತು. ಅದು ಆಯಾ ಮನೆಗಳಲ್ಲಿರುವ, ಕ್ಷೌರ ಮಾಡಿಸಿಕೊಳ್ಳುವ ತಲೆಗಳನ್ನು ಅವಲಂಬಿಸಿರುತ್ತಿತ್ತು. ಒಟ್ಟಿನಲ್ಲಿ ಅವನಿಗೆ ವರ್ಷದಲ್ಲಿ ಹದಿನೈದು ಪಲ್ಲ ಭತ್ತ ಬರುತ್ತಿತ್ತು. ಗ್ಯಾದನಿಗೆ ಮತ್ತು ಅವನ ತಾಯಿಗೆ ಬೇಕಾದಷ್ಟು ಆಗುತ್ತಿತ್ತು. ಒಂದು ವರ್ಷ ಮಳೆಯಾಗದೆ ಸರಿಯಾಗಿ ಧಾನ್ಯ ಸಿಗಲಿಲ್ಲ. ಏಳೆಂಟು ಪಲ್ಲ ಧಾನ್ಯ

ಶೇಖರಿಸಿದರೂ ಸಹ ಪುಂಡ ಸ್ನೇಹಿತರ ಸಹವಾಸದಿಂದ ಗ್ಯಾದೆ ದುಶ್ಚಟಗಳಿಗೆ ಬಲಿಯಾಗುತ್ತಾನೆ. ಅವನು ಶೇಖರಿಸಿದ ಧಾನ್ಯ ಮೂರು ತಿಂಗಳಲ್ಲಿ ಮುಗಿಯುವುದು. ಇದರಿಂದ ತಾನು ಮತ್ತು ಅವನ ತಾಯಿ ಹಸಿವಿನಿಂದ ಬಳಲುವಂತಾಯಿತು.

ಇದೇ ಸಮಯದಲ್ಲಿ ಗ್ಯಾದೆ ಬಳಿ ಹುಡುಗನೊಬ್ಬ ತಲೆಕ್ಷೌರ ಮಾಡಿಸಿಕೊಂಡು ಎಂಟಾಣಿಯ ನಾಣ್ಯವನ್ನು ಕೊಡುವನು. ಚಿಲ್ಲರೆ ಎರಾಡಣೆಯನ್ನು ಹುಡುಗನಿಗೆ ಹಿಂದಿರುಗಿಸಿದನು. ತನಗೆ ಸಿಕ್ಕ ಆರಾಣಿಯಿಂದ ತನ್ನ ತಾಯಿಯ ಹಸಿವು ನೀಗಿಸಬೇಕು ಎನ್ನುವ ಸಂತೋಷದಲ್ಲಿದ್ದನು. ಆದರೆ ಹುಡುಗನ ತಂದೆ ಗ್ಯಾದೆಯ ಬಳಿ ಮಗನಿಂದ ಆರಾಣಿಯನ್ನು ತೆಗೆದುಕೊಂಡಿದ್ದು ಹೆಚ್ಚಾಯಿತೆಂದು ಗ್ಯಾದೆಗೆ ಥಳಿಸುವನು. ಗ್ಯಾದೆಗೆ ಎರಡು ಕಪಾಲಗಳು ಊದಿಕೊಂಡವು. ಬಡವನ ಮಾತು ದವಡೆಗೆ ಮೂಲ ಎಂಬ ಮಾತಿನ ಅರಿವಾಗಿ ಗ್ಯಾದೆಗೆ ದುಃಖ: ಹೆಚ್ಚಾಯಿತು. ಹಸಿದ ತಾಯಿಗಾಗಿ ಅವನ ಮನ ಮರುಗಿತು. ಈ ಕಥೆಯಲ್ಲಿ ಬಡವರ ಶೋಷಣೆಯನ್ನು, ಉಳ್ಳವರ ದಬ್ಬಾಳಿಕೆಯನ್ನು ನಾವು ಮನಗಾಣಬಹುದು. ತನ್ನ ಕಾಯಕಕ್ಕೆ ತಾನು ಕೂಲಿ ನಿಗದಿ ಮಾಡಿಕೊಳ್ಳುವ ಪರಿಸ್ಥಿತಿ ಗ್ಯಾದನಿಗೆ ಇರಲಿಲ್ಲ. ಸಮಾಜದಲ್ಲಿ ಬಲಿಷ್ಟ ವರ್ಗಗಳೇ ತಳಸಮುದಾಯಗಳ ಕೂಲಿಯನ್ನು ನಿರ್ಧರಿಸುವ ಹಕ್ಕು ಪಡೆದಿದ್ದವು, ಜೊತೆಗೆ ಕೂಲಿಯ ರೂಪದಲ್ಲಿ ದವಸಧಾನ್ಯಗಳನ್ನು ನೀಡಲಾಗುತ್ತಿತ್ತು. ಅದೊಂದು ರೀತಿ ಸಾಟಿ ಪದ್ಧತಿಯೆನ್ನಬಹುದು. ಜಮೀನು ಇಲ್ಲದ ತಳಸಮುದಾಯದವರಿಗೆ ಆಹಾರ ಪದಾರ್ಥಗಳಾದ ಭತ್ತ, ರಾಗಿ, ಜೋಳ ಮೊದಲಾದವು ಕೂಲಿ ರೂಪದಲ್ಲಿ ಸಿಗುತ್ತಿದ್ದು ಅವರಿಗೂ ಊಟ ಬಟ್ಟೆಯ ವ್ಯವಸ್ಥೆಗೆ ಸಹಕಾರಿಯಾಗಿತ್ತು. ಇದು ಸಮಾಜದ ಸಮತೋಲನಕ್ಕೆ ಸ್ವಲ್ಪ ಸಹಾಯವಾದ ಪದ್ಧತಿಯಾಗಿತ್ತು.

ಎಂ. ರಾಮಕೃಷ್ಣ ಅವರ **'ಚಿಕ್ಕಿ-ಚಂದ್ರಮ'** ಕಥೆಯ ಶೀರ್ಷಿಕೆಯಂತೆ ಚಿಕ್ಕಿ ಗಾತ್ರದಲ್ಲಿ ಚಿಕ್ಕದು, ಚಂದ್ರ ದೊಡ್ಡದು. ಹಾಗೆಯೇ ಬಡವ ಶ್ರೀಮಂತರ ಅಂತರವೆಂಬುದನ್ನು ಸಂಕೇತವಾಗಿ ತಿಳಿಸುತ್ತದೆ. ಇದು ಸಂಘರ್ಷದ ಕಥೆಯಲ್ಲ. ತಾನು ಬಯಸಿದ ಪ್ರೀತಿಯನ್ನು ಬಡವ ಶ್ರೀಮಂತರೆಂಬ ಅಂತರದಿಂದ ಅದೇ ಪ್ರೀತಿಯನ್ನು ತೊರೆಯ ಬೇಕಾಯಿತು. ಈ ಕಥೆಯಲ್ಲಿ ಬರುವ ಪ್ರಧಾನ ಸ್ತ್ರೀ ಪಾತ್ರ ಚಿಕ್ಕಿ. ಈಕೆ ಚಂದವ್ವನ ಮನೆಯಲ್ಲಿ ಕೂಲಿ ಎನ್ನುವುದಕ್ಕಿಂತ ಮನೆಯವಳೇ ಆಗಿರುತ್ತಾಳೆ. ಅಷ್ಟೇ ಅಲ್ಲ ಚಂದವ್ವ ಅವಳನ್ನು ಮನೆಯ ಒಬ್ಬ ಸದಸ್ಯಳಂತೆ

ಕಾಣುತ್ತಿರುತ್ತಾಳೆ. ಒಮ್ಮೆ ಇವಳು ಸ್ನೇಹಿತೆ ಗೌರಿಯ ಜೊತೆ ರಾಗಿ ಬೀಸುತ್ತಿದ್ದಾಗ ಚಂದವ್ವನ ಮಗ ವಿದ್ಯಾವಂತನಾದ ಚಂದ್ರಮ(ಚೆನ್ನರಾಮ) ಇವಳ ಬಳಿ ಬಂದು ಬಹಳ ಆತ್ಮೀಯತೆಯಿಂದ ಮಾತನಾಡುತ್ತಾನೆ. ಅಂದಿನಿಂದ ಚಿಕ್ಕಿಗೆ ಚಂದ್ರಮನನ್ನು ಕಂಡರೆ ಒಂದು ಬಗೆಯ ಪ್ರೀತಿ, ಜೊತೆಗೆ ಆತಂಕ ಎರಡೂ ಇರುತ್ತದೆ.

ಚಂದವ್ವನಿಗೆ ಚಿಕ್ಕಿಯನ್ನ ಕಂಡರೆ ಬಹಳ ಅಕ್ಕರೆ. ಅವಳ ಕೆಲಸ ಕಾರ್ಯ, ನಡೆನುಡಿ ಅಂದಚಂದಗಳನ್ನು ಕಂಡು ಮಾರುಹೋಗಿದ್ದರು. ಮನೆಯಲ್ಲಿ ಹೆಚ್ಚು ಕೆಲಸ ಬಿದ್ದಾಗ ಅವಳನ್ನು ಮನೆಯಲ್ಲೇ ಇರುವಂತೆ ಹೇಳುತ್ತಿದ್ದರು. ಅವಳಲ್ಲಿ ಪೂರ್ಣ ನಂಬಿಕೆಯಿಟ್ಟು ಕೆಲಸ ವಹಿಸುತ್ತಿದ್ದರು. ಅವಳು ತನ್ನ ಕೆಲಸವನ್ನು ಕೂಲಿಗಾಗಿ ಮಾಡದಿದ್ದರೂ ಆಗಾಗ್ಗೆ ಚಂದವ್ವ ಅವಳಿಗೆ ಬತ್ತ, ರಾಗಿ, ಕಾಳುಕಡ್ಡಿ ಕೊಟ್ಟು ಸಹಾಯ ಮಾಡುತ್ತಿದ್ದರು. ಅವಳಿಗೆ ಕಾಯಿಲೆಬಿದ್ದಾಗ ಆದ ಖರ್ಚನ್ನು ಚಂದವ್ವನವರೇ ಕೊಟ್ಟಿದ್ದರು. ಹೀಗಾಗಿ ಚಿಕ್ಕಿ ಮನೆಯವಳಂತೆಯೇ ನಡೆದು ಕೊಳ್ಳುತ್ತಿದ್ದಳು. ಮನೆಯ ಸ್ಥಿತಿಗತಿ, ಒಳ-ಹೊರಗು ಎಲ್ಲವೂ ತಿಳಿದಿತ್ತು. ಆದರೂ ಅದನ್ನೆಲ್ಲ ಹೊರಗೆಲ್ಲೂ ಆಡದೆ ತನ್ನಷ್ಟಕ್ಕೆ ಇರುತ್ತಿದ್ದಳು. ಆ ಒಂದು ಗುಣದಿಂದಾಗಿಯೇ ಅವಳು ಚಂದವ್ವನವರ ಮನಸ್ಸಿಗೆ ಮೆಚ್ಚಿಕೆಯಾದದ್ದು. ಅಲ್ಲದೆ ಹೆಣ್ಣು ಮಕ್ಕಳಿಲ್ಲದ ಚಂದವ್ವನರಿಗೆ ಚಿಕ್ಕಿಯನ್ನು ಪ್ರೀತಿಸುವ ಹಂಬಲವೂ ಇತ್ತು. ಅವರಿಗೇನುಬೇಕಾದರೂ ಚಿಕ್ಕಿ ಕೂಡಲೇ ಒದಗಿಸುತ್ತಿದ್ದಳು. ಅವರಿಗೆ ಕಾಯಿಲೆಯಾಗಲಿ, ಸ್ನಾನಕ್ಕೆ ಹೋಗಿರಲಿ ಹೊರಗಾಗಿರಲಿ, ನೆಂಟರ ಮನೆಗೆ ಹೋಗಿರಲಿ ಚಿಕ್ಕಿಯ ಇರುವಿಕೆ ಅನಿವಾರ್ಯವಾಗಿ ಆಗಿ ಹೋಗಿತ್ತು. ಚಂದವ್ವನವರ ಮನಸ್ಸು ಎಲ್ಲಿಯವರೆಗೆ ಯೋಚಿಸಿತ್ತೆಂದರೆ "ಚಿಕ್ಕಿ ಒಂದಿಷ್ಟು ಅಕ್ಸರಾ ಗಿಕ್ಸರಾ ಕಲಿತಿದ್ದರೆ ನಮ್ಮ ಚನ್ನರಾಮುಗೇ ತಂದ್ಕೋಬೋದಿತು" ಎಂದೂ ಅಂದಿದ್ದರು ಚಿಕ್ಕಿ ತಾಯಿ ದೇವಿಯೆದುರು. ಈ ಮಾತುಗಳು ಚಿಕ್ಕಿಯ ಆಸೆಗೆ ಪುಷ್ಟಿ ನೀಡುವಂತಿತ್ತು.

ಚಿಕ್ಕಿ ಈ ಕಥೆಯಲ್ಲಿ ಬರುವ ಒಬ್ಬ ಹಳ್ಳಿಯ ಸಾಮಾನ್ಯ ಮುಗ್ಧಳಾದ ಹೆಣ್ಣು ಮಗಳು. ಸೌಂದರ್ಯವತಿ, ಓದದೇ ಇದ್ದರೂ ಒಂದಷ್ಟು ವ್ಯವಹಾರ ಜ್ಞಾನ ಬಲ್ಲವಳಾಗಿದ್ದಳು. ತನ್ನ ಮಿತಿಯನ್ನು ಅರಿಯದೆ ಚಂದ್ರಮನನ್ನು ಮನಸ್ಸಿನಲ್ಲಿಯೇ ಪ್ರೀತಿಸುತ್ತಿರುತ್ತಾಳೆ. ಜೊತೆಗೆ ದಾರಿಯಲ್ಲಿ ಬರುವಾಗ ಚಂದ್ರಮ ಅವಳ ಜೊತೆ ನಡೆದುಕೊಂಡ ರೀತಿ, ಅಂದರೆ ಹುಲ್ಲುಹೊರೆ ಎತ್ತಿಕೊಡುವಾಗ, ರಾಗಿ ಬೀಸುವಾಗ,

ಮಳೆ ಬಂದಾಗ ಅವಳಲ್ಲಿ ತೋರಿಸಿದ ಕಾಳಜಿ ಇದೆಲ್ಲ ಅವಳ ಮನಸ್ಸಿನಲ್ಲಿ ಪ್ರೀತಿ ಮೊಳಕೆಯೊಡೆಯಲು ಕಾರಣವಾಗುತ್ತದೆ. ತನ್ನ ತಾಯಿ ತೋರಿಸಿದ್ದ ಗಂಡನ್ನು ನಿರಾಕರಿಸುತ್ತಾಳೆ. ಚಿಕ್ಕಿ ಅಂದುಕೊಂಡಾ ಹಾಗೆ ಅವಳ ಬಗ್ಗೆ ಅಂತಹ ಯಾವ ಭಾವನೆಯು ಅವನ ಮನಸ್ಸಿನಲ್ಲಿರುವುದಿಲ್ಲ. ಆದರೆ ಚಂದ್ರಮ ಅವಳನ್ನು ನೋಡುತ್ತಿದ್ದ ರೀತಿ, ವರ್ತಿಸಿದ ಸಂದರ್ಭ ಇವೆಲ್ಲವೂ ಮುಗ್ಧ ಹೆಣ್ಣಿನ ಮನಸ್ಸಿನ ಭಾವನೆಗಳನ್ನು ಕೆಣಕಿದವು.

ಚಂದ್ರಮನ ಮದುವೆ ವಿಷಯ ಮಾತನಾಡಲು ಬಂದಿದ್ದ ಈರಾಪುರದ ಸಾಹುಕಾರರನ್ನು ನೋಡಿದ ತಕ್ಷಣ ಚಿಕ್ಕಿ ಚಂದ್ರಮನ ಜೊತೆ ಕಟ್ಟಿದ ಪ್ರೀತಿಯ ಗೋಪುರ ನುಚ್ಚುನೂರಾಯಿತು. ತನ್ನ ಮಿತಿಯನ್ನು ತಾನು ಅರಿತುಕೊಳ್ಳದೆ ಶ್ರೀಮಂತ ಕುಟುಂಬದವರನ್ನು ಅದರಲ್ಲೂ ಅವಿದ್ಯಾವಂತೆ, ಕೂಲಿಯಾಳಾದ ತಾನು ಚಂದ್ರಮನನ್ನು ಆ ದೃಷ್ಟಿಯಲ್ಲಿ ನೋಡಿದ್ದು ತನ್ನ ತಪ್ಪು ಎಂದು ಕಣ್ಣೀರಾಕ ತೊಡುಗುತ್ತಾಳೆ. ಗೌರಿಯ ಬಳಿ ಚಿಕ್ಕಿ ತನ್ನ ಪ್ರೀತಿಯನ್ನು ಹೇಳಿಕೊಂಡಾಗ ಗೌರಿ ಚಿಕ್ಕಿಗೆ "ಬೋರೆ ಬೋರೆಯೇ, ಹಳ್ಳ ಹಳ್ಳವೇ ಕನ ಏಳು. ಮನಸ್ಸಿನಲ್ಲಿ ಇಟ್ಕಂಡಿದ್ದದ್ದನ್ನ ಬುಟ್ಬುಟ್ಟು ಸುಮ್ನೆ ಓಡಾಡಿಕೊಂಡಿರು. ನೀ ಎಂದಿದ್ರೂ ಚಿಕ್ಕಿ, ಅವರು ಚಂದ್ರಮ ಅಲ್ಲೇ. ಸಮ ಹೆಂಗಾಗೂ ಅಂದ್ರೆ ಆದಾದು...."(ಎಂ. ರಾಮಕೃಷ್ಣ, ತೇರು ಬಂತು ತವರಿಗೆ, ೧೯೭೦, ಪುಟ-೧೪೩)ಎಂಬ ಮಾತು ಎಂದು ಹೇಳುವ ಮೂಲಕ ನೀನು ಚಿಕ್ಕಿ ಅವನು ಚಂದ್ರಾಮ ಎಂದಿಗೂ ಎರಡು ಒಂದಾಗುವುದಿಲ್ಲ ಎನ್ನುತ್ತಾಳೆ.

'ಚಿಕ್ಕಿ-ಚಂದ್ರಮ' ಕಥೆಯ ಮೂಲಕ ಚಿಕ್ಕಿ ಚಂದ್ರಮನ ಬಗ್ಗೆ ಇಟ್ಟಿದ್ದ ನಂಬಿಕೆ, ಉದ್ದೇಶ ಎರಡರ ಧ್ಯೇಯ ಸಾಧನೆ ಇಲ್ಲಿ ಸಾಧ್ಯವಾಗುವುದಿಲ್ಲ. ಒಬ್ಬ ಮೇಲ್ವರ್ಗದ ವಿದ್ಯಾವಂತ ಹುಡುಗ ಕೂಲಿಯಾಳು ಸ್ತ್ರೀಯನ್ನು ನೋಡುವ ದೃಷ್ಟಿ, ಕೂಲಿಯಾಳು ಅದರಲ್ಲೂ ಪ್ರಾಯಕ್ಕೆ ಬಂದ ಹೆಣ್ಣು ಮಗಳು ಒಡೆಯರ ಮನೆಯ ವ್ಯಕ್ತಿ ತೋರಿಸಿದ ಕನಿಕರವನ್ನು ಪ್ರೀತಿ ಎಂದು ನಂಬುವ ಮುಗ್ಧ ಮನಸ್ಸು. ಮುಗ್ಧ ಮನಸ್ಸಿಗೆ ಬಿದ್ದ ಪೆಟ್ಟಿನಿಂದ ಅನುಭವಿಸುವ ನೋವು ಇವುಗಳ ಮಧ್ಯೆ ಮತ್ತೆ ಶುರುವಾಗುವ ಪ್ರತಿನಿತ್ಯದ ಕೂಲಿ ಕೆಲಸ ಇವೆಲ್ಲವೂ ಕಥೆಯ ಹಂದರವನ್ನು ಮತ್ತಷ್ಟು ಸುಂದರಗೊಳಿಸುವ ಮೂಲಕ ಸ್ತ್ರೀ ಬಗೆಗಿನ ಧೋರಣೆಯನ್ನು ಇಲ್ಲಿ ಅಭಿವ್ಯಕ್ತಗೊಳಿಸುತ್ತದೆ.

ರಮೇಶ್ ಹುಲ್ಲುಕೆರೆ ಅವರ **'ನೀರು'** ಕಥೆಯಲ್ಲಿ ಮಂಡ್ಯ ಜಿಲ್ಲೆಯ ರೈತರು ಮತ್ತು ನಾಗರೀಕ ಸಮುದಾಯದ ನೀರಿನ ಸಮಸ್ಯೆ ಎದುರಿಸುವ ಹಾಗೂ

ರೈತರನ್ನು ಉಪಯೋಗಿಸಿಕೊಂಡು ತಮ್ಮ ರಾಜಕೀಯ ಲಾಭ ಪಡೆಯುವ ಹುನ್ನಾರವನ್ನು ಸೂಕ್ಷ್ಮವಾಗಿ ಕಥೆಗಾರರು ಗ್ರಹಿಸಿದ್ದಾರೆ. ಬರಗಾಲದಲ್ಲಿ ಕರ್ನಾಟಕದಲ್ಲಿ ರೈತರಿಗೆ ನೀರಿನ ಸಮಸ್ಯೆಯಿದ್ದರೂ ತಮಿಳುನಾಡಿಗೆ ನೀರು ಬಿಡುವುದನ್ನು ವಿರೋಧಿಸುವ ವಸ್ತುವನ್ನು ಆಯ್ಕೆ ಮಾಡಿಕೊಂಡಿದ್ದಾರೆ. ಅಂದಿನಿಂದ ಇಂದಿನವರೆಗೆ ಸಮಸ್ಯೆಯಾಗಿಯೇ ಉಳಿದು ಬಂದಿರುವ ಕಾವೇರಿ ಸಮಸ್ಯೆಯನ್ನು ಕಥೆಗಾರರು ಒಂದು ಉತ್ತಮ ರೀತಿಯ ಕಥೆಯನ್ನಾಗಿ ರೂಪಿಸಿದ್ದಾರೆ.

ಕಲ್ಲುಕರೆಯ ಮುಗ್ಧ ಚೌಡಿ ಒಂದು ಕಾಲಕ್ಕೆ ನಾಟಿ ಔಷಧಿ ಕೊಡುವ ಧನ್ವಂತರಿ ಹಟ್ಟಿಯಲ್ಲಿ ಚನ್ನಾಗಿ ಬದುಕಿಬಾಳಿದವಳು. ಚೌಡಿ ಗಂಡ ಕೆಂಚಪ್ಪನ ಧನ್ವಂತರಿ ಹಟ್ಟಿಯೆಂದರೆ ಸುತಮುತ್ತಲ ಹಳ್ಳಿಗಳಲ್ಲಿ ಪ್ರಸಿದ್ಧಿ. ಕೆಂಚಪ್ಪನು ಯಾರ ಬಳಿಯೂ ಹಣ ತೆಗೆದುಕೊಳ್ಳದೆ ಉಚಿತವಾಗಿ ಔಷಧಿ ನೀಡುತ್ತಿದ್ದ. ಇದು ಇವನ ಮಾನವೀಯತೆಯನ್ನು ತೋರುತ್ತದೆ. ಹಣ ಮಾಡಬೇಕೆಂಬ ದುರಾಲೋಚನೆಯಿಲ್ಲದ ಮುಗ್ಧ ಮನಸ್ಸಿನ ವ್ಯಕ್ತಿಯಾಗಿದ್ದಾನೆ. ಕೆಂಚಪ್ಪನ ಆಕಸ್ಮಿಕ ಮರಣದ ನಂತರ ಪಟೇಲ ಕೊಟ್ಟ ಸಾಲಕ್ಕೆ ಮೋಸದಿಂದ ಕೆಂಚಪ್ಪನ ಮನೆ-ಆಸ್ತಿಗಳನ್ನು ಬರೆಸಿಕೊಂಡಿದ್ದ. ಚೌಡಿ ನೆಮ್ಮದಿಯ ಜೀವನದಿಂದ ಕಷ್ಟದ ಬದುಕಿಗೆ ಸಿಕ್ಕಿಕೊಂಡಳು. ಬೆಣ್ಣೆ, ತರಕಾರಿ, ಸೊಪ್ಪು ಮಾರಿ ಇದ್ದ ಒಬ್ಬ ಮಗನನ್ನು ಸಾಕುತ್ತಿದ್ದಳು. ಕಾವೇರಿ ಗಲಾಟೆಯಲ್ಲಿ ಚೌಡಿಯ ಮಗನನ್ನು ಪೋಲೀಸರು ರೈತರೊಂದಿಗೆ ಜೈಲಿಗೆ ಹಾಕಿದರು. ಹೆತ್ತ ಕರುಳು ಇದನ್ನು ಸಹಿಸದೆ ತನ್ನ ಮಗನನ್ನು ಬಿಡಿಸಿಕೊಡಬೇಕೆಂದು ಪಟೇಲನ ಬಳಿ ಚೌಡಿ ಕೇಳುವಳು. ಪಟೇಲ ಹಣವಿಲ್ಲದೆ ಮಗನನ್ನು ಬಿಡಿಸಲು ಸಾಧ್ಯವಿಲವೆಂದು ಹೇಳಿದನು. "ಮಾತು ಅಂದ್ರೆ ಮಾತು. ನನ್ನ ಮಗನ ನಿನ್ನ ಹಟ್ಟಿಲಿ ಜೀತಕ್ಕಿರಿಸ್ತಿನಿ. ಅದೂ ಸಾಲದಿದ್ರೆ ಹೇಳು. ನಾನು ನಿನ್ನ ಹಟ್ಟಿಲಿ ಕಸ ಸುರಿತಿನಿ. ಆಗೊದಿಲ್ಲ ಅಂತ ಅನ್ನಬೇಡ.."(ರಮೇಶ್ ಹುಲ್ಲುಕೆರೆ, ಸೊಗಡು-೨೦೦೩, ಪುಟ- ೩೦)ಪಟೇಲ ನಿರಾಳನಾದ.

ಪಟೇಲನು ಬಾಯಿ ಮಾತಿಗೆ ಒಪ್ಪದೆ ಪತ್ರವೊಂದಕ್ಕೆ ಚೌಡಿಯ ಬಳಿ ಹೆಬ್ಬೆಟ್ಟು ಒತ್ತಿಸಿಕೊಂಡನು. ಚೌಡಿಯು ವಾಸವಿದ್ದ ಗರೀಬಿ ಕಾಲೋನಿಯ ಸೈಟಿನಲ್ಲಿ ಸರಾಪಿನ ಅಂಗಡಿ ಇಡುವುದಾಗಿ ಒತ್ತಾಯ ಹೇರುವನು. ಇದು ಪಟೇಲನ ಸಮಯ ಸಾಧಕತನ ಮತ್ತು ತನ್ನ ಸ್ವಾರ್ಥವನ್ನು ತೋರುತ್ತದೆ. ಚೌಡಿಯು ಸರಾಪಿನ ಅಂಗಡಿ ತೆರೆಯುವುದನ್ನು ವಿರೋಧಿಸುತ್ತಾಳೆ. "ಬ್ಯಾಡಕನಪ್ಪಾ ಸರಾಪು ಕುಡಿಸಿ ಜನರ ಯಾಕೆ ಕೆಡಿಸಿರಿ, ಪಾಪದ ಕೆಲಸಕ್ಕೆ ನಾನು ಒಪ್ಪೋದಿಲ್ಲ" ಈ

ಮಾತುಗಳು ಚೌಡಿಯ ಸಾಮಾಜಿಕ ಪ್ರಜ್ಞೆಯನ್ನು ಬಿಂಬಿಸುತ್ತದೆ. ಕುಡಿದು ಹಾಳಾಗುವ ಊರಿನ ಜನರನ್ನು ನೆನೆದು ಕುಸಿದು ಬಿದ್ದಳು ಕಡೆಗೂ ತನಗೆ ಇಷ್ಟವಿಲ್ಲದಿದ್ದರು ತನ್ನ ಮಗನ ಬಿಡಿಸಲು ಪಟೇಲನ ಮಾತಿಗೆ ಒಪ್ಪಬೇಕಾಯಿತು. ಅಂತೂ ಇಂತೂ ಚೌಡಿಯ ಗರೀಬಿಮನೆ ಪರಬಾರೆಯಾಯಿತು. ಒಟ್ಟಾರೆ ಈ ಕಥೆಯ ಅಂಶವೆಂದರೆ ಹಣ ಕೊಟ್ಟು ಸಾಲಕ್ಕೆ ಬಡ್ಡಿ, ಚಕ್ರ ಬಡ್ಡಿಯೆಂದು ಇರುವುದನ್ನು ಕಿತ್ತುಕೊಂಡು ಬಡವರನ್ನು ಶೋಷಿಸಿಲಾಗುತ್ತದೆ. ಇಲ್ಲಿ ಹಳ್ಳಿಯನ್ನು ಈ ವ್ಯವಹಾರಕ್ಕೆ ಗುರಿ ಮಾಡಲಾಗಿದೆ.

ಮಗನನ್ನು ಕಾಣಲು ಮಂಡ್ಯಕ್ಕೆ ಬಂದ ಚೌಡಿ ಕರ್ಫ್ಯೂ ಇದ್ದರು, ಯಾವುದಕ್ಕೂ ಹೆದರದೆ ಮಗನಿಗಾಗಿ ಹುಡುಕುತ್ತಾಳೆ. ಚೌಡಿಯು ತರಕಾರಿ, ಸೊಪ್ಪು ಮಾರಿಗಳಿಸಿದ ಅರವತ್ತು ರೂಪಾಯಿಗಳನ್ನು ಜೈಲಿನಲ್ಲಿ ಲಂಚವಾಗಿ ಕೊಡುವಳು. ಇದು ಜೈಲಿನ ಸ್ಥಿತಿ-ಗತಿಯನ್ನು ಹೇಳುತ್ತದೆ. ಚೌಡಮ್ಮ ಸರ್ಕಲ್ ಇನ್ಸ್‌ಪೆಕ್ಟರ್ ರಾಮಸ್ವಾಮಿಯನ್ನು ಕುರಿತು 'ಮಗನ್ನ ತೋರಸಪ್ಪ....' ಎಂದು ಕಾಲಿಗೆ ಬೀಳುತ್ತಿದ್ದಾಗ "ಏ ಮುದುಕಿ ಮುಟ್ಟಬೇಡ, ಬೂಟು ಕೊಳೆಯಾಗುತ್ತೆ. ಅಸಹ್ಯ, ಕೊಳಿತಾ ಇದ್ದೀಯಾ!.... ಸಾಹೇಬರಿಗೆ ಮರಳು ಮಾಡಿದೆ!..... ಕಸಬಿನವಳಂಗೆ ಕಾಣಿಸ್ತಿಯಾ!? ಎಂದು ವಕ್ರವಾಗಿ ನಕ್ಕ. ಚೌಡಿಗೆ ರೇಗುಹತ್ತಿತು. ಸುತ್ತಮುತ್ತ ನಿಂತ ಪೋಲೀಸ್ ಪೇದೆಗಳನ್ನು ನೋಡಿದಳು. ಎಲ್ಲರ ಮುಖದ ಮೇಲೂ ಹುಸಿ ನಗೆಯ ತುಂಟತನ ಎದ್ದು ಕಾಣಿಸುತ್ತಿತ್ತು. ಏಯ್! ನೀನು ಒಬ್ಬ ಗಂಡಸಾ?..... ಮನುಷ್ಯನಾ ಕುಲವಾ!.... ನಿನಗೇನು ಮಕ್ಕಳು ಮರಿ ಇಲ್ವಾ? ನಾಚಿಗೆಗೆಟ್ಟ ಲೌಡಿ ಮಗನೆ..... ಕಷ್ಟಕ್ಕೆ ಆಯಿತಾನೇ ಅಂತ ಕಾಲಿಗೆ ಬಿದ್ರೆ..... ನನ್ನ ಏನು ಅಂತ ತಿಳಕಂಡೆ? ನಿನ್ನ ಹೆಂಡ್ತಿಗೆ ಹೋಗಿ ಹೇಳು, ತಾಕತ್ತಿದ್ದರೆ ಈ ಮಾತ ನಿಮ್ಮವ್ವನಿಗೆ ಹೇಳು..... ಉಗದು ಜಾತಿ ಕೆಡಿಸಿ, ಕಿತ್ತೋದ ಎಕ್ಕಡ ತಕಂಡು ಬಡಿತಾರೆ. ನಾನ್ಯಾರುಗೋತ್ತಾ? ..... ಅಪ್ಪನಿಗೆ ಹುಟ್ಟಿದ ಮಗಳು ನಿನ್ನಂಗೆ ಅಡ್ಡನಾಡಿಗೆ ಬಿದ್ದವಳಲ್ಲ"(ರಮೇಶ್‌ಹುಲ್ಲುಕರ, ಸೊಗಡು, ೨೦೦೬, ಪುಟ-೩೦)ಎಂದು ಮಾತಿನಲ್ಲಿ ಜಾಡಿಸಿದಾಗ ರಾಮಸ್ವಾಮಿ ತಬ್ಬಿಬ್ಬಾದ. ಚೌಡಿ ತನ್ನ ಆತ್ಮಾಭಿಮಾನವನ್ನು ಉಳಿಸಿಕೊಳ್ಳುವ ದಿಟ್ಟತನವನ್ನು ಈ ಕಥೆಯಲ್ಲಿ ತೋರಿದ್ದಾಳೆ.

ಚೌಡಿ ತನ್ನ ಮಗನನ್ನು ಹುಡುಕಿಕೊಂಡು ಬಂದು ಕಂಗಾಲಾದರೆ, ಚಳವಳಿ ನಾಯಕರ ಬಣ್ಣದ ಮಾತುಗಳಿಗೆ ಮರುಳಾದ ರೈತರು ಜೈಲು ಸೇರಿದರು. ಇದರ ಲಾಭ ಪಡೆದು ಎಂ.ಎಲ್.ಎ ಸೀಟು ಪಡೆಯುವ ರಾಜಕೀಯದ

ಹುನ್ನಾರವನ್ನು ದಿಟ್ಟತನದಿಂದ ಹೊರ ಜಗತ್ತಿಗೆ ತೋರುವ ಕೆಲಸ ಮಾಡಿದಳು. ರಾಜಕೀಯ ನಾಯಕರಿಗೆ ಚೌಡಿ ಇರುವ ಒಬ್ಬ ಮಗನನ್ನು ಬಿಡಿಸಿಕೊಡಬೇಕೆಂದು ಕೇಳಿಕೊಳ್ಳುವಳು. ಆಗ ಚಳವಳಿಯ ನಾಯಕರು ಚೌಡಿಯನ್ನು ಆಚೆಗೆ ನೂಕಿ ಎಂದಾಗ ಚೌಡಿಯು ಆಗಲೂ ದಿಟ್ಟತನ ತೋರುವಳು. "ಗಂಡ್ಸಾದ್ರೆ ಬಾ ಮೈ ಮುಟ್ಟಿ ನೋಡು..... ಆಗೋದಿಲ್ವಂತೆ! ಯಾಕೆ ಆಗೊದಿಲ್ಲಾ? ನೀನು ಜೈಲಲ್ಲಿದ್ರೆ ನಿನ್ನ ಹೆಂಡ್ತಿ ಮಕ್ಕಳಿಗೆ ಕಷ್ಟ ಏನೂ ಅಂತ ಗೊತ್ತಾಗಿರೋದು. ಲೀಡ್ರು ಅಂತ ಇಲ್ಲಿ ನಿಂತಿದ್ದಿರಿಲ್ಲಾ ನಿಮ್ಮ ಹಟ್ಟಿಯವರು ಎಷ್ಟು ಜನ ಜೈಲಲ್ಲವ್ರೆ ಹೇಳಿ? ನಿಮ್ಮ ಬೇಳೆಬೇಯಿಸ್ಕೋಕೆ ನಮ್ಮ ಜೀವ ತೆಗೀಬೇಕಾ? ನನ್ನ ಮಗನ ಬುಡುಸೊಕೆ ಅಂಗೈ ಅಗಲದ ರೊಪ್ಪವ ಅಡಾ ಇಟ್ಟಿವಿನಿ. ಗೊತ್ತಾಯ ಜಾಮೀನು ಕೊಡ್ಸುದಿಲ್ಲ ಅಂತ ಹೇಳುಕೆ ನೀಯಾವುರ ದಾಸಯ್ಯ?..... ನೀ ಏನು ಹೆತ್ತು ಹೊತ್ತು ಸಾಕಿದ್ದಾ? ..... ನನ್ನ ಮಗನ ಜೈಲಲ್ಲಿ ಇರಸಿ, ನಂಗೇನು ಹಿಟ್ಟು ಬಟ್ಟೆ ಕೊಡ್ತೀರಾ"(ರಮೇಶ್ ಹುಲ್ಲುಕೆರೆ, ಸೊಗಡು, ೨೦೦೬, ಪುಟ-೪೨)ಎಂದು ಚೌಡಮ್ಮ ಇಳಿಯಾ ಮುಳಿಯಾ ಜನ್ಮ ಜಾಲಾಡಿಸಿದಳು.

ಇಂದಿಗೂ ರೈತರ ಹೆಸರಿನಲ್ಲಿ ಚಳವಳಿ, ಪ್ರಮಾಣ ವಚನ ಮಾಡಿ ಸರ್ಕಾರ ನಡೆಸುವ ಮೂಲಕ ಹಣ ಮತ್ತು ಅಧಿಕಾರ ಲಪಟಾಯಿಸುವ ವರ್ಗ ಒಂದು ಕಡೆ. ರೈತನ ಬದುಕಿನ ಕಷ್ಟ ತಿಳಿಯದ ನಾಯಕರು 'ರೈತ' ಎಂಬ ಪದ ಹೇಳಿಕೊಂಡು ದೊಡ್ಡ ಮನುಷ್ಯರಾಗುತ್ತಿರುವುದು ನಾಚಿಕೆಗೇಡು. ಈ ಕಥೆಯಲ್ಲಿ ಚೌಡಿ 'ನೀವು ರೈತರಾ? ಕಿರಾತಕರು!' ಎಂದು ಚಳವಳಿ ನಾಯಕರಿಗೆ ಹೇಳಿರುವುದು ಧೈರ್ಯದ ಸಂಕೇತವಾಗಿದೆ. ಬಡ ರೈತ ಶ್ರೀಮಂತರ ಹಾಗೂ ನಾಯಕರ ವಂಚನೆಗೆ ಒಳಗಾಗುತ್ತಿರುವುದು ಮುಂದುವರಿದಿದೆ. ಗ್ರಾಮೀಣ ಪ್ರದೇಶದ ಹೆಣ್ಣು ಮಗಳು ಚೌಡಿಯ ದಿಟ್ಟತನ, ಪ್ರಾಮಾಣಿಕ ಬದುಕು ಇಂದಿನ ಹೆಣ್ಣು ಮಕ್ಕಳಿಗೆ ಮಾದರಿಯಾಗಿದೆ. ಜೊತೆಗೆ ಒಳ್ಳೆ ತಾಯಿಯಾಗಿ ಆಕೆಯ ಗೋಳಾಟ ಮಗನ ಮೇಲಿನ ಅಕ್ಕರೆ ಮೌಲ್ಯಯುತವಾದುದು.

ಹರವು ದೇವೇಗೌಡ ಅವರ **'ಮದಕ'** ಕಥೆಯಲ್ಲಿ ಬಡ ರೈತನನ್ನು ಶೋಷಿಸುವ ಸರ್ಕಾರಿ ಅಧಿಕಾರಿಗಳ ದರ್ಪವನ್ನು ಗುರುತಿಸಲಾಗಿದೆ. ಭ್ರಷ್ಟಚಾರವಿಲ್ಲದ ಸರ್ಕಾರಿ ಅಧಿಕಾರಿಗಳು ಅಪರೂಪ. ಇವತ್ತಿನ ನಮ್ಮ ಅನುಭವಕ್ಕೂ ಇಂತಹುದೇ ಪರಿಸ್ಥಿತಿಗಳು ಎದುರಾಗಿವೆ. ಚಾಮೇಗೌಡ ಒಬ್ಬ ಸಾಮಾನ್ಯ ರೈತ. ತನ್ನ ಜಮೀನನ್ನು ಒತ್ತುವರಿಯಾಗಿರುವುದಕ್ಕೆ ಪಕ್ಕದ ಗದ್ದೆಯ

ನಿಂಗಣ್ಣಿಂದೆ ಈ ಕೆಲಸ ಎಂದು ಕೊಳ್ಳುತ್ತಾನೆ. ಮೊದಲು ತನ್ನ ಜಮೀನು ಎಷ್ಟಿದೆ ಎಂದು ತಿಳಿದುಕೊಳ್ಳಲು ಸರ್ವೆ ಮಾಡಿಸಬೇಕೆಂದು ಪಂಚಾಯಿತಿ ಕಛೇರಿಯತ್ತ ನಡೆದ. ವಿಲೇಜ್ ಅಕೌಟೆಂಟ್ ಬಳಿ ಹೋಗಿ ತನ್ನ ಕೆಲಸವನ್ನು ಮಾಡಿಕೊಡಬೇಕಾಗಿ ಕೇಳಿಕೊಳ್ಳುತ್ತಾನೆ. ಪ್ರತಿಯಾಗಿ ಎರಡು ವರ್ಷದಿಂದ ಕಂದಾಯ ಕಟ್ಟಿಲ್ಲ. ಮೊದಲು ಕಂದಾಯ ಕಟ್ಟು. ಇಲ್ಲಿಂದ ಪ್ರಾರಂಭವಾಗುತ್ತೆ ಚಾಮೇಗೌಡನ ವಿಳಂಬ ಸರ್ವೆಕಾರ್ಯ. ಚಾಮೇಗೌಡ ತನಗೆ ಹೋದವರ್ಷ ಕಾಲು ಮುರಿದು ಬೇಸಾಯ ಮಾಡದೆ ಪಾಳು ಬಿದ್ದಿದೆ. ಹಣ ಎಲ್ಲಿಂದ ಬಂದದು ಸ್ವಾಮಿ ಗೋಗರೆದು ಪ್ರಯೋಜನವಾಗಲಿಲ್ಲ.

ಚಾಮೇಗೌಡ ಮನೆಯಲ್ಲಿದ್ದ ರಾಗಿಯನ್ನು ನಾನೂರು ಚಿಲ್ಲರೆಗೆ ಮಾರಿ, ಕಂದಾಯ ಕಟ್ಟಲು ಬರುವನು. ಚಾಮೇಗೌಡ ವಿಲೇಜ್ ಅಕೌಟೆಂಟನನ್ನು ಎಷ್ಟು ಕಂದಾಯ ಕಟ್ಟಬೇಕು ಎಂದಾಗ ಮುನ್ನೂರಅರವತ್ನಾಲಕು ಎನ್ನುವನು. ಚಾಮೇಗೌಡ ಮುನ್ನೂರು ಎಪ್ಪತ್ತು ತೆಗೆದುಕೊಟ್ಟ. ರಸೀದಿಯಲ್ಲಿ ಮುನ್ನೂರು ನಲ್ವತ್ನಾಲ್ಕು ಎಂದು ಬರೆದಿತ್ತು. ಇದನ್ನು ಗಮನಿಸಿದ ಚಾಮೇಗೌಡ ಕೇಳಬೇಕೆಂದು ಎನಿಸಿದರೂ ಹೆಚ್ಚಿನ ಇಪ್ಪತ್ತಾರು ರೂಪಾಯಿಗಳು ಲಂಚದ ಹಣವಾಗಿ ಬದಲಾಗಿತ್ತು.

ಪಂಚಾಯಿತಿಯಿಂದ ತಾಲ್ಲೂಕೂ ಕಛೇರಿಗೆ ಬಂದಾಗ ಜವಾನನು ಯಾವುದಕ್ಕೂ ಅಂಜದೆ ಐದು ರೂಪಾಯಿಗಳನ್ನು ಕೊಡುವಂತೆ ಹೇಳಿ ಒಳಗೆ ಬಿಟ್ಟ. ಚಾಮೇಗೌಡ ಬಹಳ ವಿನಯವಾಗಿ 'ನಮಸ್ಕಾರ ಬುದ್ದೀ' ಎಂದು ತನ್ನ ಅರ್ಜಿಯನ್ನು ಕೊಟ್ಟು ತನ್ನ ಜಮೀನು ಅಳತೆಯಾಗಬೇಕು ಆರ್.ಟಿ.ಸಿ ಕಾಪಿ ಬೇಕು ಎಂದು ಕೇಳಿಕೊಳ್ಳುತ್ತಾನೆ. ಅಮುಲ್ದಾರ ೧೫ ದಿನ ಬಿಟ್ಟು ಬರಬೇಕೆಂದು ಹೇಳಿದ. ೧೫ ದಿನಗಳ ನಂತರ ಬಂದ ಚಾಮೇಗೌಡ ತನ್ನ ಕೆಲಸ ಇನ್ನೂ ಆಗಿಲ್ಲವಲ್ಲ ಎಂದು ವ್ಯಥೆ ಪಡುತ್ತಿರುತ್ತಾನೆ. ಜವಾನ ಕೂಗಿ 'ಅದ್ಕೆ ಮತ್ತೆ ನಿಮ್ಮಳ್ಳಿ ಜನಕ್ಕೆ ಬುದ್ಧಿ ಇಲ್ಲ ಅನ್ನೋದು ಕೈಗೆ ಒಂದಿಪ್ಪತ್ತು ರೂಪಾಯಿ ಕೊಟ್ಟರೆ ಈಗ್ಲೇ ಬರ್ಕೊಡ್ತಾರೆ. ಸುಮ್ನೆ ಕೊಟ್ಟು ಬರೆಸಿಕೊಂಡು ಹೋಗು' ಎಂದನು. (ಕಥಾ ರಚನೆ ಕಾಲಕ್ಕೆ ಕಂಪ್ಯೂಟರ್ ಬಳಕೆಯಿರಲಿಲ್ಲ) ಇಲ್ಲಿ 'ಸರ್ಕಾರಿ ಕೆಲಸ ದೇವರ ಕೆಲಸ' ಎನ್ನುವ ಮಾತಿಗೆ ತದ್ವಿರುದ್ಧವಾಗಿದೆ. ಚಾಮೇಗೌಡ ಒಳಗೆ ಹೋಗಲು ಹದಿನೈದು ರೂಪಾಯಿ ಕೊಡುತ್ತಾನೆ. ಅದರಲ್ಲು ಜವಾನ ಐದು ರೂಪಾಯಿ ತಾನು ಇಟ್ಟುಕೊಂಡು, ಉಳಿದ ಹತ್ತು ರೂಪಾಯಿಗಳನ್ನು ಒಳಗೆಕೊಟ್ಟು ನಿನ್ನ ಕೆಲಸವಾಗುತ್ತದೆ ಸಂಜೆ ಬಾ ಎಂದು ಹೇಳಿ ಕಳುಹಿಸುವನು. ಸರ್ವೆ ಮಾಡಿಸಲು ಮೂವತ್ತೈದು ರೂಪಾಯಿ ಕಟ್ಟಬೇಕು

ಎಂಬ ಮಾತನ್ನು ಕೇಳಿ ಚಾಮೇಗೌಡ ಗಾಬರಿಗೊಂಡ. ಈಗಾಗಲೇ ರಾಗಿ ಮಾರಿದ ದುಡ್ಡು ನೀರಿನಂತೆ ಖರ್ಚಾಗಿತ್ತು. ಸರ್ವೆ ಮಾಡಲು ಲಂಚವಾಗಿ ಮೂರು ಜನರಿಗೆ ನೂರು ರೂಪಾಯಿಗಳನ್ನು ಕೊಡಬೇಕೆಂದು ಯಾವುದೇ ಸಂಕೋಚವಿಲ್ಲದೆ ಸರ್ವೆಯರ್ ಲಂಚ ಕೇಳುತ್ತಾನೆ. ಇಲ್ಲಿ ಮುಕ್ತವಾಗಿ, ಪಾರದರ್ಶಕವಾಗಿ ಬಡವರ ಮೇಲೆ ಶೋಷಣೆಯ ಮೇಲೆ ಶೋಷಣೆ ನಡೆಯುವುದನ್ನು ನಾವು ಕಾಣಬಹದು. ಪ್ರಸ್ತುತ ಇವತ್ತಿಗೂ ಇದು ನಡೆಯುತ್ತಿದೆ. ಚಾಮೇಗೌಡ ಹಣ ಎಲ್ಲಿಂದ ತರುವುದು ತಾನೂ ಯಾಕದರೂ ಈ ಕೆಲಸಕ್ಕೆ ಕೈ ಹಚ್ಚಿದನೋ ಎಂದು ವ್ಯಥೆಪಡುತ್ತಾನೆ. ಪ್ರತಿಯೊಂದು ಘಟ್ಟದಲ್ಲಿ ಹಣ ಸುರಿದು ಸಾಕಾಗಿತ್ತು.

ಸರ್ವೆ ಮಾಡಿದ ನಂತರ ತನ್ನ ಪಾಲಿಗೆ ಬಂದಿದ್ದು ಅರ್ಧಮೊಳದಷ್ಟು. ಸುಮಾರು ಹದಿನೈದು ಗುಂಟೆ ಜಮೀನು ಬರಬಹುದು ಎಂದು ಭಾವಿಸಿದ್ದ ಚಾಮೇಗೌಡ ಸಂಕಟಪಡುತ್ತಾನೆ. ಈ ಖದೀಮರಿಗೆಲ್ಲಾ ಲಂಚ ಕೊಟ್ಟು ಕಷ್ಟಪಟ್ಟು ದುಡಿದ ಹಣ ಕೈಬಿಟ್ಟು ಹೋಗಿದ್ದಕ್ಕೆ ವ್ಯಥೆಪಡುತ್ತಾನೆ. ಸರ್ಕಾರಿ ಸಂಬಳ ತೆಗೆದುಕೊಳ್ಳುವ ವರ್ಗವು, ಹೊಲದಲ್ಲಿ ದುಡಿದು ಸಂಪಾದಿಸುವ ಮುಗ್ಧ ರೈತರನ್ನು ಶೋಷಿಸುವರು, ಸತ್ತಾಯಿಸುವರು ಇಂತಹ ಶೋಷಣೆ ಇಂದು ಕೂಡ ಮುಂದುವರಿದು ಭ್ರಷ್ಟಾಚಾರವೇ ಸರ್ವವ್ಯಾಪ್ತಿಯಾಗಿರುವುದು ಆಧುನಿಕ ಯುಗದ ದುರಂತವೇ ಸರಿ. ಇದನ್ನು ಇಲ್ಲಿಗೆ ಕೊನೆಗಾಣಿಸದಿದ್ದರೆ ದೇಶ ಉಳಿಯದು, ಜನರ ಬದುಕು ಉಳಿಯದು.

ನಾಗಮಂಗಲ ಕೃಷ್ಣಮೂರ್ತಿ ಅವರ **'ಆಕ್ರಮಣ'** ಕಥೆಯಲ್ಲಿ ಗ್ರಾಮೀಣ ಪ್ರದೇಶದಲ್ಲಿ ಅಧಿಕಾರ ಚಲಾಯಿಸುವ ಊರಿನ ಗೌಡ, ಪಟೇಲ, ಹಣಗಳಿಸಿರುವ ವ್ಯಕ್ತಿಗಳು ತಮಗೆ ಬೇಕಾದ ರೀತಿಯಲ್ಲಿ ವ್ಯವಸ್ಥೆಯನ್ನು ತಿರುಚುವುದು ವಾಸ್ತವಾಂಶಕ್ಕೆ ಹತ್ತಿರವಾಗಿದೆ. ರೈತರು ನೀರಿಲ್ಲದೆ ಏನು ಮಾಡಲು ಸಾಧ್ಯವಿಲ್ಲ. ಕಾಲುವೆ ನೀರನ್ನು ನಂಬಿದರೆ ಬದುಕು ಸಾಗುವುದಿಲ್ಲ ಎಂದು ಚಿಂತಿಸಿದರು. ಅದಕ್ಕಾಗಿ ಊರೊಟ್ಟಿನ ಕೆಲಸವೆಂದು ಹೇಳಿ ಕೆರೆಯ ಹೂಳನ್ನು ಎತ್ತುವ ಕೆಲಸಕ್ಕೆ ಕೈ ಹಾಕಿದರು. ನಾಲ್ಕು ಅಕ್ಷರ ಕಲಿತ ಹಳ್ಳಿ ಹುಡುಗರು ಕೆರೆ ಜಾಗವನ್ನು ಅಳತೆ ಮಾಡಿಸಿ ಒತ್ತುವರಿ ಆಗಿರುವ ಜಮೀನನ್ನು ಬಿಡಿಸಿ ನಂತರ ಹೂಳು ಎತ್ತುವ ಕೆಲಸ ಮಾಡುವ ಎಂದು ಹಠ ಮಾಡಿದರು. ಕೆರೆಯ ಜಮೀನನ್ನು ಒತ್ತರಿಸಿದವರು ನ್ಯಾಯಗಾರರ ನೆಂಟರು, ಪಟೇಲ ಗೌಡರ ಸಂಬಂಧಿಕರುಗಳೆ ಆಗಿದ್ದರಿಂದ ನಾಕಕ್ಷರ ಕಲಿತ ಹುಡುಗರಿಗೆ ಅಂಜುವ ಸಂದರ್ಭ ಒದಗಿ ಬರುತ್ತದೆ.

ಕೆರೆ ಒತ್ತರಿಸಿದ ಸಣ್ಣಬೋರೇಗೌಡ, ಊರ ಗೌಡ ಷಡಕ ರಂಗಸ್ವಾಮಣ್ಣ ಕೆರೆಯ ಕೆಲಬಲಗಳನ್ನು ಬಳಸಿಕೊಂಡು ಒಳ್ಳೆಯ ಕುಳಗಳಾಗಿದ್ದರು. ಹೇಗಾದರು ಮಾಡಿ ಬಡ ರೈತರ-ವಿದ್ಯೆ ಕಲಿತ ಹುಡುಗರ ಹೂಳು ಎತ್ತುವ ಕಾರ್ಯ ವ್ಯವಸ್ಥೆ ನಿಲ್ಲಿಸುವಂತೆ ಉಪಾಯ ಮಾಡಿದರು. ಮೊದಲೇ ಹೇಳಿಕೊಟ್ಟಂತೆ ಹೊಲೇರ ತಿಮ್ಮ ಹಳ್ಳಿ ಕಟ್ಟೆ ಮೇಲೆ ವಿಚಾರ ಮಾಡುತ ಕುಳಿತ ಪಟೇಲ್ರು, ಗೌಡ್ರು ಇವರ ದನಕರುಗಳಿಗೆ ಹುಲ್ಲು ತರಲು ಕೆರೆ ಬಳಿಗೆ ಹೋಗಿದ್ದ. ಅಲ್ಲಿ ಕರಿಕಲ್ಲು ಒಡಮೂಡಿತ್ತು ಮತ್ತು ರಕ್ತ ಚಿಮ್ಮುತಿತ್ತು ಎಂದು ಸುಳ್ಳಿನ ಕಥೆ ಕಟ್ಟಿದ. ಜನವೆಲ್ಲ ನಂಬುವ ಹಾಗೆ ಮಾಡಿ ಅದಕ್ಕೊಂದು ಕೆರೆಯಲ್ಲಿ ಗುಡಿಕಟ್ಟಿ ಹಬ್ಬ ಆಚರಿಸಲಾಯಿತು. ಕೆಲವರು ವ್ಯಾಪಾರದ ಜಾಗ ಮಾಡಿಕೊಂಡರು, ಕ್ರಮೇಣ ಬೇರೆ ತರಹದಲ್ಲಿ ವಾಸಸ್ಥಳ ಮಾಡಿಕೊಂಡು ಕೆರೆಯ ಜಾಗ ಉಪಯೋಗವಾಯಿತು. ಬಡ ರೈತರಿಗೆ ತಾವು ಮೋಸ ಹೋಗುತ್ತಿರುವುದು ತಿಳಿಯಲಿಲ್ಲ. ರಾಜಕೀಯ ಪುಢಾರಿಗಳು, ಕಂಟ್ರಾಕ್ಟ್‌ದಾರರು ಹಣಗಳಿಸುವ ದೃಷ್ಟಿಯಿಂದ ಕೆರೆಯಲ್ಲಿ ಬೇರೆ-ಬೇರೆ ಯೋಜನೆಗಳನ್ನು ಹಾಕಿಕೊಂಡು ಹೂಳೆತ್ತುವ ಕಾರ್ಯ ನಿಲ್ಲುವಂತೆ ಮಾಡಿದರು. ಇದರಿಂದ ಕೆರೆಯನ್ನು ನಂಬಿದ್ದ ಊರಿನ ಬಡ ರೈತರು-ದನಕರುಗಳು ಜೀವ ಬಿಡುವಂತಾಗಿತ್ತು. ನಿಜಕ್ಕೂ ಕಥೆಗಾರರು ಪ್ರಸ್ತುತ ಹಳ್ಳಿಗಳಲ್ಲಿ ನಡೆಯುತ್ತಿರೋ ನೈಜ ಘಟನೆಯನ್ನು ಸೃಜನಶೀಲವಾಗಿ ಎಣೆದಿದ್ದಾರೆ.

ನಾಗಮಂಗಲ ಕೃಷ್ಣಮೂರ್ತಿ ಅವರ ಮತ್ತೊಂದು ಕಥೆ **'ನೆಲೆಯಲ್ಲಿ'** ಸರ್ಕಾರಿ ಅಧಿಕಾರಿಗಳು ಮತ್ತು ರಾಜಕೀಯ ವ್ಯಕ್ತಿಗಳು ಬಡವರ ರಕ್ತ ಹೀರಿಯಾದರು ಲಂಚದ ಹಣವಿಲ್ಲದೆ ಕೆಲಸ ಮಾಡದೆ ಇರುವ ಸೂಕ್ಷ್ಮತೆಯನ್ನು ವಿವರಿಸಿದ್ದಾರೆ. ಕಥೆಗಾರರು ತನ್ನ ಅಜ್ಜಿಯಿಂದ ಕಥೆ ಕೇಳಿ ಸ್ಫೂರ್ತಿಗೊಂಡ ವಿಚಾರವನ್ನು ತಾವೇ ಹೇಳಿಕೊಂಡಿದ್ದಾರೆ. ಇಂತಹ 'ಯಂಕ್ಟಕ್ಕ' ಅಜ್ಜಿ ಒಂದು ಮನೆ ಕಟ್ಟಲು ಶ್ರಮಿಸಿದ ಕಥೆಯನ್ನೆ ಅವಳ ಬಾಲ್ಯದಿಂದಲೇ ತಿಳಿದುಕೊಳ್ಳುವ ಪ್ರಯತ್ನ ಮಾಡಿದ್ದಾರೆ.

ಯಂಕ್ಟಕ್ಕಳ ಗಂಡ-ಮಗ ಇಬ್ಬರೂ ಸೋಮಾರಿತನದವರು. ಒಂದು ಹಳೆ ಮನೆಯನ್ನು ಗಾರೆ ಸೀನಣ್ಣನಿಗೆ ಎರಡೂವರೆ ಸಾವಿರಕ್ಕೆ ಯಂಕ್ಟಕ್ಕನಿಗೆ ಗೊತ್ತಿಲ್ಲದೆ ಮಾರಿ ಬಿಡುತ್ತಾರೆ. ಇದನ್ನು ತಿಳಿದ ಯಂಕ್ಟಕ್ಕ ದಾಸಣ್ಣನನ್ನು ಗೊಗರೆದು ತನ್ನ ಛಲದಿಂದ ವಾಪಸ್ಸು ಪಡೆಯುತ್ತಾಳೆ. ಮಳೆ ಬಂದಾಗ ಮನೆಯಲೆಲ್ಲಾ ನೀರು ಸೋರುವುದನ್ನು ತಡೆಯಲಾರದೆ ಹೊಸ ಹೆಂಚುಗಳನ್ನು ಹಾಕಿಕೊಳ್ಳಬೇಕೆಂಬ

ವಿಚಾರ ಮಾಡುತ್ತಾಳೆ. ಸರ್ಕಾರವು ಬಡವರಿಗೆ ಮನೆ ಕಟ್ಟಿಕೊಳ್ಳಲು ಸಹಾಯ ಧನ ಕೊಡುವುದಾಗಿ ತಿಳಿದ ಯಂಕ್ಟಕ್ಕ ಮುನ್ಸಿಪಾಲಿಟಿ ಚೀಪಾಪೀಸರಿಗೆ ಅರ್ಜಿ ಕೊಡುತ್ತಾಳೆ. ಹದಿನೈದು ದಿನ ಬಿಟ್ಟುಬಾ ಎಂದು ಪ್ರತಿ ಸಾರಿಯು ಕೇಳಲು ಹೋದಾಗ ಅದೇ ಮಾತು ಹೇಳುತ್ತಾರೆ. ಅಧಿಕಾರಿ ಅಥವಾ ಸಂಬಂಧಿಸಿದ ನೌಕರ ಯಾವುದೇ ಮುಜುಗರಕ್ಕೆ ಒಳಗಾಗದೆ ನಾವು ಮೇಲಿನವರಿಗೆ, ಮೆಂಬರುಗಳಿಗೆ ಕೈ ಬೆಚ್ಚಗೆ ಮಾಡ್ದೆ ಇದ್ರೆ ನಾವು ಇಲ್ಲಿ ಉಳಿಯುವ ಆಗಿಲ್ಲವೆಂದು ವಸ್ತುಸ್ಥಿತಿಯನ್ನು ಹೇಳುತ್ತಾರೆ. ಐನೂರು ರೂಪಾಯಿ ತಂದು ಕೊಟ್ರೆ ನಿನ್ನ ಕೆಲಸ ಆಗುತ್ತೆಯೆಂದು ಹೇಳುವನು. ಇದನ್ನು ಕೇಳಿದ ಯಂಕ್ಟಕ್ಕ ದಿಕ್ಕೆಟಳು. ಅವಳ ಸಹನೆಯ ಕಟ್ಟೆಯೊಡೆದು ಬಾಯಿ ಬಡಿದುಕೊಳ್ಳುವಳು. "ಬಡವ್ರು, ಬಗ್ಗರಿಗೆ ಮನೆ ಕಟ್ಟಕ್ಕೆ ಸರ್ಕಾರ ಸಾಲಕೊಡ್ತದೆ ಅಂತವ ನೆಂಬ್ಕೊಂಡು, ಇದ್ದ ಮನೇನುವೆ ಗುಡಿಸಿ ಗುಂಡಾತರ ಮಾಡ್ಕೊಂಡು ಕುಂತಿವ್ನಿ. ಈ ನನ್ನ ಹಾಟಗಳ್ಳ, ನನ್ನಂಥ ದರಿದ್ರ ಮೂದೇವಿ ತಾವ ಲಂಚ ಕೇಳ್ತಾವ್ನಲ್ಲೋ ಸಿವ್ನೇ..... ಕೂಳಿಕಂಬ್ಳಾ ಮಾಡಿ ಗಂಜಿ ಕುಡಿಯೋರ ರಕ್ತಾನೆ ಹೀರ್ತಾ ಕುಂತವ್ನಲ್ಲೋಯಪ್ಪಾ.... ಇವನ್ಹೆಡ್ತಿ–ಮಕ್ಳು ಅದ್ಯಾಪಾಟಿ ದಿಸದಿಂದ ಹಸ್ಕಂಡು ಕುಂತಿದ್ದಾರೋ! ಬಡವಿ ದುಡ್ಡೇ ಬೇಕಾಗಿತ್ತೇ ಈ ನನ್ನ ಮಗನ ಗತಿ ವಂದ್ಸಕ್ಕೆ"(ನಾಗಮಂಗಲ ಕೃಷ್ಣಮೂರ್ತಿ, ಚಂದ್ರಸಾನಿ, ೨೦೦೭, ಪುಟ-೧೪)ಎಂದು ಇಡಿ ಶಾಪ ಹಾಕುವಳು. ಸಾಲ ಕೊಡವರೆಗು ಮನೆ ಪಾತ್ರೆಯನ್ನು ತಂದು ಕಛೇರಿಯಲ್ಲೇ ವಾಸ ಮಾಡುವುದಾಗಿ ಎಚ್ಚರಿಕೆ ಕೊಟ್ಟಳು. ಅನ್ನ ನೀರು ಇಲ್ದೆ ಪ್ರಾಣ ಬಿಟ್ಟರು ಸರಿ, ಪೋಲಿಸ್‌ನವರು–ಮಿಲ್ಟ್ರಿಯವರು ಬಂದರು ನಾನು ಇಲ್ಲಿಂದ ಜಾಗ ಕದಲುವುದಿಲ್ಲವೆಂದು ಹಠಹಿಡಿದಳು.

ಅಧ್ಯಕ್ಷರು, ಮೆಂಬರು ಬಂದು ಹೇಳಿದರೂ ಸಾಲ ಕೊಟ್ರೆ ಏಳ್ತೀನಿ ಎಂದು ಯಂಕ್ಟಕ್ಕ ನೇರ ನುಡಿದಳು. ಇಂಥ ಅಸಹಾಯಕ ಮಹಿಳೆ ಹೋರಾಟದಿಂದ ಅಸಹಾಯಕರಾದ ಸಾಹೇಬ ಅರ್ಧದಿನದಲ್ಲಿ ಸಾಲ ಮಂಜೂರು ಮಾಡಿದ. ಇಲ್ಲಿ ಬಡವಳಾದ ಯಂಕ್ಟಕ್ಕನಿಗೆ ಲಂಚದಹಣ ಕೇಳಿದರೂ ಸಹ ತನ್ನ ಹೋರಾಟದಿಂದ ಗೆದ್ದಳು. ಇಂದು ಸರ್ಕಾರಿ ಕಛೇರಿಗಳಲ್ಲಿ ಕೆಲಸ ಮಾಡಿಸಿಕೊಳ್ಳಲು ಹೋದರೆ ಜವಾನನಿಂದ–ಅಧಿಕಾರಿವರೆಗೆ ಲಂಚವಿಲ್ಲದೆ ಕೆಲಸವಾಗುವುದಿಲ್ಲ ಎನ್ನುವ ಸ್ಥಿತಿಯನ್ನು ಕಥೆಯಲ್ಲಿ ಅಭಿವ್ಯಕ್ತಿಸಲಾಗಿದೆ. ಸರ್ಕಾರಿ ಕಛೇರಿಗಳು ಲಂಚದ ಕೂಪಗಳಾಗಿ ಭ್ರಷ್ಟ ಆಡಳಿತದಿಂದ ಜನಸಾಮಾನ್ಯರ ಬದುಕು ಮೂರಾಬಟ್ಟೆಯಾಗಿರುವ ಸಂಕೇತದಂತೆ 'ನೆಲೆ' ಕಥೆ ರಚಿತವಾಗಿದೆ.

**'ಕರುಣಾಳು ಬಾ ಬೆಳಕೆ'** ಕಥೆಯಲ್ಲಿ ಗ್ರಾಮೀಣ ಬದುಕನ್ನು ಚೆನ್ನಾಗಿ ಕಂಡ ಶಿವಳ್ಳಿ ಕೆಂಪೇಗೌಡ ಅವರು ಬಡತನದ ಬವಣೆಯನ್ನು ಯಥಾಸ್ಥಿತಿಯಲ್ಲಿ ನಿರೂಪಿಸಿದ್ದಾರೆ. ಕಥೆಯಲ್ಲಿ ಬರುವ ಸೋಮು ಹಾಸಿಗೆ ಹಿಡಿದ ಅವ್ವನಿಗೆ ನೀರುಗಂಜಿ ಮಾಡಿಕೊಟ್ಟ. ತಂಗಿ-ತಮ್ಮನಿಗೆ ತಂಗಳು ಉಣ್ಣಿಸಿ, ತನಗೆ ಏನೂ ಇಲ್ಲದೆ ನೀರು ಕುಡಿದನು. ತನ್ನ ಪರಿಸ್ಥಿತಿಯನ್ನು ನೆನೆದು ಕಣ್ಣಲ್ಲಿ ಕಂಬನಿ ಹರಿಯಿತು. ಶಾಲೆಗೆ ತಡವಾಗಿ ಹೋದ ಸೋಮು ತರಗತಿಯ ಬಾಗಿಲ ಬಳಿ ನಿಂತು "ಒಳಗೆ ಬರುಬಹುದೇ ಸಾರ್? ಇದಕ್ಕೆ ಪ್ರಶ್ನೆಯಾಗಿ ಮೇಷ್ಟ್ರು ತಡವಾಗಿ ಯಾಕೆ ಬಂದೆ? ಅದ್ಸರಿ, ನಿನ್ನ ಸಮವಸ್ತ್ರ ಎಲ್ಲಯ್ಯಾ? ಎಂದು ಪ್ರಶ್ನಿಸಿದಾಗ ಸೋಮು ಸಾರ್ ನಮ್ಮಪ್ಪ ಬಸ್‌ಸ್ಟಾಂಡಿನಲ್ಲಿ ಮೂಟೆ ಹೊರುವಾಗ ಟಾಪಿನ ಮೇಲಿಂದ ಮುಗ್ಗರಿಸಿ ಕೆಳಕ್ಕೆ ಬಿದ್ದು ರಕ್ತಕಾರಿ ಪ್ರಾಣ ಬಿಟ್ಟ. ಅವರಿವರ ಮನೆಯಲ್ಲಿ ಕಸ-ಮುಸುರೆ ಕೆಲಸ ಮಾಡಿ ನಮಗೆ ಕೂಳು ಕಾಣಿಸುತ್ತಿದ್ದ ಅವ್ವ ಕಾಯಿಲೆ ಬಿದ್ದು ಕಣ್ಣೀರಿನಲ್ಲಿ ಕೊಳೆಯುತ್ತಿದ್ದಾಳೆ. ನಿತ್ರಾಣವಾಗಿರುವ ತಮ್ಮಂದಿರು, ತಂಗಿಗೆ ತುತ್ತಿಗೂ 'ಹೆಂಗಪ್ಪ' ಎನ್ನುವ ಪರಿಸ್ಥಿತಿ ಬಂದಿದೆ. ಹಾಗಿರುವಾಗ ಸಮವಸ್ತ್ರ ಎಲ್ಲಿಂದ ತರಲಿ ಸಾರ್?"(ಶಿವಳ್ಳಿ ಕೆಂಪೇಗೌಡ, ಚಮ್ಮಾವುಗೆ, ೨೦೦೮, ಪುಟ-೮)ತನ್ನ ಒಡಬಾಳನ್ನು ವಿವರಿಸಿದ, ಮೇಷ್ಟ್ರು ತರಗತಿಗೆ ಸೇರಿಸದೆ ಬಾಗಿಲಲ್ಲಿ ನಿಲ್ಲಬೇಡ ಹೊರಡು ಎಂದು ಸಿಟ್ಟಾಗಿ ಹೇಳಿದರು. ಇಲ್ಲಿ ಪಾಠ ಹೇಳುವ ಶಿಕ್ಷಕ ಬಡ ಮಕ್ಕಳ ಸಮಸ್ಯೆಯನ್ನು ಅರಿತು ತಿಳಿವಳಿಕೆ ಹೇಳಿ ವಿದ್ಯಾಭ್ಯಾಸ ಮುನ್ನಡೆಸುವ ಯಾವುದೇ ಸಲಹೆ ಕೊಡದೆ ಅಟ್ಟಿರುವುದು ಶಿಕ್ಷಕರ ವೃತ್ತಿಗೆ ಗೌರವ ತರುವ ಕೆಲಸವಲ್ಲ, ಮಕ್ಕಳ ಮನ ಸ್ಥಿತಿಯನ್ನು ಅರಿಯುವಲ್ಲಿ ಇಲ್ಲಿಯ ಶಿಕ್ಷಕ ಸೋತಿದ್ದಾರೆ. ವಿದ್ಯೆ ಕಲಿಯಲು ಬಂದ ಬಡವರ ಮಕ್ಕಳಿಗೆ ದಾರಿ ತೋರಬೇಕಾದ ಗುರುವೆ ಆತನನ್ನು ಶೋಷಣೆಗೆ ಒಳಪಡಿಸುವುದು ಕಂಡುಬರುತ್ತದೆ.

ಜನಾರ್ದನ ಜವಳಿ ಅಂಗಡಿ ಮಾಲೀಕರ ಮಗಳು 'ಸೀತೆ' ಕಾಣೆಯಾಗಿರುತ್ತಾಳೆ. ಹುಡುಕಿ ಕೊಟ್ಟವರಿಗೆ ಸೂಕ್ತ ಬಹುಮಾನ ಎಂದು ಪ್ರಚಾರ ಪಡಿಸುತ್ತಾರೆ. ಶಾಲೆಯಿಂದ ಹಿಂದಿರುಗಿದ ಸೋಮ ನೆಹರು ಮಕ್ಕಳ ಉದ್ಯಾನವನದಲ್ಲಿ ಕೂರುತ್ತಾನೆ. ಕೆಂಪುಲಂಗದ ಹೆಣ್ಣು ಮಗು ಕಿವಿಯಲ್ಲಿ ಜುಮುಕಿಗಳಿವೆ, ಕತ್ತಿನಲ್ಲಿ ನೆಕ್ಲೇಸಿದೆ. ಸೀತಾ "ಅಪ್ಪಾ!" ಎಂದು ಅಳುತ್ತಿದ್ದಾಗ ಸೋಮುವಿಗೆ ಹುಡುಕಿಕೊಟ್ಟವರಿಗೆ ಸೂಕ್ತ ಬಹುಮಾನದ ನೆನಪಾಗಿ ಸೀತಾ ಬಳಿಗೆ ಬಂದು ನಿಲ್ಲುವನು. ಕುತ್ತಿಗೆಯಲ್ಲಿ, ಕಿವಿಯಲ್ಲಿ ಬೆಲೆ ಬಾಳುವ ವಸ್ತುಗಳನ್ನು ಕಂಡು

ಸೋಮು ಇದರಿಂದ ಅವ್ವನಿಗೆ ಔಷಧಿ, ತಮ್ಮಂದಿರು ತಂಗಿಗೆ ಹೊಟ್ಟೆ ತುಂಬಾ ಅನ್ನ. ತನಗೆ ಸಮವಸ್ತ್ರ ಎಲ್ಲವು ಆಗುತ್ತದೆ ಎಂದು ಯೋಚಿಸುತ್ತಿರುವಾಗ ಸೋಮುವಿಗೆ ತನ್ನ ತಂಗಿಯ ನೆನಪು ಬಂದು ಕೆಟ್ಟ ಚಾಳಿಗೆ ಕೈ ಹಾಕಲಿಲ್ಲ. ಸೀತಾಳನ್ನು ಅವರ ತಂದೆಯ ಬಳಿ ಕರೆದುಕೊಂಡು ಬಂದು ಬಿಡುತ್ತಾನೆ. ಸಂತೋಷಗೊಂಡ ಅವರು ಸೋಮುವಿಗೆ ನೂರು ರೂಪಾಯಿಗಳನ್ನು ಕೊಡಲು ಮುಂದಾಗುತ್ತಾರೆ. ಆದರೆ ಸೋಮು ಅದನ್ನು ನಿರಾಕರಿಸಿ ಹಿಂದಿರುಗುತ್ತಾನೆ. ಕೊಡಲು ಬಂದವರನ್ನು "ಬೇಡಿ-ಬೇಡಿ" ಎಂದು ಹಿಂದಿರುಗಿ ಓಡಿಬಂದ. ಬಡತನದಲ್ಲಿ ಸೋಮುವಿಗೆ ಹೃದಯವಂತಿಕೆಯ ಸ್ವಾಭಿಮಾನದ ವ್ಯಕ್ತಿತ್ವವನ್ನು ಕಟ್ಟಿಕೊಡುವಲ್ಲಿ ಕಥೆ ಯಶಸ್ವಿಯಾಗಿದೆ. ಬಡತನವಿದ್ದರೂ, ಮೋಸ, ಸುಳ್ಳು ವಂಚನೆಗಳಿಗೆ ಆಸ್ಪದವಿಲ್ಲ ಎಂಬುದನ್ನು ಕಥೆ ಕಟ್ಟಿ ಕೊಡುತ್ತದೆ. ವಿದ್ಯೆ ಇಲ್ಲದ ಒಬ್ಬ ಸಾಮಾನ್ಯ ಹುಡುಗನಲ್ಲಿಯೂ ಪ್ರಾಮಾಣಿಕತೆ, ಒಳ್ಳೆಯ ನಡವಳಿಕೆಗಳು ಮೈಗೂಡಬಲ್ಲವು ಎಂಬುದನ್ನು ಕಥೆಯಲ್ಲಿ ಕಾಣಬಹುದು. ಆದರೆ ವಿದ್ಯೆ ಕಲಿತ ಶಿಕ್ಷಕ ವಿದ್ಯಾರ್ಥಿಯ ಶೋಷಣೆಗೆ ತೊಡಗುವುದು ಇಲ್ಲಿಯ ವೈರುದ್ಯವೆನ್ನಬಹುದು.

ಶಿವಳ್ಳಿ ಕೆಂಪೇಗೌಡರ ಮತ್ತೊಂದು ಕಥೆ **'ಒಂದು ಹಳೆಯ ಕಥೆ'**ಯಲ್ಲಿ ಶ್ರೀಮಂತಿಕೆಯ ರುದ್ರ ನರ್ತನ ಬಡವರ ಬಾಯಿಗೆ ಬೀಗ ಹಾಕಿತ್ತು. ಈ ಕಥೆಯಲ್ಲಿ ಬರುವ ಕಾಡೂರಿನ ಕೆಂಪೇಗೌಡ ಶೋಷಿತ ಮುಗ್ಧ ಹಾಗೂ ಅಸಹಾಯಕ ಜನರ ಎದೆಯನ್ನು ಬಗೆದು ಸುಖದಿಂದ ಇರುವನು. ಅಪ್ಪಟ್ಟ ಬಿಳಿ ಖಾದಿ ಬಟ್ಟೆಯಲ್ಲಿ ತೊಳೆದ ಕೆಂಡದ ಹಾಗೆ ಹೊಳೆಯುತ್ತಿದ್ದ ಕೆಂಪೇಗೌಡ ತನ್ನ ಹೆಂಡತಿ, ಮಗ, ಸೊಸೆ, ಮೊಮ್ಮಕ್ಕಳೊಡನೆ ಮಹಡಿ ಮನೆಯಲ್ಲಿ ರಾಜ ವೈಭವದಿಂದ ವಾಸಿಸುತ್ತಿದ್ದ. ಅದರ ಮಗ್ಗುಲಲ್ಲೇ ಗುಡಿಸಲು, ನಾಡ ಹೆಂಚಿನ ಮನೆಗಳು, ಕಿತ್ತು ತಿನ್ನುವ ಬಡತನ. ಸೀಮೆ ಎಣ್ಣೆಯ ಅಭಾವದಿಂದ ಹೊತ್ತು ಮುಳುಗಿ ಕತ್ತಲು ಬರುವ ಮುನ್ನವೆ ಅಟ್ಟು ಉಂಡು ಮನೆಗಳಲ್ಲಿ ಹರುಕು ಚಾಪೆಗಳ ಮೇಲೆ ಮಲಗುವ ವ್ಯವಸ್ಥೆ ಒಂದು ಕಡೆ. ಇದು ಕುವೆಂಪುರವರ 'ಕಲ್ಕಿ' ಪದ್ಯವನ್ನು ನೆನಪಿಸುತ್ತದೆ.

ಕೆಂಪೇಗೌಡನನ್ನು ಕಂಡು ನಿಂತ ಬೋರೇಗೌಡ "ಅಲ್ಲಕನ ಕೆಂಡಪ್ಪ ನನ್ನ ಕಬ್ಬು ತಕ್ಕಂಡು ಮೂರ್ತಿಂಗಳು ಮೇಲಾಯ್ತು. ದುಡ್ಡೇ ಕೊಡ್ಲಿಲ್ಲ ಕೇಳುದ್ರೆ ಇವತ್ತು ನಾಳೆ ಅಂತ ಹೇಳ್ತಿಯ" ಎಂದಾಗ ಆಶ್ಚರ್ಯಗೊಂಡ ಕೆಂಪೇಗೌಡ ಹುಚ್ಚು ಹಿಡಿದನಂಗೆ ಮಾತಾಡಬೇಡ, ಕಬ್ಬಿನ ದುಡ್ಡು ನಾಲ್ಕು ಸಾವಿರ ಅಮಾವಾಸೆ ದಿನ ನಿಮ್ಮ ಮನೆ ಹತ್ತಿರ ಕೊಟ್ಟನಲ್ಲ ಅಂತ ಸುಳ್ಳು ಹೇಳಿ ಸಾಧಿಸುತ್ತಾನೆ. ಕಣ್ಣಲ್ಲಿ ನೀರು

ತುಂಬಿಕೊಂಡ ಬೋರೇಗೌಡ "ಅಯ್ಯೋ ಸಿವ್ನೆ!" ಅಂತ ತಲೆಯ ಮೇಲೆ ಕೈ ಹೊತ್ತು ತನ್ನ ಅಸಹಾಯಕತೆಯನ್ನು ವ್ಯಕ್ತಪಡಿಸುತ್ತಾನೆ. ಇಲ್ಲಿ ಬಡವರ ರಕ್ತ ಹೀರಿ ಬದುಕುವ ಕೆಂಪೇಗೌಡನಂತವರ ಶೋಷಿಸುವ ವರ್ಗದ ಪ್ರಾಬಲ್ಯವನ್ನು ಗುರುತಿಸಲಾಗಿದೆ.

ವರ್ಗ ಸಂಘರ್ಷದ ವಿಷಯವನ್ನು ತೆಗೆದುಕೊಂಡಾಗ ಎಲ್ಲ ಕಥೆಗಾರರ ಬರಹ ಮತ್ತು ವಸ್ತು ಒಂಡೇ ತೆರನಾದ ಒಡಂಬಡಿಕೆಯಿಂತಿದೆ. ಇದು ಒಂದು ಜಿಲ್ಲೆಯ ಅಥವಾ ಮಂಡ್ಯ ಪ್ರಾದೇಶಿಕ ಲೇಖಕರ ಅನುಭವದ ಅಂತರಾಳದಲ್ಲಿ ಮೂಡಿಬಂದಿದೆ. ಅದೇ ಪಟೇಲ, ಶಾನುಭೋಗ, ವಿ.ಎ.(ಗ್ರಾಮ ಲೆಕ್ಕಾಧಿಕಾರಿ) ಶ್ರೀಮಂತ–ಬಡವ, ಬಡ್ಡಿಸಾಲ, ಶೋಷಿತವರ್ಗ, ಬಲಿಷ್ಠರ ದರ್ಭಾರು, ಸರಕಾರದ ಕಛೇರಿಗಳಲ್ಲಿ ಲಂಚದ ಹಾವಳಿ, ಚಳವಳಿ ನಾಯಕರ ಕುಮ್ಮಕ್ಕು, ಮುಗ್ಧರ ಜೈಲುಪಾಲು, ರಾಜಕೀಯ ಲಾಭ, ಬಡವರ ಕೂಗು, ಆಕ್ರೋಶ–ಹೀಗೆ ಕಥೆಗಳಲ್ಲಿ ಅಡಕವಾಗಿವೆ.

ಈಗಿನ ಪ್ರಜಾತಂತ್ರ ವ್ಯವಸ್ಥೆಯಲ್ಲಿ ಪಟೇಲ, ಶಾನುಭೋಗರ ಜಾಗಗಳಲ್ಲಿ ವಿ.ಎ.ಗಳು ಆಕ್ರಮಿಸಿದ್ದಾರೆ. ಇತ್ತೀಚೆಗೆ ವಿಧಾನಸಭಾ ಅಧ್ಯಕ್ಷರು ಗ್ರಾಮೀಣ ವಿಷಯದ ಬಗ್ಗೆ ವಿಧಾನಸಭೆಯಲ್ಲಿ ಮಾತನಾಡುತ್ತ ಇವತ್ತಿನ ವಿ.ಎ. ತಹಶೀಲ್ದಾರ್ ಇನ್ನಿತರ ಕಂದಾಯ ನೌಕರರ ಕಾರ್ಯವೈಖರಿಗೆ ಬೇಸತ್ತು ಹೇಳಿದ್ದು ಹೀಗಿದ್ದೆ: "ಇವರಿಗಿಂತ ಹಿಂದೆ ಇದ್ದ ಪಟೇಲ, ಶಾನುಭೋಗರೇ ಎಷ್ಟೋ ವಾಸಿಯಾಗಿದ್ದರು" (ಇದು ಹಿರಿಯ ಜೀವ ಕಾಗೋಡು ತಿಮ್ಮಪ್ಪನವರ ಬಾಯಿಂದ ಬಂದುದ್ದು).

ಸ್ವಾತಂತ್ರ್ಯಪೂರ್ವದಲ್ಲಿ ಗ್ರಾಮೀಣರ ಭೂ ಮತ್ತಿತರ ಸಂಬಂಧಿಸಿದ ವ್ಯವಹಾರಗಳು ಬಹುಪಾಲು ಸ್ಥಳದಲ್ಲಿಯೇ ನಡೆದುಹೋಗುತ್ತಿದ್ದವು. ಇದಕ್ಕೆ ಪ್ರಮುಖ ಕಾರಣ ಪಟೇಲ, ಶಾನುಭೋಗರು ಸ್ಥಳದಲ್ಲಿಯೇ ವಾಸಿಸುತ್ತಿದ್ದರು. ಆಗಿಂದಾಗ್ಯೆ ಅಮಲ್ದಾರರು, ಶಿರಸ್ಥೇದಾರರು ಮೇಲ್ವಿಚಾರಣೆ ನಡೆಸುತ್ತಿದ್ದರು. ಇವತ್ತು ರೈತ ತನ್ನ ಕೆಲಸಗಳಿಗೆ ಸರಕಾರಿ ಮೆಟ್ಟಿಲುಗಳನ್ನು ಹತ್ತಬೇಕು, ಇಳಿಯಬೇಕು, ಕೆಲಸ ಮಾತ್ರ ಮಂದಗತಿ. ಇವತ್ತು ರೈತರನ್ನು ಅನಗತ್ಯ ಕಾಡಿಸುತ್ತಿರುವ ವೈಖರಿಗಳನ್ನು ನೋಡಿದರೆ ಹಿಂದಿನ ಪದ್ಧತಿಯೇ ಎಷ್ಟೋ ಚೆನ್ನಾಗಿತ್ತು ಎಂದು ಹಿರಿಯ ತಲೆಮಾರಿನವರು ಅಭಿಪ್ರಾಯ ಪಡುತ್ತಾರೆ.

ತುಂಬಿಕೊಂಡ ಬೋರೇಗೌಡ "ಅಯ್ಯೋ ಸಿವ್ನೆ!" ಅಂತ ತಲೆಯ ಮೇಲೆ ಕೈ ಹೊತ್ತು ತನ್ನ ಅಸಹಾಯಕತೆಯನ್ನು ವ್ಯಕ್ತಪಡಿಸುತ್ತಾನೆ. ಇಲ್ಲಿ ಬಡವರ ರಕ್ತ ಹೀರಿ ಬದುಕುವ ಕೆಂಪೇಗೌಡನಂತವರ ಶೋಷಿಸುವ ವರ್ಗದ ಪ್ರಾಬಲ್ಯವನ್ನು ಗುರುತಿಸಲಾಗಿದೆ.

ವರ್ಗ ಸಂಘರ್ಷದ ವಿಷಯವನ್ನು ತೆಗೆದುಕೊಂಡಾಗ ಎಲ್ಲ ಕಥೆಗಾರರ ಬರಹ ಮತ್ತು ವಸ್ತು ಒಂದೇ ತೆರನಾದ ಒಡಂಬಡಿಕೆಯಿಂತಿದೆ. ಇದು ಒಂದು ಜಿಲ್ಲೆಯ ಅಥವಾ ಮಂಡ್ಯ ಪ್ರಾದೇಶಿಕ ಲೇಖಕರ ಅನುಭವದ ಅಂತರಾಳದಲ್ಲಿ ಮೂಡಿಬಂದಿದೆ. ಅದೇ ಪಟೇಲ, ಶಾನುಬೋಗ, ವಿ.ಎ.(ಗ್ರಾಮ ಲೆಕ್ಕಾಧಿಕಾರಿ) ಶ್ರೀಮಂತ–ಬಡವ, ಬಡ್ಡಿಸಾಲ, ಶೋಷಿತವರ್ಗ, ಬಲಿಷ್ಠರ ದರ್ಭಾರು, ಸರಕಾರದ ಕಛೇರಿಗಳಲ್ಲಿ ಲಂಚದ ಹಾವಳಿ, ಚಳವಳಿ ನಾಯಕರ ಕುಮ್ಮಕ್ಕು, ಮುಗ್ಧರ ಜೈಲುಪಾಲು, ರಾಜಕೀಯ ಲಾಭ, ಬಡವರ ಕೂಗು, ಆಕ್ರೋಶ–ಹೀಗೆ ಕಥೆಗಳಲ್ಲಿ ಅಡಕವಾಗಿವೆ.

ಈಗಿನ ಪ್ರಜಾತಂತ್ರ ವ್ಯವಸ್ಥೆಯಲ್ಲಿ ಪಟೇಲ, ಶಾನುಭೋಗರ ಜಾಗಗಳಲ್ಲಿ ವಿ.ಎ.ಗಳು ಆಕ್ರಮಿಸಿದ್ದಾರೆ. ಇತ್ತೀಚೆಗೆ ವಿಧಾನಸಭಾ ಅಧ್ಯಕ್ಷರು ಗ್ರಾಮೀಣ ವಿಷಯದ ಬಗ್ಗೆ ವಿಧಾನಸಭೆಯಲ್ಲಿ ಮಾತನಾಡುತ್ತ ಇವತ್ತಿನ ವಿ.ಎ. ತಹಶೀಲ್ದಾರ್ ಇನ್ನಿತರ ಕಂದಾಯ ನೌಕರರ ಕಾರ್ಯವೈಖರಿಗೆ ಬೇಸತ್ತು ಹೇಳಿದ್ದು ಹೀಗಿದ್ದೆ: "ಇವರಿಗಿಂತ ಹಿಂದೆ ಇದ್ದ ಪಟೇಲ, ಶಾನುಭೋಗರೇ ಎಷ್ಟೋ ವಾಸಿಯಾಗಿದ್ದರು" (ಇದು ಹಿರಿಯ ಜೀವ ಕಾಗೋಡು ತಿಮ್ಮಪ್ಪನವರ ಬಾಯಿಂದ ಬಂದುದ್ದು).

ಸ್ವಾತಂತ್ರ್ಯಪೂರ್ವದಲ್ಲಿ ಗ್ರಾಮೀಣರ ಭೂ ಮತ್ತಿತರ ಸಂಬಂಧಿಸಿದ ವ್ಯವಹಾರಗಳು ಬಹುಪಾಲು ಸ್ಥಳದಲ್ಲಿಯೇ ನಡೆದುಹೋಗುತ್ತಿದ್ದವು. ಇದಕ್ಕೆ ಪ್ರಮುಖ ಕಾರಣ ಪಟೇಲ, ಶಾನುಭೋಗರು ಸ್ಥಳದಲ್ಲಿಯೇ ವಾಸಿಸುತ್ತಿದ್ದರು. ಆಗಿಂದಾಗ್ಯೆ ಅಮಲ್ದಾರರು, ಶಿರಸ್ಥೇದಾರರು ಮೇಲ್ವಿಚಾರಣೆ ನಡೆಸುತ್ತಿದ್ದರು. ಇವತ್ತು ರೈತ ತನ್ನ ಕೆಲಸಗಳಿಗೆ ಸರಕಾರಿ ಮೆಟ್ಟಿಲುಗಳನ್ನು ಹತ್ತಬೇಕು, ಇಳಿಯಬೇಕು, ಕೆಲಸ ಮಾತ್ರ ಮಂದಗತಿ, ಇವತ್ತು ರೈತರನ್ನು ಅನಗತ್ಯ ಕಾಡಿಸುತ್ತಿರುವ ವೈಖರಿಗಳನ್ನು ನೋಡಿದರೆ ಹಿಂದಿನ ಪದ್ಧತಿಯೇ ಎಷ್ಟೋ ಚೆನ್ನಾಗಿತ್ತು ಎಂದು ಹಿರಿಯ ತಲೆಮಾರಿನವರು ಅಭಿಪ್ರಾಯ ಪಡುತ್ತಾರೆ.

ಇಲ್ಲಿನ ಕಥೆಗಳಲ್ಲಿ ಮುಖ್ಯ ಪಾತ್ರವೇ ರೈತ. ದುಡಿದು ನಾಡಿಗೆ ಅನ್ನಕೊಡುವ ಈತ ಸರಕಾರಿ ಕಛೇರಿಗಳಲ್ಲಿ ದೈನ್ಯದಿಂದ ಬೇಡಿಕೊಳ್ಳುವುದನ್ನು ನೋಡಿದಾಗ ಕರುಳು ಚುರುಕ್ ಎನ್ನುತ್ತದೆ. ರೈತರ ಯಾವುದೇ ಕೆಲಸ ಅವರ ಮನೆ ಬಾಗಿಲಿಗೇ ತಲುಪಬೇಕು ಎಂಬ ಸರಕಾರದ ಆದೇಶ ಕಡತದಲ್ಲಿಯೇ ಬಿದ್ದು ಕೊಳೆಯುತ್ತಿದೆ. (ಇತ್ತೀಚಿನ ವರ್ಷಗಳಲ್ಲಿ ಕಂಪ್ಯೂಟರ್ ಬಳಕೆ ಬಂದ ಮೇಲೆ ಪಹಣಿ, ಮತ್ತಿತರ ದಾಖಲೆಗಳನ್ನು ತೆಗೆದುಕೊಳ್ಳುವುದು ಸ್ವಲ್ಪ ಸುಧಾರಣೆ ಆಗಿದ್ದರೂ, ಸರಕಾರಿ ಕಛೇರಿಗಳಿಗೆ ಪದೇ ಪದೇ ಅಲೆಯುವುದು ತಪ್ಪಿಲ್ಲ.) ಈ ನಿಟ್ಟಿನಲ್ಲಿ ಬೆಸಗರಹಳ್ಳಿ ರಾಮಣ್ಣ ಅವರ 'ಚಲುವನ ಪರಂಗಿ ಗಿಡಗಳು', 'ತಾಯಿ', ಹರವು ದೇವೇಗೌಡರ 'ಮದಕ', ನಾಗಮಂಗಲ ಕೃಷ್ಣಮೂರ್ತಿ ಅವರ 'ಆಕ್ರಮಣ', 'ನೆಲೆ' ಕಥೆಗಳಲ್ಲಿ ಸರಕಾರಿ ಕಛೇರಿಗಳ ವಹಿವಾಟು, ರೈತರ ಬವಣೆ, ಬಡವರ ತೊಳಲಾಟಗಳು ಕಣ್ಣಿಗೆ ಕಟ್ಟುವಂತಿವೆ. ರಮೇಶ್‌ಹುಲ್ಲುಕೆರೆ ಅವರ 'ನೀರು' ಇದು ನಿಜಕ್ಕೂ ನೀರಿನ ರಾಜಕೀಯವನ್ನು ಹೇಳುತ್ತದೆ ರೈತ ಚಳವಳಿಯಲ್ಲಿ ಮುಗ್ಧರ ಜೈಲುಪಾಲು, ರಾಜಕಾರಣಿಗಳ ಅಥವಾ ಚಳವಳಿ ನಾಯಕರ ಸ್ವಪಾತ್ರಗಳು ಕಂಡುಬರುತ್ತದೆ.

ಇನ್ನು ಮೂಲ ವರ್ಗಸಂಘರ್ಷದ ಗಂಭೀರವಾಗಿ ರಚಿತವಾಗಿರುವ ಎಚ್.ಎಲ್. ನಾಗೇಗೌಡರ 'ಸಿದ್ಧಣ್ಣನ ಸಂಸಾರ' ಬೆಸಗರಹಳ್ಳಿ ರಾಮಣ್ಣನವರ 'ಗರ್ಜನೆ' ಗರ್ಜಿಸಿವೆ ಇದೇ ಕಥೆಗಾರರಿಂದ ರಚಿತವಾಗಿರುವ 'ಗಾಂಧಿ' ಕಥೆಯಲ್ಲಿ ಆಸ್ಪತ್ರೆಗಳಲ್ಲಿ ಬಡರೋಗಿಗಳ ಮೇಲೆ ಆಗುವ ಶೋಷಣೆ ಇವತ್ತಿಗೂ ಅಷ್ಟೇ ಜೀವಂತವಾಗಿವೆ.

ಬಡವ-ಶ್ರೀಮಂತ ವರ್ಗಗಳ ಕಥಾ ರಚನೆಗಳಲ್ಲಿ ಎಂ. ರಾಮಕೃಷ್ಣ ಅವರ 'ಚಿಕ್ಕಿಚಂದ್ರಮ', ಶಿವಳ್ಳಿ ಕೆಂಪೇಗೌಡರ 'ಕರುಣಾಳು ಬಾ ಬೆಳಕೆ' ಕ್ಯಾತನಹಳ್ಳಿ ರಾಮಣ್ಣ ಅವರ 'ಆ ಆರಾಣಿಗಳು', ಜೀ.ಶಂ. ಪರಮಶಿವಯ್ಯ ಅವರ 'ಬಾಳು ಸವೆಯುತ್ತಿದೆ' ಈ ಕಥೆಗಳು ಬಡವರ ನೋವಿನ ಕರುಣಾ ರಸದೊಂದಿಗೆ ವರ್ಗಸಂಘರ್ಷಗಳೂ ಜರುಗುತ್ತವೆ.

ಒಟ್ಟಾರೆ ವರ್ಗಸಂಘರ್ಷ, ಜಾತಿ, ಕುಲಗಳನ್ನು ಒಳಗೊಂಡು ಸಮಾಜದಲ್ಲಿನ ಸ್ವಸ್ಥ್ಯವನ್ನು ಹಾಳು ಮಾಡುವುದನ್ನು ಕಥೆಗಳು ಅರ್ಥಪೂರ್ಣವಾಗಿ ಕಟ್ಟಿಕೊಡುತ್ತವೆ. ಶೋಷಣೆ ಎಂಬುದಕ್ಕೆ ನಾನಾ ಮುಖಗಳು. ಅದು ಗಂಡು, ಹೆಣ್ಣು, ಚಿಕ್ಕವರು, ದೊಡ್ಡವರು ಎಂಬ ಬೇಧಬಾವವಿಲ್ಲದೆ ತನ್ನ ಅಟ್ಟಹಾಸವನ್ನು

ಮೆರೆಯುತ್ತದೆ. ಅದಕ್ಕೆ ಪೂರಕವಾದ ಸಾಮಾಜಿಕ ಚೌಕಟ್ಟುಗಳು ಇಂತಹ ಶೋಷಣೆಗೆ ದಾರಿಮಾಡಿಕೊಟ್ಟಿರುವುದನ್ನು ಕಥೆಗಳಲ್ಲಿ ಕಾಣಬಹುದು. ಮಂಡ್ಯ ಜಿಲ್ಲೆಯ ಸಾಮಾಜಿಕ ವ್ಯವಸ್ಥೆ ಒಂದೇ ತೆರನಾಗಿರುವುದರಿಂದ ಜಿಲ್ಲೆಯ ಕಥೆಗಾರರೆಲ್ಲರೂ ತಮ್ಮ ಕಥೆಗಳಲ್ಲಿ ತಂದಿರುವ ಇಂತಹ ಸಂದರ್ಭಗಳು ಒಂದೇ ತೆರನಾಗಿ ಕಂಡುಬರುವುದನ್ನು ಕಾಣಬಹುದು.

# ಕೌಟುಂಬಿಕ ಸಂಘರ್ಷದ ನೆಲೆಗಳು

ಮನುಷ್ಯ ಏಕಾಂಗಿಯಾಗಿ ಇರಲಾರ. ತನ್ನ ಮತ್ತು ಸಮಾಜದ ನಡುವೆ ದೊಡ್ಡ ಕಂದಕ ಇದ್ದರೂ ಕೂಡ ಆತ ಮುಖಾಮುಖಿಯಾಗುವ ಅಥವಾ ಘರ್ಷಿಸುವ ಘಟಕ ಸಮಾಜವೇ ಆಗಿರುತ್ತದೆ. ಏಕೆಂದರೆ, ಮನುಷ್ಯ ತನ್ನ ಹಿನ್ನೆಲೆಯಲ್ಲಿ ಯಾವುದನ್ನಾದರೂ ಪ್ರೀತಿಸುವುಕ್ಕಾಗಲೀ ವಿರೋಧಿಸುವುದಕ್ಕಾಗಲೀ ಒಂದು ಸಂದರ್ಭ ಬೇಕು. ಇದರಿಂದಾಗಿ ಬಹುಶಃ ಮಾನವ ಸಮಾಜಜೀವಿ ಎಂಬ ಸೂತ್ರ ಹುಟ್ಟಿಕೊಂಡಿರಬಹುದು. ಬದುಕು ವೈಯಕ್ತಿಕವಾದುದಾಗಿರಲಿ ಅಥವಾ ಸಾಮಾಜಿಕವಾದುದಾಗಿರಲಿ ಆಲೋಚನೆಯು ಅವನನ್ನು ರೂಪಿಸುವ ಹೊಣೆಗಾರಿಕೆಯನ್ನು ಹೊತ್ತುಕೊಂಡಿರುತ್ತದೆ. ಹಾಗೆ ಅದು ಒಂದು ರೂಪವನ್ನು ಪಡೆಯುತ್ತಿದ್ದಂತೆ, ಪೂರ್ಣವಾಗಿ ಅವನ ವ್ಯಕ್ತಿತ್ವವನ್ನು ಪರಿಚಯಿಸುವ ಸ್ವಭಾವವಾಗಿ ಪರಿವರ್ತನೆಯಾಗುತ್ತದೆ. ಇದರಿಂದಾಗಿ ನಾವು ಒಬ್ಬ ವ್ಯಕ್ತಿಯ ಸಾಧ್ಯತೆಯನ್ನು ವೈಯಕ್ತಿಕ, ಕೌಟುಂಬಿಕ ಮತ್ತು ಸಾಮಾಜಿಕ ಎಂಬ ಮೂರು ಸ್ತರಗಳಲ್ಲಿ ಗುರುತಿಸಿಕೊಳ್ಳುತ್ತೇವೆ.

ವೈಯಕ್ತಿಕತೆ ಅನ್ನುವುದು ವ್ಯಕ್ತಿಯ ಸ್ವಂತಿಕೆಯನ್ನು ನಿರ್ಧರಿಸುತ್ತಾದರೂ, ಆ ವೈಯಕ್ತಿಕ, ಕೌಟುಂಬಿಕ ಮತ್ತು ಸಾಮಾಜಿಕ ಎಂಬ ಮೂರು ಸ್ತರಗಳಲ್ಲಿ ಗುರುತಿಸಿಕೊಳ್ಳುತ್ತೇವೆ. ವೈಯಕ್ತಿಕತೆ ಅನ್ನುವುದು ವ್ಯಕ್ತಿಯ ಸ್ವಂತಿಕೆಯನ್ನು ನಿರ್ಧರಿಸುತ್ತಾದರು, ಆ ವೈಯಕ್ತಿಕತೆಯು ಕೌಟುಂಬಿಕ ಹಿನ್ನೆಲೆಯಲ್ಲಿ ಆಕಾರ ಪಡೆದಿರುತ್ತದೆ. ತಾಯಿ ತಂದೆಯರ ಕೌಟುಂಬಿಕ ಆಶಯವು ತನ್ನಂತೆಯೇ ಹೆಣ್ಣು-ಗಂಡಿನ ತಲೆಮಾರನ್ನು ಸೃಷ್ಟಿಸಲು ಪ್ರಯತ್ನಿಸುತ್ತದೆ. ಈ ತಲೆಮಾರು ತನ್ನ ಸ್ವಂತಿಕೆಯನ್ನು ಗುರುತಿಸಿಕೊಳ್ಳುವವರೆಗೆ, ಕೌಟುಂಬಿಕ ವರ್ತುಲದೊಳಗೇ ತನ್ನ ವ್ಯಕ್ತಿತ್ವದ ಆಶಯಗಳನ್ನು ರೂಪಿಸಿಕೊಳ್ಳುತ್ತಿರುತ್ತದೆ. ಇದರಿಂದಾಗಿ ಮನುಷ್ಯನ ಆಶಯವು ಪ್ರಧಾನವಾಗಿ ಕೌಟುಂಬಿಕತೆಯು ತನ್ನ ಅಸ್ತಿತ್ವವನ್ನು ಭದ್ರಪಡಿಸಿ ಕೊಂಡಿರುತ್ತದೆ. ವ್ಯಕ್ತಿಯು ತನ್ನನ್ನು ಗುರುತಿಸಿಕೊಳ್ಳುವ ಸ್ವಂತಿಕೆಯನ್ನು ವೈಯಕ್ತಿಕ ನೆಲೆಯಲ್ಲಿ ತೋರುತ್ತಿದ್ದಂತೆ ಅವನು ಕೌಟುಂಬಿಕ ಸ್ತರವನ್ನು ಎದುರುಗೊಳ್ಳುತ್ತಾನೆ. ಭಾರತೀಯ ಸಾಮಾಜಿಕ ಸನ್ನಿವೇಶದಲ್ಲಿ ವ್ಯಕ್ತಿಗೆ ವೈಯಕ್ತಿಕ ಆವರಣವು ಅದರ ಪೂರ್ಣಪ್ರಮಾಣದಲ್ಲಿ ಮುಖಾಮುಖಿಯಾಗುವುದಿಲ್ಲ. ಒಂದು

ಅರ್ಥದಲ್ಲಿ ಇಲ್ಲವೇ ಇಲ್ಲ ಎಂದರೂ ಸಲ್ಲುತ್ತದೆ. ಅಲ್ಲದೆ ವ್ಯಕ್ತಿಯ ಸಾಮಾಜಿಕ ಸ್ತರದ ಬೆಳವಣಿಗೆ ಕೂಡಾ ಕೌಟುಂಬಿಕ ಆಶಯಗಳನ್ನೇ ಮೂಲ ಆಕರವಾಗಿ ಇಟ್ಟುಕೊಂಡಿರುತ್ತದೆ. ಆದ್ದರಿಂದ ಭಾರತೀಯ ಪರಿಸರದಲ್ಲಿ ಕೌಟುಂಬಿಕ ಆವರಣ ಬದುಕಿನ ಪ್ರಧಾನ ಕಾಳಜಿಯಾಗಿ ರೂಪುಗೊಂಡಿದೆ. ಇತಿಹಾಸದ ದೃಷ್ಟಿಯಿಂದ ಪರಿಶೀಲಿಸಿದರೆ, ಕಾಲಾನುಗತಿಯಲ್ಲಿ ಹಲವು ವ್ಯತ್ಯಾಸಗಳನ್ನು ಗಮನಿಸಬಹುದು. ಆದರೂ ಇದರಲ್ಲಿ ಕೆಲವು ಸಾಮಾನ್ಯ ಲಕ್ಷಣಗಳಿವೆ. ವಿವಾಹ ಪದ್ಧತಿ, ಆಸ್ತಿಪಾಸ್ತಿ, ಮಕ್ಕಳ ಪೋಷಣೆ, ಕುಟುಂಬ ಸದಸ್ಯರ ಹಿತರಕ್ಷಣೆ ತಂದೆ-ತಾಯಿ, ಅಣ್ಣ-ತಂಗಿ, ಚಿಕ್ಕಪ್ಪ-ದೊಡ್ಡಪ್ಪ, ಚಿಕ್ಕಮ್ಮ-ದೊಡ್ಡಮ್ಮ, ಅತ್ತೆ-ಮಾವ-ಸೋದರಮಾವ, ಮುಂತಾದ ಭಾಂದವ್ಯಗಳು ಇರುತ್ತವೆ. ಇದರಿಂದಾಗಿ ಜೀವನದ ಆದರ್ಶಗಳು ಮತ್ತು ಸುಖ-ದು:ಖಗಳು ಅರ್ಥಪಡೆದುಕೊಂಡಿವೆ. ವೃದ್ಧರ ಪೋಷಣೆಯಂತೂ ಕುಟುಂಬಕ್ಕೆ ಸೇರಿತ್ತು.

ಇಂಥಹ ಸಂದರ್ಭದಲ್ಲಿ, ಸಾಹಿತ್ಯಿಕ ಚರ್ಚೆ ತುಂಬಾ ಕುತೂಹಲಕಾರಿ. ಸಾಹಿತ್ಯ, ಸಾಂಸ್ಕೃತಿಕ ಧೋರಣೆಗಳನ್ನು ಪ್ರತಿಬಿಂಬಿಸುವ ಸಂದರ್ಭದಲ್ಲಿ ಲೇಖಕನ ಸ್ವಂತಿಕೆಯೂ ಅಭಿವ್ಯಕ್ತಿ ಪಡೆಯುತ್ತದೆ. ಹಿಂದೆ ಹೇಳಿರುವಂತೆ ಪೂರ್ಣಪ್ರಮಾಣದ ವ್ಯಕ್ತಿಯಸ್ತರವನ್ನೇ ಪ್ರತಿಪಾದಿಸುವ ಸಾಹಿತ್ಯ ಯಾವ ಕಾಲದಲ್ಲಿಯೂ ರೂಪುಗೊಳ್ಳಲೇ ಇಲ್ಲ. ಇದಕ್ಕೆ ಹಲವಾರು ಕಾರಣಗಳಿವೆ, ಕೌಟುಂಬಿಕ ಮತ್ತು ಸಾಮಾಜಿಕವಲ್ಲದ ವ್ಯಕ್ತಿಯ ನೆಲೆಯ ಬದುಕನ್ನು ನಮ್ಮ ಸಮಾಜ ತಿರಸ್ಕರಿಸಿತು. ಇದರ ಆಶಯ ಏನಿದ್ದರೂ ಪ್ರಾಚೀನ ಋಷಿವರ್ಗಕ್ಕೇ ನಿಂತುಬಿಡುತ್ತದೆ. ಈಗ ಆ ಬಗೆಯ ಬದುಕನ್ನು ಸಮಾಜ ಅನುಮಾನದಿಂದ ಗಮನಿಸುತ್ತದೆ. ಆದರೆ ಪೂರ್ಣವಾಗಿ ಅದನ್ನು ತಿರಸ್ಕರಿಸುವುದಿಲ್ಲ. ಅದಕ್ಕೆ ಲೌಕಿಕವಾಗಿ ಗೊಂದಲದ ಬೆಂಬಲ ಇದೆ. ಇದರಿಂದಾಗಿ ಸಂಸ್ಕೃತಿಯನ್ನು ರೂಪಿಸುವ ಆಶಯಗಳು ಕೌಟುಂಬಿಕವಾಗಿರುತ್ತದೆ ಇಲ್ಲವೆ ಸಾಮಾಜಿಕವಾಗಿರುತ್ತದೆ.

ಕುಟುಂಬವು ಸಾಮಾಜಿಕ ವ್ಯವಸ್ಥೆಯ ಕೇಂದ್ರಬಿಂದು. ವಿವಾಹ ಮತ್ತು ಕುಟುಂಬ ಇವು ಭಾರತೀಯ ಸಾಮಾಜಿಕ ವ್ಯವಸ್ಥೆಗೆ ಒತ್ತಾಸೆ ನೀಡಿರುವ ಎರಡು ಪ್ರಮುಖ ಸಾಮಾಜಿಕ ಸಂಸ್ಥೆಗಳು. ಪರಂಪರಾಗತ ಅವಿಭಕ್ತ ಕುಟುಂಬವು ತನ್ನದೇ ಅನುಕೂಲತೆ ಹಾಗೂ ಅನಾನುಕೂಲತೆಗಳೊಂದಿಗೆ ಪರಿವರ್ತನೆಯ ಸುಳಿಗೆ ಸಿಲುಕಿದೆ. ಭಾರತೀಯ ಸಮಾಜದ ಒಂದು ವಿಶೇಷವೇನೆಂದರೆ, ಇಲ್ಲಿ ಅವಿಭಕ್ತ

ಕುಟುಂಬಗಳು ಹಾಗೂ ವಿಭಕ್ತ ಅಥವಾ ಕೇಂದ್ರ ಕುಟುಂಬಗಳೆಂಬ ಎರಡು ರೀತಿಯ ಕುಟುಂಬಗಳು.

ಅವಿಭಕ್ತ ಕುಟುಂಬವನ್ನು ಹಲವಾರು ರೀತಿಗಳಲ್ಲಿ ಭಾವಿಸಿದ್ದರೂ ಅಧ್ಯಯನದ ದೃಷ್ಟಿಯಿಂದ ಮಾತ್ರ ಒಂದು ವ್ಯಾಖ್ಯೆಯನ್ನು ಉಲ್ಲೇಖಿಸಬಹುದಾಗಿದೆ. ಡಾ. ಇರಾವತಿಕರ್ವೆ "ರಕ್ತ ಸಂಬಂಧಿಗಳ ಸಮೂಹವೊಂದು ಒಂದೇ ಮನೆಯಲ್ಲಿ ವಾಸಿಸುತ್ತಾ ಒಂದೇ ವಲೆಯಲ್ಲಿ ತಯಾರಿಸಿದ ಅಡಿಗೆಯನ್ನು ಸೇವಿಸುತ್ತಾ, ಆಸ್ತಿಯ ಮೇಲೆ ಸಮಾನವಾದ ಒಡೆತನವನ್ನು ಹೊಂದಿರುತ್ತಾ ಮತ್ತು ಕುಟುಂಬದ ಪೂಜಾ ಕಾರ್ಯಗಳಲ್ಲಿ ಸಾಮೂಹಿಕವಾಗಿ ಪಾಲ್ಗೊಳ್ಳುತ್ತಾ ಬರುವಂತಿದ್ದಲ್ಲಿ ಅದನ್ನು ಅವಿಭಕ್ತ ಕುಟುಂಬವೆನ್ನಬಹುದು"(ಚ.ನ.ಶಂಕರ್‌ರಾವ್, ಭಾರತೀಯ ಸಮಾಜ, ೧೯೯೯, ಪುಟ-೨೦). ಕುಟುಂಬದ ಸದಸ್ಯರ ಸಂಬಂಧ ಅವರು ರಕ್ತ ಸಂಬಂಧ ಹೊಂದಿರುವ ಆಧಾರದ ಮೇಲೆ ನಿರ್ಧಾರವಾಗುತ್ತದೆ ಎಂಬುದು ಸಮಾಜಶಾಸ್ತ್ರಜ್ಞರ ಅಭಿಪ್ರಾಯವಾಗಿದೆ.

ಕುಟುಂಬವು ಮಾನವ ಸಮೂಹ ಜೀವನದ ಆರಂಭಿಕ ನೆಲೆಗಟ್ಟು. ಸಾಮಾಜಿಕ ವ್ಯವಸ್ಥೆಯಲ್ಲಿ ಕುಟುಂಬವು ಇಡೀ ವ್ಯವಸ್ಥೆಗೆ ಸ್ಥಿರತೆಯನ್ನು ನೀಡುತ್ತದೆ. ಕುಟುಂಬವು ಶಿಥಿಲವಾಗ ತೊಡಗಿದರೆ ಅದರಿಂದ ಉಂಟಾಗಬಹುದಾದ ಸಮಸ್ಯೆಗಳು ಸಾಮಾಜಿಕ ಜೀವನದ ಮೇಲೆ ಪರಿಣಾಮವನ್ನುಂಟುಮಾಡುತ್ತದೆ. ಕುಟುಂಬ ಕಲಹಗಳು, ಗಂಡ-ಹೆಂಡಿರ ವಿರಸ, ವಿವಾಹವಿಚ್ಛೇದನ ಹಾಗೂ ವಿಶೇಷವಾಗಿ ಕಾಣಬರುವ ವರದಕ್ಷಿಣಾ ಪಿಡುಗು ಇವು ಮುಂದುವರಿದಲ್ಲಿ ಕುಟುಂಬ ಸಂಘರ್ಷಗಳು ಹೆಚ್ಚಾಗುತ್ತದೆ.

ಕೌಟುಂಬಿಕ ಸಂಘರ್ಷ ಎಂಬ ಪರಿಕಲ್ಪನೆಯು ಒಡೆದು ಹೋಗಿರುವ ಅಥವಾ ಒಡೆದು ಹೋಗುತ್ತಿರುವ ಕುಟುಂಬಕ್ಕೆ ಸಂಬಂಧಿಸಿದ್ದಾಗಿದೆ. ಸ್ವಯಂ ಸಂಪಾದನೆ, ಆಧುನಿಕ ಶಿಕ್ಷಣ ಮತ್ತು ನಾಗರೀಕತೆ, ಔದ್ಯಮಿಕ ಬೆಳವಣಿಗೆ, ದಾಯಾದಿ ಕಲಹ, ವಾರಸುದಾರಿಕೆ, ಪಾಶ್ಚಾತ್ಯ ರಾಷ್ಟ್ರಗಳಿಗೆ ಅಥವಾ ಸ್ಥಳಗಳಿಗೆ ವಲಸೆ, ಮಹಿಳೆಯರ ವಿವಾಹ ಹಕ್ಕುಗಳ ಸಂಬಂಧದ ಕಾನೂನು ಕ್ರಮಗಳು ಅವಿಭಕ್ತ ಕುಟುಂಬದ ಮೇಲೆ ಭಾರಿ ಪರಿಣಾಮ ಉಂಟುಮಾಡಿರುವುದಲ್ಲದೆ ಕೌಟುಂಬಿಕ ಸಂಘರ್ಷಕ್ಕೂ ಎಡೆಮಾಡಿ ಕೊಟ್ಟಿತು. ಕುಟುಂಬದ ಆಧಾರ ಸ್ತಂಭಗಳಂತಿರುವ ಪತಿ-ಪತ್ನಿಯರ ನಡುವಿನ ಸಂಬಂಧಗಳು ಬಿಗುವಿನಿಂದ ಕೂಡಿರುವ ಹಾಗೂ ತಾಯಿ-ತಂದೆಯರು ಮತ್ತು ಮಕ್ಕಳುಗಳ ನಡುವಿನ ತಿಕ್ಕಾಟ ಇಂತಹ ಕುಟುಂಬದಲ್ಲಿರುತ್ತದೆ. ಪತಿ-ಪತ್ನಿಯರ ನಡುವಿನ ವೈಮನಸ್ಸು,

ಮಕ್ಕಳುಗಳ ಮೇಲೆ ನಿಯಂತ್ರಣವಿಲ್ಲದಿರುವಿಕೆ, ತಾಯಿ-ತಂದೆಯರು ತಮ್ಮ ಕೌಟುಂಬಿಕ ಹೊಣೆಗಾರಿಕೆಗಳನ್ನು ನಿರ್ಲಕ್ಷಿಸಿರುವುದು ಹಾಗೂ ಅನೈತಿಕ ವ್ಯವಹಾರಗಳಲ್ಲಿ ತೊಡಗಿರುವುದು, ಮಕ್ಕಳುಗಳು ದು:ಶ್ಚಟಗಳಿಗೆ ಬಲಿಯಾಗಿರುವಿಕೆ, ಮಕ್ಕಳು ಅಥವಾ ತಂದೆ-ತಾಯಿಯರು ಕುಟುಂಬದಿಂದ ತಾತ್ಕಾಲಿಕವಾಗಿ ಅಥವಾ ಶಾಶ್ವತವಾಗಿ ದೂರ ಇರುವುದು ಈ ರೀತಿಯ ಕುಟುಂಬಗಳಲ್ಲಿ ಕೌಟುಂಬಿಕ ಸಂಘರ್ಷವನ್ನು ಗುರುತಿಸಬಹುದು. ಇಂತಹ ಕುಟುಂಬಗಳಲ್ಲಿ ಕಲಹ, ಬಿಗುವಿನ ವಾತವರಣ, ಪರಸ್ಪರ ಅವಿಶ್ವಾಸ ಹಾಗೂ ತಿರಸ್ಕಾರ, ಘರ್ಷಣೆ, ಆರ್ಥಿಕ ಮುಗ್ಗಟ್ಟು, ಅನೈತಿಕ ವ್ಯವಹಾರ ಎಲ್ಲವೂ ಇರುತ್ತದೆ. ಇಂತಹ ಕುಟುಂಬದಲ್ಲಿ ಹೊರನೋಟಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ದೈಹಿಕ ಹಿಂಸೆ, ಪರಸ್ಪರ ನಿಂದನೆ, ಗಂಡನು ಹೆಂಡತಿಯನ್ನು, ಹೆಂಡತಿಯು ಗಂಡನನ್ನು ಅಥವಾ ಇಬ್ಬರೂ ಮಕ್ಕಳನ್ನು ತ್ಯಜಿಸಿರುವುದು ಮತ್ತು ವಿವಾಹ ವಿಚ್ಛೇದನ ಮುಂತಾದವು ಎದ್ದು ಕಾಣಿಸುತ್ತದೆ.

ಮಂಡ್ಯದ ಜಿಲ್ಲೆಯ ಕುಟುಂಬ ಪದ್ಧತಿ ಅತ್ಯಂತ ಬಲಿಷ್ಠವಾದುದು. ತಲೆಮಾರಿನಿಂದಲೂ ಅವಿಭಕ್ತ ಕುಟುಂಬ ವ್ಯವಸ್ಥೆ ಬೆಳೆದು ಬಂದಿದ್ದು ಈಗಲೂ ಗ್ರಾಮೀಣ ಪ್ರದೇಶದ ಬಹುತೇಕ ಮನೆಗಳು ಅವಿಭಕ್ತ ಕುಟುಂಬಗಳಾಗಿಯೇ ಉಳಿದಿರುವುದನ್ನು ಕಾಣಬಹುದು. ಆಧುನಿಕ ನಾಗರೀಕತೆಯು ಮಂಡ್ಯ ಜಿಲ್ಲೆಯನ್ನು ಇನ್ನೂ ಸಂಪೂರ್ಣವಾಗಿ ಬದಲಾಯಿಸಿಲ್ಲ, ಸಂಬಂಧಗಳು, ಬಾಂಧವ್ಯಗಳು ಇನ್ನೂ ಜಿಲ್ಲೆಯಲ್ಲಿ ಜೀವಂತವಾಗಿವೆ. ಇಂತಹ ಸಮೃದ್ಧ ಬದುಕು ಜಿಲ್ಲೆಯ ಕಥೆಗಾರರಿಗೆ ಸಾಕಷ್ಟು ವಸ್ತುವನ್ನು ನೀಡಿದೆ. ಅವರ ಕಥೆಗಳಲ್ಲಿ ದಟ್ಟವಾದ ಕೌಟುಂಬಿಕ ಜೀವನ ಚಿತ್ರಣವಾಗಿರುವುದನ್ನು ಕಾಣಬಹುದು. ಜೊತೆಗೆ ಕುಟುಂಬದೊಳಗಿನ ಸಂಘರ್ಷಗಳೂ ಕಥೆಗಾರರ ಕಥಾ ಸಾಹಿತ್ಯದೊಳಗೆ ವಿಪುಲವಾಗಿ ಚಿತ್ರಿತವಾಗಿದೆ. ಈ ಹಿನ್ನಲೆಯಲ್ಲಿ ಮಂಡ್ಯ ಜಿಲ್ಲೆಯ ಕಥೆಗಾರರು ತಮ್ಮ ಕಥೆಗಳಲ್ಲಿ ಒಡಮೂಡಿಸಿರುವ ಕುಟುಂಬದಲ್ಲಿನ ಸಂಘರ್ಷದ ನೆಲೆಗಳನ್ನು ಕುರಿತ ವಿಷಯವನ್ನು ಪ್ರಸ್ತುತ ಅಧ್ಯಾಯದಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ, ಜಿಲ್ಲೆಯ ಪ್ರಮುಖರಾದ ಕಥೆಗಾರರ ಪ್ರಮುಖವಾದ ಪ್ರಾತಿನಿಧಿಕ ಕಥೆಗಳನ್ನು ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ.

ಎಚ್. ಎಲ್. ನಾಗೇಗೌಡ ಅವರ **'ತಪ್ಪು ಯಾರದು'**? ಎಂಬ ಕಥೆಯಲ್ಲಿ ಕಥೆಗಾರರ ಊರಿನ ಮೇಗಲಮನೆ ತಿಮ್ಮಿಯನ್ನು ಕುರಿತದ್ದು. "ತಿಮ್ಮಿ ಇಪ್ಪತ್ತೈದು

ವರುಷದ ವಿಧವೆ. ಗಂಡ ಸಾಯುವಾಗ ತುಂಬು ಬಸಿರಿ. ಈಗ ಎಂಟುವರ್ಷ ಕಳೆದುದರಿಂದ ಹುಟ್ಟಿದ ಮಗಳಿಗೂ ಎಂಟುವರ್ಷ. ಗಂಡ ಸತ್ತಾಗ ಆಕೆಯ ತಂದೆ ತಾಯಿಗಳು ಕೂಡಾವಳಿಗೆ ಒಪ್ಪಿಸುವಲ್ಲಿ ವಿಫಲವಾದರು. ಅವಳಿಗೆ ತನ್ನ ಗಂಡನಿಗೆ ದ್ರೋಹ ಬಗೆಯಲು ಇಷ್ಟವಿರಲಿಲ್ಲ. ಅವಳನ್ನು ಕಂಡರೆ ಇಂತಾ ಕಷ್ಟ ಕೊಡಬಾರ್ದು ದೇವರು"(ಎಚ್.ಎಲ್. ನಾಗೇಗೌಡ, ಕಂಡುಕೇಳದ ಕಥೆಗಳು, ೧೯೭೯, ಪುಟ-೧೮)ಎಂದು ಊರಿನವರು ಮರುಗಿದರು. ಆಕೆ ಗುಣವಂತೆ. ಇನ್ನೂ ಯುವತಿಯಾದುದರಿಂದ ಕೆಲವರ ಮನಸ್ಸು ಅವಳತ್ತ ಸೆಳೆಯುತ್ತಿತ್ತು. ಅವಳ ಪಾಡಿಗೆ ನಿರ್ಮಲವಾಗಿ ಬಾಳಲು ಜನ ಬಿಡಲಿಲ್ಲ. ಇದ್ದಕ್ಕಿದ್ದಂತೆ ತಿಮ್ಮಿಗೆ ಮೈ ಬರ ತೊಡಗಿತು. ಅದೂ ಗಂಡ ಸತ್ತ ಏಳು ವರ್ಷದ ಮೇಲೆ. 'ನಂದು ಬಾನಬಸರು' ಎಂದು ಕೇಳಿದವರಿಗೆಲ್ಲ ಬಾಯಿಕಟ್ಟಿದಳು. ಆದರೆ ಎಷ್ಟುದಿನ ಹೀಗೆ ನಿಜಾಂಶವನ್ನು ಬಚ್ಚಿಡಲು ಸಾಧ್ಯ? ಹೆರಿಗೆಯ ದಿನ. ಹುಲ್ಲುಕೊಪ್ಪಲಿಗೆ ಹೋಗಿ ಹುಟ್ಟಿದ ಮಗುವನ್ನು ಸಾಯಿಸದೆ ಒಂದು ಮಡಕೆಯಲ್ಲಿಟ್ಟು ಹುಲ್ಲು ಮುಚ್ಚಿ ತಿಪ್ಪೆಯಲ್ಲಿ ಇಟ್ಟು ಮನೆಗೆ ಬಂದುಬಿಟ್ಟಳು. ಪಟೇಲರ ಹೆಂಡತಿ ಕೆಂಪಕ್ಕ ಆಕಡೆ ಬಂದಾಗ ಮಗುವಿನ ಅಳುವಿನ ದನಿ ಕೇಳಿ ಮಗುವನ್ನು ಪತ್ತೆಹಚ್ಚಿ ನೇರವಾಗಿ ತಿಮ್ಮಿಯ ಮನೆಗೆ ಬಂದು ತನಿಖೆ ನಡೆಸಿದಳು. ಅಳುತ್ತಾ ತಿಮ್ಮಿ ಆದುದ್ದನ್ನು ಹೇಳಿಬಿಟ್ಟಳು. ತನ್ನ ಕಿರಿಯ ಮಗನೇ ತಿಮ್ಮಿಯನ್ನು ಕೆಡಿಸಿದನೆಂಬುದನ್ನು ಕೇಳಿದ ಕೆಂಪಕ್ಕ ನೇರವಾಗಿ ಮನೆಗೆ ಬಂದು ಗಂಡನಿಗೆ ನಡೆದ ವೃತ್ತಾಂತವನ್ನು ವಿವರಿಸಿದಳು. ಮಾರನೆಯ ದಿನವೇ ತಿಮ್ಮಿ ಹಾದರಗಿತ್ತಿ ಎಂದು ಊರೇ ಪಟ್ಟಕಟ್ಟಿತ್ತು. ಈ ವಿಷಯವನ್ನು ನ್ಯಾಯವಾಗಿ ಪಟೇಲರು ಪೋಲೀಸಿನವರ ಗಮನಕ್ಕೆ ತರಬೇಕಾಗಿತ್ತು. ಆದರೆ ತಿಳಿಸಲಿಲ್ಲ. ಹೇಗೋ ತಿಳಿದು ಪೋಲೀಸಿನವರು ಹಾಜರಾದರು. ಆದರೆ ಹೆಚ್ಚು ವಿಚಾರಣೆಗೆ ಅವಕಾಶ ಕೊಡದೆ ತಿಮ್ಮಿಯ ಮಾವ ಪೋಲೀಸಿನವರಿಗೆ ಭರ್ಜರಿ ಔತಣ, ನೂರು ರೂಪಾಯಿ ತೆತ್ತನು. ಮೂಗರ್ಜಿ ಬರೆದಿದ್ದ ಕೊಂಬಲ್ಲನಿಗೆ ಹತ್ತುರೂಪಾಯಿ ಕೊಟ್ಟನು. ಪೋಲೀಸಿನವರಿಂದ ಕೊಂಬಲ್ಲ ಹತ್ತುರೂಪಾಯಿ ಗಿಟ್ಟಿಸಿದ. ಅಲ್ಲಿಗೆ ವಿಚಾರಣೆ ಮುಗಿಯಿತು. ಹಣದ ಆಮಿಷದಿಂದ ತಪ್ಪು ಮಾಡಿದವನು ಶಿಕ್ಷೆಯಿಂದ ತಪ್ಪಿಸಿ ಕೊಂಡನು. ಆದರೆ ತಿಮ್ಮಿಯ ಬಾಳು ವ್ಯರ್ಥವಾಗಿ ನಾಶವಾಯಿತು. ಈ ಕಥೆಯ ಚಿತ್ರಣ ಇಂದಿನ ಪ್ರಸ್ತುತ ಸ್ತ್ರೀ ಸಬಲೀಕರಣದ ಸಂದರ್ಭದಲ್ಲಿ ಆಶ್ಚರ್ಯ ವೆನಿಸುವುದಿಲ್ಲ. ಕಾರಣ ಸಮಾಜದಲ್ಲಿ ನಡೆಯುತ್ತಿರುವ ಅತ್ಯಾಚಾರವೆಸಗುವವರು ಹಣ, ರಾಜಕೀಯದ ಪ್ರಭಾವದಿಂದ ಶಿಕ್ಷೆಯಿಂದ ಹೊರತಾಗಿ ಇರುವವರನ್ನು

ಗಮನಿಸಬಹುದು. ಹೆಣ್ಣಿನ ಶೋಷಣೆಗೆ ಆದಿ-ಅಂತ್ಯಗಳಿಲ್ಲವೆಂಬುದು ಲೇಖಕರ ಅಭಿಪ್ರಾಯವಾಗಿದೆ. ಇಲ್ಲಿ ಅವಿಭಕ್ತ ಕುಟುಂಬದ ಕ್ಷೀಣತೆಯ ಪರಿಣಾಮ ವ್ಯಕ್ತವಾಗುತ್ತದೆ. ತಿಮ್ಮಿ ತಾಯಿ-ತಂದೆಯರ ಒತ್ತಾಯದಂತೆ ಕೂಡಾವಳಿಗೆ ಒಪ್ಪಿದ್ದರೆ ಅವಳ ಕೌಟುಂಬಿಕ ವಾತಾವರಣ ಹಾಗೇ ಮುಂದುವರಿಯುವ ಅವಕಾಶವಿತ್ತು. ಅವಳ ತಾಯಿ-ತಂದೆಗೆ ಕುಟುಂಬ ಜವಾಬ್ದಾರಿಯ ಅರಿವಿತ್ತು.

ಜೀ.ಶಂ. ಪರಮಶಿವಯ್ಯ ಅವರ **'ಶನಿಯ ಕೋಪ'** ಕಥೆಯಲ್ಲಿ ಕಥೆಗಾರಿಕೆಯ ಕೌಶಲ್ಯವನ್ನು, ಸೂಕ್ಷ್ಮತೆಯನ್ನು ಹಾಗೂ ಕೌಟುಂಬಿಕ ಕಲಹವನ್ನು ಗುರುತಿಸಬಹುದು. ಶನಿಮಹಾತ್ಮೆ ನಾಟಕವಾಡುವ ದಿವಸ ಬಯಲಾದ ಬಯಲೆಲ್ಲ ತುಂಬಿ ಸೇರಿರುವ ಜನರ ಗುಂಪು ಶನಿಯ ಪಾತ್ರಧಾರಿ ರಂಗಣ್ಣನ ಮನಸ್ಸನ್ನು ಆವರಿಸಿರುವ ಒಂಟಿತನದ ಅವಸ್ಥೆಯನ್ನು ಎದುರಾಗಿಸಿ ಕಥೆ ಪ್ರಾರಂಭಗೊಳ್ಳುತ್ತದೆ. ಸರಸ್ವತಿಯ ಪಾತ್ರದ ಬಸವ ರಂಗಣ್ಣನ ಮನೆಯ ಮೈಸೂರು ಸೀರೆಯುಟ್ಟು ರಂಗಸ್ಥಳಕ್ಕೆ ಬಂದು ನರ್ತಿಸತೊಡಗಿದಾಗ, ಪಕ್ಕದಲ್ಲಿ ನಿಂತುನೋಡುತ್ತಿದ್ದ ರಂಗಣ್ಣನ ಎದೆಯಲ್ಲಿ ಝುಮು ಝುಮು ಗುಟ್ಟಿ ಗಂಡಿಸಿನ ಮೈಗೆ ಅದೆಷ್ಟು ಚೆನ್ನಾಗಿ ಒಪ್ಪುತ್ತದೆ ಆ ಸೀರೆ ಎಂದು ಉದ್ಗಾರವಾಗುತ್ತದೆ. ಆ ಉದ್ಗಾರದಲ್ಲಿ ಅವನ ವೈಯಕ್ತಿಕ ಜೀವನ ಅಭಿವ್ಯಕ್ತಿಗೊಂಡಿದೆ. ಮೂರನೇಯವರ ಚಾಡಿ ಮಾತಿನ ಕಾರಣದಿಂದ ಗಂಡ ಹೆಂಡತಿಯ ಸಂಬಂಧ ಒಡೆದು ಹೋಗಿ, ತವರು ಮನೆಯಲ್ಲಿ ಉಳಿದು ಬಿಟ್ಟಿರುವ ಹೆಂಡತಿ. ಈಗ ಈ ಸೀರೆಯನ್ನುಟ್ಟು ಬಿಟ್ಟಬಾಯಿ ಬಿಟ್ಟ ಕಣ್ಣಲ್ಲಿ ಗಂಡನ 'ಶನಿಮಾಹಾತ್ಮೆ'ನ ಪಾತ್ರವನ್ನು ನೋಡುವ, ಅದರಿಂದ ತಾನು ಹುರುಪುಗೊಳ್ಳುವ ಅವಕಾಶವಿಲ್ಲದ್ದು, ರಂಗಣ್ಣನ ನಿರುತ್ಸಾಹಕ್ಕೆ ನಿಟ್ಟುಸಿರಿಗೆ ಕಾರಣವಾಗಿದೆ.

ವಿಕ್ರಮನ ಆಸ್ಥಾನದಲ್ಲಿ ಪಂಡಿತರಿಂದ ನವಗ್ರಹಗಳ ಹೊಗಳಿಕೆ ತೆಗಳಿಕೆ ಪ್ರಾರಂಭವಾಗುವಾಗ್ಗೆ, ತನಗಾಗಿ ಪ್ರತ್ಯೇಕವಾಗಿ ಸಿದ್ಧಪಡಿಸಿದ್ಧ ರಂಗಸ್ಥಳದ ಮೇಲ್ಭಾಗದ ಅಟ್ಟವನ್ನು ಹತ್ತಿ ಕುಳಿತು ಸರಸ್ವತಿ ಪಾತ್ರಧಾರಿ ಬಸವನ ಮುಖಾಂತರ ಕುಂಬಾರರ ರುದ್ರ ನಾಟಕ ನೋಡಲು ಬಂದಿದ್ದಾನೆ ಎಂಬುದನ್ನೂ, ಅವನು ಕುಳಿತಿರುವ ಜಾಗವನ್ನೂ ತಿಳಿದುಕೊಂಡಾಗ ಹಿಂದಿನದೆಲ್ಲಾ ನೆನಪಾಗುತ್ತದೆ. ತಾನು ಮೈಸೂರಿನಿಂದ ಊರಿಗೆ ಮರಳಿದಾಗ ಎದುರಿಗೆ ಸಿಕ್ಕಿದ ಕುಂಬಾರರ ರುದ್ರ "ನಿಮ್ಮ ಅತ್ತೆ, ಮನೆಯ ದವಸ, ಧಾನ್ಯ ಮಾರಿ ದುಡ್ಡು ಮಾಡಿಕೊಂಡು ಮಗಳನ್ನು ಹೆರಿಗೆಗೆ ಕರೆದುಕೊಂಡು ಹೋದಳು"(ಜೀ. ಶಂ. ಪರಮಶಿವಯ್ಯ, ಮಬ್ಬು ಜಾರಿದ ಕಣಿವೆಯಲ್ಲಿ, ೧೯೮೮, ಪುಟ-೩೩)

ಎಂದು ಹೇಳಿದ್ದು; ತಾನು ಅಲ್ಲಿಂದಲೇ ನೇರವಾಗಿ ಅತ್ತೆಯ ಊರಿಗೆ ಹೋಗಿ ಹೆಂಡತಿಯನ್ನು ಮೂಡೆಗಟ್ಟಿಸಿದಂತೆ ಗಟ್ಟಿಸಿ, ಅತ್ತೆಯನ್ನು ಹೀನಾಮಾನಾ ಬೈದು ಊರಿಗೆ ಬಂದದ್ದು; ಆದರೆ ಮನೆಯಲ್ಲಿ ಒಂದು ಹುಲ್ಲುಕಡ್ಡಿಯೂ ಅಲುಗಾಡದೆ ಎಲ್ಲಾ ಧವಸಧಾನ್ಯವೂ ಹಾಗೆಯೆ ಇದ್ದುದ್ದು; ಕುಂಬಾರ ರುದ್ರನ ಮತ್ತು ನಸುಗುನ್ನಿಕಾಯಿ ವಿದ್ಯೆಯನ್ನು ಕಂಡು ಮಾಮಾರಿ ಸಿಟ್ಟು ಬಂದು ಅವನನ್ನು ನಿಗುರಿಸಲೆಂದು ಹುಡುಕಾಡಿದಾಗ ಅವನು ಗಂಟು ಮೂಟೆ ಕಟ್ಟಿಕೊಂಡು ಚಾಮಲಾಪುರಕ್ಕೆ ಹೊರಟು ಹೋದನೆಂಬ ಸುದ್ದಿ ಗೊತ್ತಾದದ್ದು, ತನ್ನ ಸಂಸಾರಕ್ಕೆ ಹುಳಿ ಹಿಂಡಿದ ರುದ್ರ ಇಂದು ಕಣ್ಣು ಮುಂದೆ ಕುಳಿತಿರುವುದನ್ನು ಕಂಡ ರಂಗಣ್ಣನಿಗೆ ರಕ್ತ ಕುದಿಯತೊಡುಗುತ್ತದೆ. ಆ ವೇಳೆಗೆ ಸರಿಯಾಗಿ ವಿಕ್ರಮನ ಆಸ್ಥಾನದಲ್ಲಿ ಶನಿಯ ಅವಹೇಳನ ಶುರುವಾದುದನ್ನು ಕೇಳಿಸಿಕೊಂಡ ಶನಿಯಪಾತ್ರಧಾರಿ ರಂಗಣ್ಣ 'ಎಲೆಲೇ ಮದಾಂಧನೇ ನಿನ್ನ ಸೊಕ್ಕನ್ನು ಮುರಿಯುತ್ತೇನೆ' ಎಂದು ಮಲಗಿದ್ದ ಮಕ್ಕಳು ಮರಿ ಚಿಟಾರನೆ ಚೀರಿಕೊಳ್ಳುವಂತೆ ಮುಷ್ಟಿಯಿಂದ ಗುದ್ದಿ ಗರ್ಜಿಸುತ್ತಾನೆ. ಗಾಳಿಯ ಬಡಿತಕ್ಕೆ ಕಾಲ ತುಳಿತಕ್ಕೆ ಪಕ್ಕಾದ ಅಟ್ಟಣೆ ಎತ್ತರದಲ್ಲಿದ ಶನಿಯ ಪಾತ್ರಧಾರಿ ರಂಗಣ್ಣನ ಸಮೇತ ನೆಲ ಕಾಣುತ್ತದೆ. ವಿಕ್ರಮನ ಆಸ್ಥಾನದಲ್ಲಿ ತನ್ನ ಅವಹೇಳನವನ್ನು ಕೇಳಿ ಕೋಪಗೊಳ್ಳುವ ಶನಿದೇವನ ಪ್ರಸಂಗದ ಜೊತೆಯಲ್ಲೇ, ಅದರ ಪಾತ್ರಧಾರಿ ರಂಗಣ್ಣನ ವೈಯಕ್ತಿಕ ಕೋಪ ನೇತ್ರ ಮುಟ್ಟಿ ದೊಪ್ಪನೆ ನೆಲಕ್ಕೆ ಬೀಳುವುದನ್ನು ಅಸದೃಶವಾಗಿ ಮನಗಾಣಿಸಿರುವುದು ಈ ಕಥೆಯ ವಿಶೇಷವಾಗಿದೆ.

ಜೀ.ಶಂ. ಪರಮಶಿವಯ್ಯ ಅವರ **'ಗಾಜು ಒಡೆಯಿತು'** ಕಥೆಯಲ್ಲಿ ಕೌಟುಂಬಿಕ ವ್ಯವಸ್ಥೆಯಲ್ಲಿ ಹೆಣ್ಣು ಮಗಳೊಬ್ಬಳ ಜೀವನವು ಪರರ ಇಚ್ಛೆಯಂತೆ ನಡೆಯುವುದನ್ನು ಗುರುತಿಸಬಹುದು. ಬಾಲ್ಯದಲ್ಲಿ ತಂದೆಯ ಆಶ್ರಯ, ಯೌವನದಲ್ಲಿ ಗಂಡನ ಆಶ್ರಯ, ಮುಪ್ಪಿನಲ್ಲಿ ಮಕ್ಕಳ ಆಶ್ರಯದಲ್ಲಿ ಇರಬೇಕೆಂಬ ನಾಣ್ನುಡಿ ಅಥವಾ ವ್ಯವಸ್ಥೆ ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣನ್ನು ನಿಯಂತ್ರಿಸುವ ಕಾರ್ಯ ನೆಡೆದಿದೆ. "ನಾರಾಯಣಯ್ಯ ನಿಟ್ಟುಸಿರುಬಿಟ್ಟು ಭಾವಣೆಯನ್ನು ನೋಡಿದ. ಹುಟ್ಟಿದ ಮನೆಯನ್ನು ಹೆಣ್ಣು ತೊರೆಯಲೇಬೇಕೆ? ಅದು ಸಮಾಜದ ಕಟ್ಟಲ್ಲ! ಮದುವೆಯಾಗಲೂಬೇಕೆಂದು ಅದು ನಿಯಮವನ್ನು ತಂದಿಲ್ಲ! ಆದರೂ ಮದುವೆಯಾಗಬೇಕು! ಹೆರರ ಮನೆಯನ್ನು ಬೆಳಗಬೇಕು! ಏಕೆ? ನಾರಾಯಣಯ್ಯ ತಬ್ಬಿಬ್ಬಾದ–ಉತ್ತರವನ್ನರಿತೂ ಅರಿಯದಂತೆ"(ಜೀ. ಶಂ. ಪರಮಶಿವಯ್ಯ, ಮಬ್ಬು ಜಾರಿದ ಕಣಿವೆಯಲ್ಲಿ, ೧೯೮೮, ಪುಟ-೬೨). ಹೆಣ್ಣು ಮಗಳು ತಾನು ಹುಟ್ಟಿದ ಮನೆಯನ್ನು ತೊರೆದು ಇನ್ನೊಬ್ಬರ

ಮನೆಗೆ ಸೇರುವುದನ್ನು ಸಮಾಜದ ಯಾವ ನಿಯಮವೆಂಬಂತೆ ಕಥೆಗಾರರು ಪ್ರಶ್ನಾರ್ಥಕವಾಗಿ ಗುರುತಿಸಿದ್ದಾರೆ. "ಗಂಡು! ಅವನನ್ನು ಗುಂಡಿಟ್ಟು ಕೊಲ್ಲಬೇಕು! ಕೊಲ್ಲಬೇಕು!! ಹಾ! ಅವನನ್ನು ಕೊಲ್ಲಬೇಕು!.. ಇಲ್ಲ.. ಸಮಾಜದಕಟ್ಟೇ ಸರಿ.. ಬೆಳೆದು ಬಂದ ಸಂಪ್ರದಾಯವೇ ಸರಿ! ಸರಿಯೊ! ತಪ್ಪೊ!! ಇಲ್ಲಸಲ್ಲದ ನೀರನ್ನೆಲ್ಲಾ ಸೇರಿಸಿಕೊಂಡು ಹೊನಲು ಅಲ್ಲೋಲ ಕಲ್ಲೋಲವಾಗುವಂತೆ ನಾರಾಯಣಯ್ಯನ ತಲೆ ಹೊಯ್ದಾಡಿತು. ಸರಿಯೊ! ತಪ್ಪೊ! ಅವನ ಎರಡು ಕೆನ್ನೆಗಳಿಗೂ ಬಿಗಿಯುತ್ತಿತ್ತು. ಯಾವುದೋ ಆಗೋಚರ ಶಕ್ತಿ ಹಾಗೆಯೇ ಕಣ್ಣು ಮುಚ್ಚಿದ-ಕಣ್ಣು ತೆರದ! ದಿಂಬಿಗೆ ತಲೆಕೊಟ್ಟ"(ಜೀ. ಶಂ. ಪರಮಶಿವಯ್ಯ, ಮಬ್ಬು ಜಾರಿದ ಕಣಿವೆಯಲ್ಲಿ, ೧೯೮೮, ಪುಟ-೩೩). ಈ ಕಥೆಯಲ್ಲಿ ಸಾವಿತ್ರಿಯ ತಂದೆ ನಾರಾಯಣಯ್ಯ ಹೆಣ್ಣು ಪರರ ಮನೆಯ ಆದಿ ಹಿಡಿಯಲು ಗಂಡೆ ಕಾರಣ ಎಂಬುದನ್ನು ವ್ಯಕ್ತ ಪಡಿಸುವ ರೀತಿ ಲೇಖಕರ ಅಭಿಪ್ರಾಯವಾಗಿದೆ. ನಂಜುಂಡಯ್ಯನವರ ಒಬ್ಬಳೇ ಮಗಳು ಸಾವಿತ್ರಿ ಯೌವನಕ್ಕೆ ಬಂದಾಗ ವಿದ್ಯಾವಂತನಿಗೆ ಕೊಟ್ಟು ಮದುವೆ ಮಾಡಬೇಕೆಂಬ ಆಸೆ. ಬಂದ ಗಂಡುಗಳನ್ನು ತಿರಸ್ಕರಿಸಿದ ನಂಜುಂಡಯ್ಯ ಮಗಳಿಗೆ ಹದಿನಾರು ಮುಗಿದು ಹದಿನೆಂಟನೆ ವಯಸ್ಸಿಗೆ ಕಾಲಿಟ್ಟಾಗ ಸಮಾಜದ ನಿಂದನೆಗಳಿಗೆ ಗುರಿಯಾಗಬೇಕಾಯಿತು. "ಯಾರ ಮನೇಲೂ ಇಲ್ದೇಇರೋ ಹುಡ್ಗಿ ಇವುನ್ನ ಮನೇಲ್ಯೆತ? ಎಂದು ವ್ಯಂಗ್ಯವಾಗಿ ಮೂಗುಮುರಿದರೂ ಅಂತ ಒಳ್ಳೇ ಹುಡ್ಗೀನ ಹಂಗೆಲ್ಲ ಅನ್ನಬಾರದಿತ್ತು ಎಂದುಕೊಂಡವರೇ ಹೆಚ್ಚು. ಮೈನೆರೆದ ಹುಡ್ಗಿ ಹಿಂಗೆಲ್ಲ ಮದ್ವೆಮಾಡ್ದೆ ಇಂಟ್ಕೊಂಡ್ರೆ ಇನ್ನೇನು? ಮದ್ವೆಗೆ ಬಂದ ಮಂದಿ ಮುಂದೆ ಈ ಊರ್ಗೇ ಅವಮಾನ ಇದೆಂತೆದು! ಊರಿನ ಕೆಲವು ಪೇಟದ ಪಾಳೆಯಗಾರರು ತಲೆಯೊಗೆದರು"(ಜೀ. ಶಂ. ಪರಮಶಿವಯ್ಯ, ಮಬ್ಬು ಜಾರಿದ ಕಣಿವೆಯಲ್ಲಿ, ೧೯೮೮. ಪುಟ-೯೮)ಸುದ್ದಿ ಸಾವಿತ್ರಿಯ ತಂದೆಗೆ ತಲುಪಿತು, ಅವಳ ತಾಯಿಯೂ ದುಃಖಪಟ್ಟರು. ಆದರೆ ನಾರಾಯಣ್ಯನಿಗೆ ಏನೂ ಅನ್ನಿಸಲಿಲ್ಲ.

ಸಾವಿತ್ರಿಗೆ ಹದಿನೆಂಟರ ಅಡಿಗಲ್ಲು ಕುಸಿದು ಹೋಯಿತು. ಅವಳಾಗಲೇ ದೊಡ್ಡ ಹೆಂಗಸಿನಂತೆ ಕಾಣತೊಡಗಿದಳು ಊರಿನವರಿಗೆ "ಅಯ್ಯೊ ಸಾವಿತ್ರಿ ಎಲ್ಡು ಮಕ್ಕಳ ತಾಯಿ ಕಂಡಂಗೆ ಕಾಣ್ತಾಳೆ, ಹಳ್ಳಿಯ ಹೆಂಗಸರ ಬಾಯಲ್ಲಿ ಬರುತ್ತಿದ್ದ ಒಳ್ಳೊಳ್ಳೆಯ ಮಾತು. ಆ ವರ್ಷ ಮಳೆ ಬೀಳುವುದು ಸ್ವಲ್ಪ ತಡವಾಯಿತು. ಹಾಳಾದ ಸಾವಿತ್ರಿ ಕಾರಣ ಅದೂ ಮೈನೆರ್ದ ಹುಡ್ಗಿ ಉಸರು ಕಂಡು ಮಳೆರಾಯ ಓಡೋಗವ್ನೇ"(ಜೀ. ಶಂ. ಪರಮಶಿವಯ್ಯ, ಮಬ್ಬು ಜಾರಿದ ಕಣಿವೆಯಲ್ಲಿ-೧೯೮೮. ಪುಟ-೧೦೨). ಈ

ಮಾತುಗಳು ಸಮಾಜದಲ್ಲಿ ಹೆಣ್ಣು ಮಗಳು ವಯಸ್ಸಿಗೆ ಬಂದ ಮೇಲೂ ಮದುವೆಯಾಗದೆ ಬದುಕುವುದು ಎಷ್ಟು ದುಸ್ತರವೆಂಬುದನ್ನು ಈ ಕಥೆಯಲ್ಲಿ ಕಾಣಬಹುದು. ಪ್ರಸ್ತುತ ಇಂದು ಕೂಡ ಹೆಣ್ಣು ಮಕ್ಕಳು ಅವಿವಾಹಿತವಾಗಿದ್ದರೆ ಸಮಾಜದ ನಿಂದನೆ ತಪ್ಪಿಲ್ಲ. ನಾರಾಯಣಯ್ಯ ಬೆಂಗಳೂರಿಗೆ ಹೋಗಿದ್ದಾಗ ಮನೆಯ ವಯಸ್ಸಾದ ವೃದ್ಧರು ಭಯಂಕರ ರೂಪದ, ವಯಸ್ಸಿಗೆ ಅನುಗುಣವಲ್ಲದ ತೋಳನೂರು ಚಂದ್ರಪ್ಪನವರೊಂದಿಗೆ ಸಾವಿತ್ರಿ ಮದುವೆ ನಿಶ್ಚಯ ಮಾಡಿಬಿಟ್ಟರು. ನಾರಾಯಣಯ್ಯ ಮನೆಗೆ ಹಿಂದಿರುಗಿದಾಗ 'ನನಗೀ ಮದುವೆ ಬೇಡ' ಎಂದು ಸಾವಿತ್ರಿ ತಂದೆಯ ಕಾಲಿಗೆರಗಿ ಬೇಡಿಕೊಂಡಳು. ಆದರೆ ವೃದ್ಧರ ನಿರ್ಧಾರ 'ಈ ಮದ್ವೆ ನಿಂತರೆ ಬಾವಿಗೋ ಕೆರೆಗೋ ಬಿದ್ದುಹೋಯ್ತೀವಿ' ಈ ಮಾತುಗಳಿಂದ ನಾರಾಯಣಯ್ಯ ಸಾವಿತ್ರಿಯ ಮದುವೆಯನ್ನು ಮಾಡಲೇ ಬೇಕಾಯಿತು. ತನಗಿಷ್ಟವಿಲ್ಲದ ಮದುವೆಯಾದ ಸಾವಿತ್ರಿಯ ಬಾಳು ಒಡೆದ ಗಾಜಿನಂತೆ ಎಂಬುದನ್ನು 'ಗಾಜು ಒಡೆಯಿತು' ಎಂಬ ಕಥೆಯ ಶೀರ್ಷಿಕೆ ಧ್ವನಿ ಪೂರ್ಣವಾಗಿದೆ.

ಜೀ. ಶಂ. ಪರಮಶಿವಯ್ಯ ಅವರ **'ಬುಡ ಕಡಿದ ಮೇಲೆ'** ಕಥೆಯಲ್ಲಿ ಕುಟುಂಬದ ಒಳಗೆ ಹೆಣ್ಣಿನ ಬಾಳು ಹೇಗೆ ಶೋಷಣೆಗೆ ಒಳಪಡುತ್ತದೆ ಎಂಬುದನ್ನು ವಿವರಿಸಿದ್ದಾರೆ. ಪ್ರಾಚೀನ ಸೂಕ್ತಿ 'ನಸ್ತ್ರೀ ಸ್ವಾತಂತ್ರ್ಯಂ ಅರ್ಹತಿ' ಎಂಬಂತೆ ಕಥೆಯಲ್ಲಿ ಬರುವ ಕಾಟಯ್ಯನ ಹೆಂಡತಿ ಬೀರಮ್ಮನ ಸ್ಥಿತಿಯಾಗಿದೆ. ಬಹಳ ಸೌಜನ್ಯತೆ ಉಳ್ಳ ದುಡಿಯುವ ಹೆಣ್ಣು. "ಬೀರಮ್ಮ ತಪ್ಪು ಮಾಡುವವಳಲ್ಲ. ಆದರೆ ಕೊಂಕನ್ನರಸುವ ಕಣ್ಣಿಗೆ ದೋಷ ದೊರೆಯವುದು ಅಷ್ಟೇನೂ ಶ್ರಮವಲ್ಲ. ಸಣ್ಣ ಸಣ್ಣ ತಪ್ಪಿಗೂ ಅವಳಿಗೆ ಉಗ್ರ ಶಿಕ್ಷೆ! ಗೂಟದಲ್ಲಿ ತೂಗುವ ಬಾರುಕೋಲು ಇರುವುದಾದರೂ ಏಕೆ?.. ನಡೆ.. ನುಡಿ ತಪ್ಪಿ ನಡೆಯುವ ಹೆಂಗಸಿಗೆ ಬುದ್ಧಿ ಕಲಿಸಲಿಕ್ಕಲ್ಲವೆ? ಅವಳು ಗಂಡನ ನೆರಳನ್ನು ಕಂಡರೆ ಗಡಗಡನೆ ನಡುಗಬೇಕು. ಅವನೆದುರು ಸಲಿಗೆಯಾಗಿ ಮಾತಾಡಬಾರದು, ಇದೆಂತಹ ನಿಷ್ಠೆಯ ಬಾಳು ಅವಳ ಪಾಲಿಗೆ!"(ಜೀ. ಶಂ. ಪರಮಶಿವಯ್ಯ, ಮಬ್ಬು ಜಾರಿದ ಕಣಿವೆಯಲ್ಲಿ, ೧೯೮೮, ಪುಟ-೧೨೫). ಈ ಸಂದರ್ಭವು ಗಂಡ ಹೆಂಡತಿಯ ಮೇಲೆ ಹಿಡಿತದಲ್ಲಿಡುವ ವ್ಯವಸ್ಥೆಯನ್ನು ತೋರುತ್ತದೆ. ಮೂಕ ಪ್ರಾಣಿಯಂತೆ ಕಾಟಯ್ಯನ ವರ್ತನೆಯನ್ನು ಹೆಂಡತಿ ಬೀರಮ್ಮ ಸಹಿಸಿಕೊಳ್ಳುವ ಸ್ವಾಭಾವದವಳು.

ಚೀರಮ್ಮ ತನ್ನ ತವರನ್ನು ನೋಡಿ ಎರಡು ವರ್ಷಗಳು ಕಳೆದವು. ಚೀರಮ್ಮನ ತಾಯಿ ಮಗಳನ್ನು ಕರೆದುಕೊಂಡು ಹೋಗಲು ಕಾಟಯ್ಯನ ಒಪ್ಪಿಗೆಯನ್ನು ಪಡೆಯಲು ಬಂದಿದ್ದರು.

"ಹಾಗಲೇ ಗೂಬೆ..ಮಾತಾಡೆ..? ಬೆಚ್ಚಿದಳು ಚೀರಮ್ಮ ಕೇಳಿಸ್ಲಿಲ್ವ ಕಿವೀ..ಹ್ಞಾ.. ಏ ಮಾರಿ!.. ಏನೂ ಕಾಣ್ದ ಮಳ್ಳಿ ಹಂಗೆ ಅಂತೀಯ.. ಹೋಯ್ತೀಯ ನಿಮ್ಮೂರ್ಗೆ..? ನನ್ನ ಕೇಳಿದ್ರೆ..? ಧೈರ್ಯಮಾಡಿ ನುಡಿದ ಮಾತು"(ಜೀ. ಶಂ. ಪರಮಶಿವಯ್ಯ, ಮಬ್ಬು ಜಾರಿದ ಕಣಿವೆಯಲ್ಲಿ, ೧೯೮೮. ಪುಟ-೧೨೩).

'ಇನ್ನಾರುನ್ನ ಕೇಳಬೇಕು.. ಅದೇನು ನಿನ್ನಿಷ್ಟ ಬೊಗ್ಳು' ಎನ್ನುವ ಕಾಟಯ್ಯನ ಧ್ವನಿಯು ಮೂಕ ಪ್ರಾಣಿಗಳನ್ನು ನಡೆಸುಕೊಳ್ಳುವ ರೀತಿಯಲ್ಲಿ ತನ್ನ ಹೆಂಡತಿಯನ್ನು ಕಾಣುತ್ತಿದ್ದನು. ಶತಮಾನಗಳಿಂದ ಹೆಣ್ಣನ್ನು ಶೋಷಿಸುತ್ತಿರುವುದು ಅಮಾನವೀಯವಾಗಿದೆ. ಕಥೆಗಾರರು ಕೌಟುಂಬಿಕ ಸಂಘರ್ಷದಲ್ಲಿ ಹೆಣ್ಣೇ ಗುರಿಯಾಗುವುದುದೆಂದು ನಿರೂಪಿಸುವಲ್ಲಿ ವಾಸ್ತಂಶತೆಗೆ ಹತ್ತಿರವಾಗಿದೆ.

ಚೀರಮ್ಮ ಗರ್ಭಿಣಿಯಾದ ನಂತರ ಕಾಟಯ್ಯನಲ್ಲಿ ಬದಲಾವಣೆ ಕಂಡು ಬಂತು. ಹೆಂಡತಿಯನ್ನು ತವರಿಗೆ ಕಳುಹಿಸುವ ಮನಸ್ಸು ಮಾಡಿದನು. ಇದೇ ಸಂದರ್ಭದಲ್ಲಿ ಕಾಟಯ್ಯನ ತಂದೆ ಮರಿಯಯ್ಯ 'ಯಾಕೆ ಊರ್ಗೆ? ಪದೇಪದೇ ಅದೇ ಕೆಲ್ಸ.. ಹೋಗಿಬಂದು ಇನ್ನೂ ತಿಂಗಳು ತುಂಬಿಲ್ಲ', 'ಅಯ್ಯೋ!' ಅಲ್ಲೇ, ಕುಳಿತಿದ್ದ ಹಾಲಮ್ಮ ಗಕ್ಕನೆ ಮೇಲೆದ್ದು ಮುದುಕನ ಬಾಯನ್ನು ಮುಚ್ಚಿದಳು. ಈ ದೃಶ್ಯವನ್ನು ಕಾಟಯ್ಯ ನೋಡುತ್ತಲೆ ಸತ್ಯವನ್ನು ತಿಳಿಯುವ ಪ್ರಯತ್ನ ಮಾಡಿದನು. ಕಾಟಯ್ಯನ ತಾಯಿ ಹಾಲಮ್ಮ ಒತ್ತಾಯಗೊಳಿಸಿ ಯಡಿಯೂರು ಜಾತ್ರೆಗೆ ಹೋಗಿದ್ದಾಗ, ತವರು ಮನೆಗೆ ಚೀರಮ್ಮನನ್ನು ಕಳುಹಿಸಿದ್ದಳು. ಇದು ಕಾಟಯ್ಯನಿಗೆ ತಿಳಿದಿರಲಿಲ್ಲ. ಸತ್ಯ ತಿಳಿದ ಕಾಟಯ್ಯ ರಾಕ್ಷಸನಂತೆ ವರ್ತಿಸಿ ಒಲೆ ಮುಂದೆ ಕುಳಿತ್ತಿದ್ದ ಚೀರಮ್ಮನ ಮೇಲೆ ಎರಗಿದ. ಹಾಲಮ್ಮ ಸೊಸೆಯನ್ನು ರಕ್ಷಿಸಲು ಹೋಗಿ ಕಾಟಯ್ಯನ ಭೀಕರ ವರ್ತನೆಯನ್ನು ನೋಡಿ ಮೂರ್ಛೆಗೊಂಡಳು. ಸುಟ್ಟ ಗಾಯಗಳಿಂದ ಚೀರಮ್ಮ ಸಾವನ್ನಪ್ಪಿದಳು.

ಗರ್ಭಿಣಿ ಹೆಂಗಸನ್ನು ಸುಡಬೇಕು ಎಂದು ಊರಿನವರು ಎಷ್ಟೇ ಹೇಳಿದರೂ ಕಾಟಯ್ಯ ಕೇಳಲಿಲ್ಲ. ತೆಂಗಿನ ಸಸಿಯ ಕೆಳಗೆ ಚೀರಮ್ಮನನ್ನು ಹೂಳಿದ್ದಾಯ್ತು. "ಅವಳ ತೋಟ ಸ್ವಾಮಿ ಇದು ಇದ್ಕೆ ನನ್ನ ಕೈಯಿಂದ್ಲೇ ನೀರೆರಿಬೇಕು ಇಲ್ಲಿ ಬೆಳೆದ ಏನ್ನೂ ನಾವು ಉಪಯೋಗಿಸಾಕಿಲ್ಲ ದಾನಧರ್ಮ ಮಾಡಿಬುಡ್ತೀನಿ ಸ್ವಾಮಿ ನನಗೆ

ಬುಡಕಡ್ದಮ್ಯಾಲೆ ಬುದ್ಧಿ ಬಂತು.. ಈಗಲೂ ಅವಳ್ನ ನೆನುದ್ರೆ ಎದೆ ನಡುಗ್ತದೆ, ಕರಳು ಕಿವಿಚ್ಕೊಳಂಗಾಯ್ತದೆ ನಂಗೆ, ಬೇರೆ ಮದ್ವೆ ಇಲ್ಲ! ನಾ ಆಗ್ನೂ ಇಲ್ಲ"(ಜೀ. ಶಂ. ಪರಮಶಿವಯ್ಯ, ಮಬ್ಬು ಜಾರಿದ ಕಣಿವೆಯಲ್ಲಿ, ೧೯೮೮, ಪುಟ-೧೩೩). ಈ ಸಂದರ್ಭದಲ್ಲಿ ಕಾಟಯ್ಯನ ನುಡಿಗಳು ಕಥೆಗಾರರಿಗೆ ಬೆಚ್ಚಿ ಬೀಳುವಂತೆ ಮಾಡಿತು. ಕಥೆಗಾರರು ಕಥೆಯನ್ನು ಕೇಳಿದ ಹಾಗೇಯೆ ವಿವರಿಸಿದ್ದಾರೆ. ಕಾಟಯ್ಯ ಹೆಂಡತಿ ಸತ್ತ ಮೇಲೆ ಪರಿವರ್ತನೆಯಾದ. ನೊಂದಜೀವ ಸತ್ತ ಬೀರಮ್ಮನಿಗೆ ಯಾವ ಪ್ರಯೋಜನವಿಲ್ಲ. ಇದು ಕೇವಲ ಬೀರಮ್ಮನಿಗೆ ಸೀಮಿತವಲ್ಲ. ಪ್ರಸ್ತುತ ಸಮಾಜದಲ್ಲಿ ಪುರುಷ ದೌರ್ಜನ್ಯದಿಂದ ಲೆಕ್ಕವಿಲ್ಲದಷ್ಟು ಹೆಣ್ಣು ಮಕ್ಕಳು ಜೀವಂತ ಸಮಾಧಿಯಾಗುತ್ತಿದ್ದಾರೆ. ಇದೊಂದು ಕೌಟುಂಬಿಕ ದೌರ್ಜನ್ಯ. ೨೦-೨೧ನೇ ಶತಮಾನದಲ್ಲಿ ಸ್ತ್ರೀ ಸಬಲೀಕರಣದ ಹಾದಿಯನ್ನು ಕಂಡಾಗ್ಯೂ ಹೆಣ್ಣು ಶೋಷಣೆಯಿಂದ ಮುಕ್ತಗೊಂಡಿಲ್ಲ. 'ಮಮತೆಯ ಜೀವ' ಕಥೆಯಲ್ಲಿ ಸಾಂಸಾರಿಕ ಬದುಕಿನ ತಂದೆ ಮಕ್ಕಳ ನಡುವಿನ ಕಥೆ-ವ್ಯಥೆಯನ್ನು ತಿಳಿಸುತ್ತದೆ. ಈ ಕಥೆಯಲ್ಲಿ ಬರುವ ಸಿಳ್ಳಾ ಬಡ ಮುದುಕ. ಸಿಳ್ಳನಿಗೆ ಜೋಗಿಯೆಂಬ ಮಗನಿದ್ದ. ತನ್ನ ದುಡಿಮೆಯನ್ನು ಸಂಗ್ರಹಿಸಿ ಮಗನಿಗೆ ಮದುವೆ ಮಾಡಿದ್ದ. ಸಿಳ್ಳನ ಮಗ ಹೆಂಡತಿಯೊಂದಿಗೆ ಸೇರಿ ತಂದೆಯನ್ನು ಹೊರ ಹಾಕಿ, "ನನಗೆ ಅವನು ಅಪ್ಪನೇ ಅಲ್ಲ" ಎಂದು ಜೋಗಿ ಹೇಳಿದನು. ಈ ವಿಚಾರವಾಗಿ ಅವರೂರಿನವರನ್ನೇ ಕೇಳಿದಾಗ "ಅಯ್ಯೋ ಮಕ್ಳು ಮಕ್ಳು ಅಂತ ಬಡ್ಕೊತೀವಿ ಯಾಕೆ ಬೇಕು! ಆ ಮುದ್ಕ ಹೊಟ್ಟೆಗಿಲ್ದೆ ಅಲ್ಲಿ ಸಾಯ್ತಾನೆ ಆ ಮಗ ಅನ್ನೊ ಬೊಡ್ಡಿ ಮಗ ಹೆಂಡ್ತಿ ಕಟ್ಕೊಂಡು ಸುಕ್ವಾಗವ್ನೆ. ಅವುಂಗೆ ಅಂತಿಂತೆ ನರ್ಕ ಸಿಕ್ತದ?" (ಜೀ. ಶಂ. ಪರಮಶಿವಯ್ಯ, ಮಬ್ಬು ಜಾರಿದ ಕಣಿವೆಯಲ್ಲಿ-೧೯೮೮. ಪುಟ-೫೨). ಮಕ್ಕಳ ಮೇಲಿನ ವ್ಯಾಮೋಹ ವೃದ್ಧಾಪ್ಯದಲ್ಲಿ ಇರುವುದಿಲ್ಲ. ಕಾರಣ ಆಶ್ರಯ ಕೊಡುವ ಮಕ್ಕಳೇ ತಂದೆ ತಾಯಿಗಳನ್ನು ಅನಾಥರನ್ನಾಗಿ ಮಾಡುತ್ತಾರೆ.

ಸಿಳ್ಳಾ ಮಗನಿಂದ ದೂರವಿದ್ದರೂ ಮೊಮ್ಮಗನೆಂದರೆ ಬಹಳ ಪ್ರೀತಿ. ಪ್ರತಿ ದಿನ ಅವನೊಡನೆ ಚಿಕ್ಕ ಮಕ್ಕಳಂತೆ ಆಟವಾಡಬೇಕು. ಇದರಿಂದ ಸಿಳ್ಳಾನಿಗೆ ಜೀವನದ ಪರಮ ಸಂತೋಷವೆ ಸಿಕ್ಕಿದಂತೆ ಇರುತ್ತಾನೆ. ಅವರಿಬ್ಬರ ಹೃದಯವನ್ನು ಬೆಸೆದಿರುವುದು ಅದ್ಭುತ ಶಕ್ತಿಯೇ ಸರಿ. ಒಮ್ಮೆ ಸಿಳ್ಳ ಮೊಮ್ಮಗ ಬರದೆ ಇರುವುದನ್ನು ಕಂಡು ಮನಸ್ಸಿನ ಕಾತರ ಹೆಚ್ಚಿತು. ಮಗನ ಮನೆಗೆ ಸತ್ತರು ಸುಳಿಯುವುದಿಲ್ಲವೆಂದು ಹಿಂದೆ ಛಲ ತೊಟ್ಟಿದ್ದವನು, ಇಂದು ಮೊಮ್ಮಗನಿಗಾಗಿ ಮಾತು ಮುರಿಯಬೇಕಾಯಿತು. ಸಿಳ್ಳ ಮೊಮ್ಮಗ 'ಯಂಕ್ಟ'ನನ್ನು ಕರೆದಾಗ ಬರದೆ

ಇರುವುದನ್ನು ಕಂಡು ಗಾಬರಿಯಾದ. ಯಂಕ್ಟನಿಗೆ ಜ್ವರ ಬಂದಿರುವುದಾಗಿ ಸೊಸೆ ತಿಳಿಸಿದಾಗ ಔಷಧಿ ಕೊಡಿಸಲು ಸಿಳ್ಳ ಲಿಂಗಯ್ಯನವರಲ್ಲಿ ಸಾಲ ಮಾಡಿದ. ಮೊಮ್ಮಗನಿಗಾಗಿ ಸಾಲ ಮಾಡಿದ ಸಿಳ್ಳ ಸಾಲ ತೀರಿಸಲು ತನ್ನ ಪ್ರಯತ್ನ ಮಾಡಿದ. ಬಿದರು ಮರಗಳನ್ನು ಮಾರಲು ಹೋದಾಗ ಧಾನ್ಯ ಕೊಟ್ಟು ತೆಗೆದುಕೊಳ್ಳುವರೆ ಹೊರತು ಹಣಕ್ಕೆ ತೆಗೆದುಕೊಳ್ಳಲಿಲ್ಲ. ಸಿಳ್ಳ ಲಿಂಗಯ್ಯನವರ ಸಾಲ ತೀರಿಸಲು ಸಾಧ್ಯವಾಗದೆ ಮಗನ ಬಳಿ ಮೊಮ್ಮಗ ಯಂಕ್ಟ ಕಾಯಿಲೆ ಬಿದ್ದಾಗ ಖರ್ಚು ಮಾಡಿದ್ದನ್ನು ಹೇಳಿದರೂ ನಂಬದೆ ತಂದೆಯನ್ನು ಮನೆಯಿಂದ ಆಚೆ ತಳ್ಳಿದ. ಹಣದ ಮೌಲ್ಯವು ರಕ್ತ ಸಂಬಂಧಗಳನ್ನೇ ಮುರಿಯುತ್ತದೆ. ಸ್ವಾರ್ಥ, ವೈಯಕ್ತಿಕ ಆಸೆಗಳಿಗೆ ಹೆತ್ತವರನ್ನು ಮರೆಯುತ್ತಿರುವುದು ಸಾಮಾನ್ಯವಾಗಿದೆ. ವೃದ್ಧಾಶ್ರಾಮಗಳ ಸಂಖ್ಯೆ ಹೆಚ್ಚುತ್ತಿರುವುದು ಇದಕ್ಕೆ ಉದಾಹರಣೆಯಾಗಿದೆ.

ಡಿ. ಲಿಂಗಯ್ಯ ಅವರ **'ಕುಲದೀಪಕ'** ಕಥೆಯಲ್ಲಿ ತನ್ನ ಹೆಸರು ಉಳಿಸಿ ವಂಶ ಬೆಳೆಸುವಂತಹ ಕುಲದೀಪಕನಿಗಾಗಿ ಹಂಬಲಿಸಿದ ತಿಪ್ಪನ ಬದುಕು ದುರಂತದಲ್ಲಿ ಪರ್ಯವಸನವಾಗುವುದನ್ನು ಮನಮುಟ್ಟುವಂತೆ ಚಿತ್ರಿಸುತ್ತದೆ. ತಿಪ್ಪ, ತಾಯಿತಂದೆ ಯಾರೂ ಇಲ್ಲದ ಅನಾಥ. ಊರಿನವರ ದಯೆಯಿಂದ ಒಂದು ಹೆಣ್ಣು ತಿಪ್ಪನ ಕೈಹಿಡಿದು ಗರ್ಭವತಿಯಾದರೂ ಕಾಲರ ಆವರಿಸಿ ಮೂರು ವರ್ಷಗಳ ಹಿಂದೆ ಸತ್ತುಹೋಗುತ್ತಾಳೆ. ಹೀಗಾಗಿ ತಿಪ್ಪನಿಗೆ ಕುಲದೀಪಕನ ಕನಸು ಮಣ್ಣಾಗಿ ಜೀವನ ಬೇಸರ ಹುಟ್ಟಿಸುತ್ತದೆ. ಕಳೆದ ಮೂರು ವರ್ಷದಿಂದ ತಿಪ್ಪ ಒಂಟಿಯಿದ್ದರೂ ಊರಿನವರಿಂದ ಮತ್ತೊಂದು ಬಾರಿ ಮದುವೆ ಪ್ರಸ್ತಾಪದ ಯಾವ ಸೂಚನೆಯೂ ಕಂಡುಬರುವುದಿಲ್ಲ. ಇದು ಅನಾಥನೊಬ್ಬನಿಗೆ ಹಲವು ಬಾರಿ ಕೈಜೋಡಿಸಲಾರದ ಊರಿನ ಮನಸ್ಥಿತಿಯನ್ನು ವ್ಯಕ್ತಪಡಿಸುತ್ತದೆ. ತಿಪ್ಪನೇ ಸ್ವತಃ ಸಂತೆಯಲ್ಲಿ ಭೇಟಿಯಾದ ಚೆಲುವಿ ಎಂಬ ಹೆಣ್ಣೊಂದನ್ನು ಕೈಹಿಡಿಯುತ್ತಾನೆ. ಅವಳ ಹೊಟ್ಟೆಯಲ್ಲಿ ಒಬ್ಬ ಮಗ ಜನಿಸಿದಾಗ ತಿಪ್ಪನ ಸಂತೋಷಕ್ಕೆ ಮೇರೆಯೇ ಇಲ್ಲದಾಗುತ್ತದೆ. ನಂತರದ ದಿನಗಳಲ್ಲಿ ಹೆಂಡತಿ ಚೆಲುವಿ ಪ್ಲೇಗ್ ಮಾರಿಗೆ ಆಹುತಿಯಾಗುತ್ತಾಳೆ. ಕೊನೆಗೆ ಮಗ ಶಂಕರನೂ ಕಾಲುವೆಗೆ ಬಿದ್ದು ಸತ್ತುಹೋದಾಗ ತಿಪ್ಪನ ಬದುಕು ನೀರಸವಾಗುತ್ತದೆ.

ತಂದೆ ತಾಯಿಯನ್ನು ಕಳೆದುಕೊಂಡು ಕರಾಳ ಬದುಕನ್ನು ಅನುಭವಿಸುವ ಎಲ್ಲ ಹೆಣ್ಣುಮಕ್ಕಳ ಪ್ರತಿನಿಧಿಯಾಗಿ ಚೆಲುವಿ ಕಾಣಸಿಕೊಳ್ಳುತ್ತಾಳೆ. ಭರತಭೂಮಿ ಯಲ್ಲಿ ಹೆಣ್ಣಾಗಿ ಹುಟ್ಟುವುದೊಂದು ಶಾಪ ಎನ್ನುವ ಪರಿಸ್ಥಿತಿ ಸ್ವಾತಂತ್ರ್ಯೋತ್ತರ

ಕಾಲದಲ್ಲಿ ಹೆಚ್ಚು ಜೀವಂತವಾಗಿದೆ. ವರದಕ್ಷಿಣೆಯ ಭೂತ ಬೃಹದಾಕಾರವಾಗಿ ತನ್ನ ಬಾಹುಗಳನ್ನು ಚಾಚಿದ್ದೇ ಇದಕ್ಕೆ ಕಾರಣವಾಗಿದೆ. ಈ ಹಿನ್ನೆಲೆಯಲ್ಲಿ ಚೆಲುವಿಯ ಬದುಕೇ ಚೆಲ್ಲಾಟವಾಗುತ್ತದೆ. ಹೆತ್ತವರನ್ನು ಕಳೆದುಕೊಂಡ ಚೆಲುವಿ ಅಣ್ಣನ ನೆರಳಿನಲ್ಲಿ ಬದುಕಬೇಕಾಗುತ್ತದೆ. ದುರಂತವೆಂದರೆ ಸ್ವಂತ ಅಣ್ಣ ಮತ್ತು ಅತ್ತಿಗೆಯರು ಚೆಲುವಿಯನ್ನು ಮದುವೆ ಮಾಡಬೇಕಾಗುತ್ತದೆ ಎಂಬ ಏಕೈಕ ಕಾರಣದಿಂದ ಆಕೆಗೆ ಚಿತ್ರಹಿಂಸೆ ನೀಡಿ ಮನೆಯಿಂದ ಹೊರಗಟ್ಟುತ್ತಾರೆ. ಇದು ಹೆಣ್ಣಿಗೆ ಪವಿತ್ರಸ್ಥಾನ ನೀಡಿದ ಭರತಭೂಮಿಯಲ್ಲಿ ನಡೆಯುವಂಥ ಒಂದು ದೊಡ್ಡ ವಿಪರ್ಯಾಸವಾಗಿದೆ.

ತಿಪ್ಪನ ಬದುಕಿನ ಒಂದು ದೊಡ್ಡ ಉದ್ದೇಶವೆಂದರೆ ತನ್ನ ಹೆಸರು ಉಳಿಸಿ, ವಂಶ ಬೆಳೆಸುವಂಥ ಮಗನನ್ನು ಪಡೆಯಬೇಕೆಂಬುದೇ ಆಗಿದೆ. ಈ ಹಂಬಲ ಪ್ರತಿಯೊಬ್ಬ ಭಾರತೀಯನದೂ ಆಗಿದೆ ಎಂಬುದನ್ನು ಗಮನಿಸಬೇಕು. ಯಾಕೆ ಈ ದೇಶದ ಜನ ಗಂಡು ಸಂತಾನಕ್ಕಾಗಿ ಇಷ್ಟೊಂದು ಹಂಬಲಿಸುತ್ತಾರೆ ಎಂಬ ಪ್ರಶ್ನೆಗೆ ಇಲ್ಲಿ ಉತ್ತರವಿದೆ. ಈ ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣುಮಕ್ಕಳು ವಯಸ್ಸಿಗೆ ಬಂದಮೇಲೆ ಗಂಡನ ಮನೆಗೆ ಹೊರಟುಹೋಗುತ್ತಾರೆ. ಮಗ ಒಬ್ಬನೇ ತಾಯಿತಂದೆಯರ ಹತ್ತಿರ ಕೊನೆಯತನಕ ಇರುವಂತಹವನು; ಮುಪ್ಪಿನ ಕಾಲದಲ್ಲಿ ಅವರನ್ನು ಕಣ್ಣಲ್ಲಿ ಕಣ್ಣಿಟ್ಟು ಸಾಕುವಂತಹವನು. ಅಲ್ಲದೆ, ತಂದೆತಾಯಿ ಸತ್ತಾಗ ಕೂಡ ಕೆಲವು ಸಾಂಪ್ರದಾಯಿಕ ವಿಧಿವಿಧಾನಗಳನ್ನು ಪೂರೈಸುವಂತಹವನೂ ಆಗಿದ್ದಾನೆ. ಇಂಥ ಮಗ ಕೀರ್ತಿವಂತನಾಗಿ ಬದುಕಿದರೆ ಹೆತ್ತವರಿಗೆ ಹೆಸರು ಬರುತ್ತದೆ. ಈ ಆಸೆಯಿಂದಾಗಿ ತಿಪ್ಪನಂತಹವನೂ ಸಹ ಕುಲದೀಪಕನಿಗಾಗಿ ಹಂಬಲಿಸುತ್ತಾನೆ. ಈ ಆಸೆ ಆತನ ಮನದಲ್ಲಿ ಬಹಳ ಆಳವಾಗಿ ಬೇರೂರಿರುವುದು ಕಂಡುಬರುತ್ತದೆ.

ಚೆಲುವಿ ಮರಣಹೊಂದಿದ ನಂತರ ಮಾನಸಿಕವಾಗಿ ತೀವ್ರ ಜರ್ಝರಿತ ನಾಗಿದ್ದ ತಿಪ್ಪನು ಶಂಕರನಿಗಾಗಿ ಮತ್ತೆ ಬದುಕನ್ನು ಆರಂಭಿಸುತ್ತಾನೆ. ಅಮಾವಾಸ್ಯೆಯ ಕತ್ತಲೆಯಲ್ಲಿ ತಿಪ್ಪ ಮಗನನ್ನು ಕರೆದುಕೊಂಡು ಮೀನು ಹಿಡಿಯಲು ಹೊರಡುತ್ತಾನೆ. ಆತ ಜನರಿದ್ದ ಸ್ಥಳವನ್ನು ಬಿಟ್ಟು ಹೆಚ್ಚು ಮೀನು ಸಿಗಬಹುದಾದ, ದೆವ್ವಗಳು ಇರುವ ಸ್ಥಳವೆಂದು ಪ್ರಸಿದ್ಧವಾದ ಕಥೆಗಾರರ ಉಕ್ತಿಯಾದ ಕಟಿಂಗ್‌ನ ಬಳಿ ಬರುವುದು ಮತ್ತು ತನ್ನ ಬದುಕಿನ ಏಕೈಕ ಆಧಾರಸ್ತಂಭವಾದ ಮಗನೊಬ್ಬನನ್ನೇ ಬಿಟ್ಟು ಬಹು ಅಡಿಗಳಷ್ಟು ಆಳಕ್ಕೆ

ಇಳಿದುಹೋಗುವುದು ಆತನ ಅಪ್ರಜ್ಞಾವಸ್ಥೆಗೆ ಕನ್ನಡಿ ಹಿಡಿಯುತ್ತದೆ. ಭಾರತೀಯರಲ್ಲಿ ದೆವ್ವದ ಪರಿಕಲ್ಪನೆ ಬಹಳ ಗಾಢವಾದುದಾಗಿದ್ದು ಏನೆಲ್ಲ ಅನಾಹುತಗಳಿಗೂ ಕಾರಣವಾಗಿದೆ. ತಿಪ್ಪ ತನ್ನ ಮಗನಿಗೆ ದೆವ್ವಗಳ ಬಗೆಗೆ ಸಾಕಷ್ಟು ಹೇಳಿದ್ದಾನೆ. ಹೀಗಾಗಿ ದೆವ್ವಗಳ ಸ್ಥಳವೆಂದು ಪ್ರಸಿದ್ಧಿಯಾದ ಆ ನೆಲದಲ್ಲಿ ರಾತ್ರಿ ಒಬ್ಬನೇ ಕುಳಿತ ಶಂಕರನಿಗೆ ದೆವ್ವದ ಬಗೆಗಿನ ಪ್ರಜ್ಞೆ ಹೆಚ್ಚು ಸೂಕ್ಷ್ಮವಾಗುತ್ತಾ ಹೋಗುತ್ತದೆ. ಹೊಂಗೆಮರದ ಮೇಲೆ ಈಗಾಗಲೆ ಒಂದು ಗೂಬೆ ಕುಳಿತಿರುವುದು ಆತನಿಗೆ ಗೊತ್ತಿರಲಿಲ್ಲ. ಎರಡನೇ ಗೂಬೆ ಬಂದು ಕುಳಿತದ್ದು ಮಾತ್ರ ಗೊತ್ತಾಗುತ್ತದೆ. ಎರಡೂ ಅರಚಾಡಲು ಶುರುಮಾಡಿದಾಗ ಒಂದು ಎರಡಾಗವುದೇ ಎಂಬ ಮಂಥನ ಮತ್ತು ನಡುಕ ಶಂಕರನಲ್ಲಿ ಶುರುವಾಗುತ್ತದೆ. ಕೊನೆಗೆ ಅವುಗಳು ಕಚ್ಚಾಡುತ್ತ ಶಂಕರನ ಮೇಲೆ ಬಿದ್ದಾಗ ಓಡಿಹೋಗಲು ಹೋಗಿ ಪ್ರಪಾತದಂತಿದ್ದ ಕಾಲುವೆಗೆ ಬಿದ್ದುಬಿಡುತ್ತಾನೆ; ಅಪ್ಪ ಕಟ್ಟಿದ್ದ ಕನಸನ್ನು ಸ್ಫೋಟಿಸುತ್ತಾನೆ. ಈ ಆಘಾತ ತಿಪ್ಪನಿಗೆ ಸಾಮಾನ್ಯವಾದುದೇನೂ ಆಗಿರುವುದಿಲ್ಲ. ಹೀಗಾಗಿ ಆತ ಹುಚ್ಚನಾಗುತ್ತಾನೆ. ಈ ದುರಂತ ಮಕ್ಕಳನ್ನು ಕೆಟ್ಟ ನಂಬಿಕೆಗಳಾಚೆ ಬೆಳೆಸಬೇಕಾದ ಅನಿವಾರ್ಯತೆಯನ್ನು ಒತ್ತಿಹೇಳುತ್ತದೆ. ಕಥೆ ಹೀಗೆ ತಿಪ್ಪನ ದುರುಂತಮಯವಾದ ಬದುಕನ್ನು ಮಂಡ್ಯ ಜಿಲ್ಲೆಯ ಗ್ರಾಮ್ಯ ಭಾಷಾ ಸೊಗಡಿನ ಮೂಲಕ ಯಶಸ್ವಿಯಾಗಿ ಕಟ್ಟಿಕೊಡುತ್ತದೆ.

ಡಿ. ಲಿಂಗಯ್ಯ ಅವರ **'ಕೆಂಪು ಹರಳಿನ ಓಲೆ'** ಕಥೆಯಲ್ಲಿ ಓಲೆಗಳನ್ನು ಕಳೆದುಕೊಂಡ ಮುತ್ತಮ್ಮ, ಕುಡುಕ ಗಂಡನ ಭಯದಿಂದ ತತ್ತರಿಸಿ ಹೋಗುವುದನ್ನು ಮನಮುಟ್ಟುವಂತೆ ಚಿತ್ರಿಸುತ್ತದೆ. ನಮ್ಮ ದೇಶದಲ್ಲಿ ಬಡತನ ಮತ್ತು ಸಿರಿತನ ಅಂತರ ಹೆಚ್ಚುತ್ತಿರುವುದಕ್ಕೆ ಇರಬಹುದಾದ ಪ್ರಮುಖ ಕಾರಣಗಳಲ್ಲೊಂದಾದ ಮಧ್ಯಪಾನ ಈ ಕಥೆಯ ವಸ್ತುವಾಗಿದೆ. ಮಧ್ಯಪಾನ ಸೇವಿಸುವುದನ್ನು ಬಿಡುವ ತನಕ ಈ ದೇಶದ ಉದ್ಧಾರ ಸಾಧ್ಯವಿಲ್ಲ ಎಂದು ಹೇಳುತ್ತಿದ್ದ ಮಹಾತ್ಮಗಾಂಧೀಜಿಯ ಮಾತು ನೂರಕ್ಕೆ ನೂರರಷ್ಟು ಸತ್ಯ ಎಂಬುದನ್ನು ಕಥೆಯಲ್ಲಿ ನೋಡುತ್ತೇವೆ. ಕುಡುಕರು ಕುಡಿದ ವೇಳೆಯಲ್ಲಿ ಸ್ವಂತ ವ್ಯಕ್ತಿತ್ವವನ್ನು ಕಳೆದುಕೊಳ್ಳುತ್ತಾರೆ. ಅವರು ಹೆಚ್ಚು ಹೆಚ್ಚು ಕುಡಿಯುತ್ತಾ ಹೋದಂತೆಲ್ಲಾ ಮಾನಸಿಕ ದೌರ್ಬಲ್ಯಕ್ಕೆ ಒಳಗಾಗುತ್ತಾರೆ ಎಂಬುದನ್ನು ಕಥೆಗಾರರು ರಾಮಯ್ಯನ ಪಾತ್ರದ ಮೂಲಕ ಅತ್ಯಂತ ಸಮರ್ಪಕವಾಗಿ ಚಿತ್ರಿಸಿದ್ದಾರೆ. ಕುಡಿತದ ಚಟ ಬದುಕಿನ ಭೀಕರತೆಗೆ ಅನುವುಮಾಡಿಕೊಡುತ್ತದೆ. ಭವಿಷ್ಯದ ಸುಂದರ ಕನಸುಗಳೆಲ್ಲ ಕುಡಿತದೊಳಗೆ ಕರಗಿಹೋಗುತ್ತವೆ. ಇಂಥ ಸಂಕೀರ್ಣ

ಪರಿಸ್ಥಿತಿಯಲ್ಲಿ ಮನುಷ್ಯ ಮನುಷ್ಯನಾಗಿ ಬದುಕಲು ಸಾಧ್ಯವಾಗುವುದಿಲ್ಲ ಎಂಬುದನ್ನು ಕಥೆ ಎತ್ತಿಹಿಡಿದಿದೆ. ಹೀಗೆ ಸಮುದಾಯದ ಒಳಿತಿಗಾಗಿ ದುಡಿಯುವ ಕಥೆ ಇಂದಿನ ಭಾರತೀಯ ಪರಿಸ್ಥಿತಿಗೆ ಪ್ರಸ್ತುತವೆನಿಸಿದೆ.

ರಾಮಯ್ಯ ಒಬ್ಬ ಮಹಾಕುಡುಕನಷ್ಟೇ ಅಲ್ಲ, ಭೀಕರ ವ್ಯಕ್ತಿತ್ವಧಾರಿಯು ಹೌದು. ತನ್ನ ಕಿವಿಯಲ್ಲಿ ಓಲೆಗಳಿಲ್ಲ ಎಂಬ ಸತ್ಯ ಅರಿವಾದಾಗ ಮುತ್ತಮ್ಮನ ದೃಢವಾದ ಶರೀರ ಅದುರುಗುಟ್ಟುವುದು ಆತನ ಭಯಾನಕ ವ್ಯಕ್ತಿತ್ವವನ್ನು ಆರಂಭದಲ್ಲಿಯೇ ಪರಿಚಯಿಸುತ್ತದೆ. ಕಥೆಯ ಕೇಂದ್ರಬಿಂದುವಾದ ಕೆಂಪು ಹರಳಿನ ಓಲೆಗಳು ಬಂದದ್ದೇ ಅನಾಹುತದ ಹಾದಿಯಲ್ಲಿ. ಒಂದು ರಾತ್ರಿ ರಾಮಯ್ಯ ಕಂಠಪೂರ್ತಿ ಕುಡಿದು ಬರುತ್ತಿರುವಾಗ ತನ್ನ ತೂರಾಟದ ಚಲನೆಗೆ ಅಡ್ಡಿ ಉಂಟುಮಾಡಿದ್ದಾಕ್ಕಾಗಿ ಕುಡಿದು ಬಿದ್ದಿದ್ದ ಹೆಂಗಸೊಬ್ಬಳ ಕುತ್ತಿಗೆಯನ್ನು ಕಾಲಿನಿಂದ ಒಸಕಿ ಸಾಯಿಸುತ್ತಾನೆ. ಸತ್ತ ಹೆಂಗಸಿನ ಮುಖದ ಮೇಲೆ ಕುಡುಕ ರಾಮಯ್ಯನ ಕೈಗಳು ಅಭ್ಯಾಸ ಬಲದಿಂದ ಹರಿದಾಡುತ್ತವೆ. ಕೈಗೆ ಸಿಕ್ಕ ಓಲೆಗಳನ್ನು ಕಿವಿಹರಿಯುವಂತೆ ಜಡಿದು ಕಿತ್ತುಕೊಳ್ಳುತ್ತಾನೆ. ಹೀಗೆ ಕೊಂದದ್ದಕ್ಕಾಗಿ ಅಳುಕದ ರಾಮಯ್ಯ, ಅಕಾಸ್ಮತ್ತಾಗಿ ಯಾರಿಗಾದರೂ ಗೊತ್ತಾದರೆ ಓಲೆಗಳನ್ನು ಹಿಂದಿರುಗಿಸಬೇಕಾಗುತ್ತದಲ್ಲ ಎಂಬ ಕಾರಣದಿಂದ ತನ್ನ ಹೆಂಡತಿ ಚಿಕ್ಕಿಯೊಡನೆ ಊರಿನಿಂದಲೇ ಪಲಾಯನ ಮಾಡುತ್ತಾನೆ.

ರಾಮಯ್ಯನಿಗೆ ಹೆಂಡದ ಮುಂದೆ ಯಾವುದೂ ದೊಡ್ಡದಾಗಿ ಕಾಣಿಸುವುದಿಲ್ಲ. ಒಮ್ಮೆ ಹೆಂಡಕ್ಕಾಗಿ ಓಲೆಯನ್ನು ಕೇಳಿದಾಗ ಪ್ರತಿಭಟಿಸಿದ ಮೊದಲ ಹೆಂಡತಿ ಚಿಕ್ಕಮ್ಮನನ್ನೇ ಕುತ್ತಿಗೆ ಹಿಚುಕಿ ಸಾಯಿಸುವ ಮೂಲಕ ಹೆಂಡತಿಗಿಂತ ಹೆಂಡವೇ ಮುಖ್ಯ ಎಂಬುದನ್ನು ಸಾರುತ್ತಾನೆ. ರಾಮಯ್ಯನಿಗೆ ಬೀದಿಹೋಕಳನ್ನು ಕೊಂದಾಗ ಇಲ್ಲದ ಜನರ ಹಾಗೂ ಪೋಲೀಸಿನವರ ಭಯ, ಹೆಂಡತಿಯನ್ನು ಕೊಂದಾಗ ಆಗುತ್ತದೆ. ಇಲ್ಲಿ ಅವನ ಪ್ರಜ್ಞೆ ಕೆಲಸಮಾಡಿದಂತೆ ತೋರುತ್ತದೆ. ಏಕೆಂದರೆ ಆತ ಇನ್ನೂ ಕುಡಿದಿರುವುದಿಲ್ಲ. ರಾಮಯ್ಯನಿಗೆ ಹೆಂಡತಿ ಇಲ್ಲದೆ ಜೀವಿಸುವುದಕ್ಕೆ ಸಾಧ್ಯವಾಗುವುದಿಲ್ಲ. ಅದಕ್ಕಾಗಿಯೇ ಓಲೆಗಳ ಆಮಿಷವನ್ನು ಮುಂದೊಡ್ಡಿ ಅನಾಥೆಯಾಗಿದ್ದ ಮುತ್ತಮ್ಮನನ್ನು ಹೆಂಡತಿಯಾಗಿ ಸ್ವೀಕರಿಸುತ್ತಾನೆ. ಇದು ಅವನ ದಾನವ ಪ್ರವೃತ್ತಿಯನ್ನು ಸೂಚಿಸುತ್ತದೆ. ಹೆಣ್ಣು ಮಕ್ಕಳು ಒಮ್ಮೊಮ್ಮೆ ಆಭರಣಗಳ ವ್ಯಾಮೋಹದಲ್ಲಿ ತಮ್ಮ ಭವಿಷ್ಯವನ್ನು ಮರೆತು ಮೋಸಹೋಗುತ್ತಾರೆ ಎಂಬುದನ್ನು ಮುತ್ತಮ್ಮನ ಪಾತ್ರದ ಮೂಲಕ ಅರಿಯುತ್ತೇವೆ. ಓಲೆಗಳು ಬಂದ ದಾರಿ

ರಾಮಯ್ಯನಿಂದಲೇ ಸ್ಪಷ್ಟವಾದ ಮೇಲೂ ರಾಮಯ್ಯನೊಡನೆ ಮುತ್ತಮ್ಮ ಬಾಳಲು ನಿಲ್ಲುತ್ತಾಳೆ. ಇದು ಈ ಸಮಾಜದಲ್ಲಿ ಒಂಟಿ ಬಾಳಲಾರದ ನಮ್ಮ ಹೆಣ್ಣುಮಕ್ಕಳ ಅಸಹಾಯಕತೆಗೆ ಕನ್ನಡಿ ಹಿಡಿಯುತ್ತದೆ.

ರಾತ್ರಿ ಕಂಠಪೂರ್ತಿ ಕುಡಿದು ರಸ್ತೆಯಲ್ಲೇ ಬಿದ್ದಿದ್ದ ರಾಮಯ್ಯ ಮಧ್ಯಾಹ್ನದ ಮೇಲೆ ಮನೆಗೆ ಬರುತ್ತಾನೆ. ಬಂದವನೆ "ಆ ವಾಲೆ ಬಿಚ್ಕೊಡು; ಮಾರಿ ಇವೊತ್ತು ಮನೇವ್ರೆಲ್ಲಾ ಯೆಂಡದಬ್ಬ ಮಾಡ್ಮಾ. ನಾಳೇಯಿಂದ ಯೆಂಡ ಮಾರೂದ್ ನಿಲ್ಲಿಸ್ಬಡ್ತಾರಂತೆ?"(ಡಿ. ಲಿಂಗಯ್ಯ, ಅಡಿಕೆ, ೧೯೬೬, ಪುಟ-೮೧)ಎಂದು ಆಡುವ ಮಾತುಗಳು ಕುಡುಕರ ದಾರುಣ ಬದುಕನ್ನು ಸ್ಪಷ್ಟವಾಗಿ ಚಿತ್ರಿಸುತ್ತದೆ. ಕುಡುಕರು ಸಂಸಾರಕ್ಕೆ, ಸಮಾಜಕ್ಕೆ ಬಹುದೊಡ್ಡ ಶಾಪವಾಗುತ್ತಾರೆ ಎಂಬುದನ್ನು ಇಲ್ಲಿ ನೋಡುತ್ತೇವೆ. ಓಲೆಗಳು ಕಳೆದುಹೋದ ಘಟನೆಯಿಂದಾಗಿ ಮುತ್ತಮ್ಮನಿಗೆ ಓಲೆಗಳ ಮಮತೆ ಸಡಿಲಗೊಂಡಂತೆ ಕಾಣುತ್ತದೆ. ಅತೀವ ಯಾತನೆಯಾದರೂ ಇದು ಇದ್ದರೆ ತಾನೆ ತನಗೆ ಗೋಳು ಎಂಬ ಅವ್ಯಕ್ತ ಭಾವನೆಯಿಂದಲೋ ಏನೋ ಸದ್ದಿಲ್ಲದೆ ಬಿಚ್ಚಿಕೊಡುತ್ತಾಳೆ. ಓಲೆಗಳನ್ನು ಕಳಚಿಕೊಟ್ಟು ಗಂಡ ಹೋಗುವುದನ್ನೇ ನೋಡುತ್ತಾ ದೀರ್ಘವಾಗಿ ಮುತ್ತಮ್ಮ ನಿಟ್ಟುಸಿರುಬಿಡುತ್ತಾಳೆ. ಇದು ಕುಡುಕರ ಜೊತೆಯಲ್ಲಿ ಬಾಳುವೆ ನಡೆಸುವ ಅದೆಷ್ಟೋ ಮಂದಿ ನಮ್ಮ ಹೆಣ್ಣುಮಕ್ಕಳ ಅಸಹಾಯಕತೆಯನ್ನು ಧ್ವನಿಸುತ್ತದೆ. 'ಸಂಶಯ ಪಿಶಾಚಿ' ಕಥೆಯಲ್ಲಿ ಸಂಶಯವೆಂಬುದು ಪಿಶಾಚಿಯಾಗಿ ಕಥಾ ನಾಯಕಿಗೆ ಹೆಗಲೇರಿ ತೊಂದರೆಗೊಳಪಡುತ್ತಾಳೆ. ಇದು ಹಾಸ್ಯವಾಗಿದ್ದರು ಗಂಡಾಗಲಿ ಹೆಣ್ಣಾಗಲಿ ಸಂಸಾರದೊಳಗೆ ನಂಬಿಕೆ ಬಹಳ ಮುಖ್ಯವಾಗುತ್ತದೆ. ನಂಬಿಕೆ ಇಲ್ಲವಾದಲ್ಲಿ ಈ ಕಥೆಯಲ್ಲಿ ಬರುವ ಕಥಾ ನಾಯಕಿ ಗೌರಿಯ ಹಾಗೆ ಇಕ್ಕಟ್ಟಿಗೆ ಸಿಲುಕಬೇಕಾಗುತ್ತದೆ. ಈ ಕಥೆಯು ಹೊಸದಾಗಿ ಮದುವೆಯಾದ ಹೆಣ್ಣು ಮಗಳೊಬ್ಬಳು ಗಂಡನ ಹಲ್ಲುಗಳ ಬಗೆಗೆ ತಾಳುವ ಸಂಶಯವನ್ನು ತಿಳಿಹಾಸ್ಯದೊಡನೆ ಸೊಗಸಾಗಿ ಚಿತ್ರಿಸುತ್ತದೆ. ಈ ಕಥೆಯ ನಾಯಕಿ ಗೌರಿ ತನ್ನ ಗಂಡನ ಹಲ್ಲುಗಳ ಇರುವಿಕೆಯ ಬಗೆಗೆ ಗೆಳತಿಯೊಬ್ಬಳು ಮದುವೆಯ ದಿನ ವ್ಯಕ್ತಪಡಿಸಿದ ಅನುಮಾನವನ್ನು ತಲೆಗೆ ಹಚ್ಚಿಕೊಳ್ಳುತ್ತಾಳೆ. ಆ ಮೂಲಕ ಮೇಲಿನ ಎಲ್ಲಾ ನಡವಳಿಕೆಗಳನ್ನೂ ಪ್ರದರ್ಶಿಸುತ್ತಾಳೆ. ಜೀವನಪೂರ್ತಿ ಆತನೊಡನೆ ಬಾಳಾಟ ಮಾಡಬೇಕಾಗಿರುವುದರಿಂದ ಈ ಆಘಾತ ಸಹಜವಾದುದೇ ಆಗಿದೆ.

ಬಹುಬೇಗನೆ ಆಷಾಢ ಬಂದುದರಿಂದ ಒಂದು ತಿಂಗಳಕಾಲ ಗೌರಿ ಪತಿರಾಯರಿಂದ ದೂರವಿರಬೇಕಾಗುತ್ತದೆ. ಈ ಸುದೀರ್ಘಗೈರುಹಾಜರಿಯಲ್ಲಿ

ಗೌರಿಯ ಸಂಶಯಪಿಶಾಚಿ ಬಲವರ್ಧನೆಗೊಳ್ಳುತ್ತದೆ. ಗೌರಿ ತನ್ನ ಸಮಸ್ಯೆಯನ್ನು ಮನೆಯವರ ಜೊತೆ ಹಂಚಿಕೊಳ್ಳಬಹುದಿತ್ತು. ಆದರೆ ಹಾಗೆ ಮಾಡುವುದಿಲ್ಲ. ಇದು ಅವಳ ಸಿಟ್ಟನ್ನು ಪರೋಕ್ಷವಾಗಿ ವ್ಯಕ್ತಪಡಿಸುತ್ತದೆ. ಗೌರಿ ಗೆಳತಿಯ ಈ ಅನುಮಾನಕ್ಕೆ ರಾಮೇಗೌಡನ ಮಿತಭಾಷತ್ವ ಹಾಗೂ ಅಪರೂಪದ ನಗೆಯೇ ಕಾರಣವಾಗಿರುತ್ತದೆ. ಆಷಾಢ ಮುಗಿದ ಕೂಡಲೇ ರಾಮೇಗೌಡ ಆಸೆಆಕಾಂಕ್ಷೆಗಳ ಬುತ್ತಿಹೊತ್ತು ಅತ್ತೆ ಮನೆಗೆ ಬರುತ್ತಾನೆ. ಹೆಂಡತಿಯೊಡನೆ ರಸಮಯ ಕ್ಷಣಗಳನ್ನು ಹಂಚಿಕೊಳ್ಳುವುದು ಅವನ ಹೆಬ್ಬಯಕೆಯಾಗಿರುತ್ತದೆ. ಆದರೆ ಗೌರಿಗೆ ಇಂಥ ಯಾವ ಕನಸೂ ಇರುವುದಿಲ್ಲ. ಬದಲಿಗೆ ಗಂಡನಿಗೆ ಹಲ್ಲುಗಳು ಇವೆಯೋ ಇಲ್ಲವೋ ಎಂಬುದನ್ನು ದೃಢಪಡಿಸಿಕೊಳ್ಳುವುದಷ್ಟೇ ಅವಳ ಏಕೈಕ ಉದ್ದೇಶ ಆಗಿರುತ್ತದೆ. ಈ ವಿರುದ್ಧ ನಡಾವಳಿಗಳು ಇಬ್ಬರಲ್ಲಿಯೂ ಪರಸ್ಪರ ಬೇಸರ ಮೂಡಿಸಲು ಸಹಕಾರಿಯಾಗುತ್ತವೆ. ಗೌರಿಗೆ ನೇರವಾಗಿಯೇ ಹಲ್ಲಿನ ಪ್ರಸ್ತಾಪ ಎತ್ತಲು ಸಾಧ್ಯವಾಗುವುದಿಲ್ಲ. ಏಕೆಂದರೆ ಆಕೆ ಇನ್ನೂ ಅಂಜಿಕೆ, ನಾಚಿಕೆಯ ಚೌಕಟ್ಟಿನೊಳಗೇ ಇದ್ದಾಳೆ. ಇದರಿಂದಾಗಿ ಕೆಲವು ಪರೀಕ್ಷೆಗಳನ್ನು ಮಾಡಲು ಮುಂದಾಗುತ್ತಾಳೆ. ಹೀಗೆ ನವದಂಪತಿಗಳ ಪ್ರಥಮ ಭೇಟಿ ಏಕಮುಖವಾಗಿ ಮಧುರದತ್ತ ಹೊರಳುವ ಬದಲು ದ್ವಿಮುಖವಾಗಿ ಹುಸಿಕೂಪದತ್ತ ತಿರುಗಿಬಿಡುತ್ತದೆ.

ಗೌರಿ ಪರೀಕ್ಷೆಯ ಮೊದಲನೆಯ ಹಂತವಾಗಿ ಚಕ್ಕಲಿ ಮುರುಕುಗಳನ್ನು ಹಿಡಿದು ರೂಮಿಗೆ ಪ್ರವೇಶಿಸುತ್ತಾಳೆ. ಚಕ್ಕಲಿ ಮುರುಕುಗಳ ಸಹಾಯದಿಂದ ಹಲ್ಲುಗಳ ಇರುವಿಕೆಯನ್ನು ಬಹಳ ಸುಲಭವಾಗಿ ಪತ್ತೆ ಹಚ್ಚಬಹುದೆಂಬ ಆಶಯ ಆಕೆಯದು. ಆದರೆ ರಾಮೇಗೌಡನಿಗೆ ಬೇಕಾಗಿರುವುದು ಹೆಂಡತಿಯ ಸಾಮೀಪ್ಯ ಸುಖವೇ ಹೊರತು ತಿಂಡಿಗಳಲ್ಲ. ಹಾಗಾಗಿ ತಿಂಡಿಯನ್ನು ಜೊತೆಯಲ್ಲಿ ಕುಳಿತು ತಿನ್ನುವ ಇಂಗಿತ ವ್ಯಕ್ತಪಡಿಸುತ್ತಾನೆ. ಗೌರಿಗೆ ವ್ಯಕ್ತಪಡಿಸಲಾರದ ವೇದನೆ ಎದೆಯೊಳಗಿರುವುದರಿಂದ ಪ್ರೇಮ ಸಲ್ಲಾಪದಲ್ಲಿ ಭಾಗಿಯಾಗಲು ಇಷ್ಟವಾಗುವುದಿಲ್ಲ. ಇದರಿಂದಾಗಿ ರಾಮೇಗೌಡ ಚಕ್ಕಲಿ ಮುರುಕುಗಳ ಮೇಲೆ ಗಮನಹರಿಸುವುದಿಲ್ಲ. ಚಕ್ಕಲಿ ಮುರುಕುಗಳು ಹಾಗೆಯೇ ಉಳಿಯುತ್ತವೆ. ಗೌರಿಯ ಸಂಶಯ ಪಿಶಾಚಿ ಬೃಹದಾಕಾರವಾಗಿ ಬೆಳೆಯುತ್ತದೆ.

ಗೌರಿ ತನ್ನ ಸಂಶಯದ ಸ್ಪಷ್ಟತೆಗಾಗಿ ಪರೀಕ್ಷೆಯ ಮೇಲೊಂದು ಪರೀಕ್ಷೆಯನ್ನು ಒಡ್ಡುತ್ತಾಳೆ. ಆಕೆಯ ಈ ತವಕ ಬದುಕಿನ ಮೇಲೆ ಅವಳಿಗಿರುವ ಕಳಕಳಿಯನ್ನು ಪ್ರಕಟಿಸುತ್ತದೆ. ಒಬ್ಬಟ್ಟಿನ ಊಟಕ್ಕೆ ಚಕ್ಕಲಿ ಮುರುಕುಗಳನ್ನು

ಮಾಡುತಿದ್ದು ರಾಮೇಗೌಡನಿಗೆ ಸಮಸ್ಯೆಯಾಗುತ್ತದೆ. ಇದರಲ್ಲಿ ಆತ ಹೆಂಡತಿಯ ಚೇಷ್ಟೆಯನ್ನು ಗುರುತಿಸಿದರೆ, ಗೌರಿ ತನ್ನ ನೆಮ್ಮದಿ ಬದುಕನ್ನು ಗುರುತಿಸಿಕೊಳ್ಳಲು ಹೆಣಗಾಡುತ್ತಾಳೆ. ದುರಂತವೆಂದರೆ, ಗೌರಿಯ ನಡವಳಿಕೆಗಳು ರಾಮೇಗೌಡನಲ್ಲಿ ಬೇಸರವನ್ನೂ ರಾಮೇಗೌಡನ ನಡವಳಿಕೆಗಳು ಗೌರಿಯಲ್ಲಿ ಸಂಶಯವನ್ನೂ ಪರಸ್ಪರ ಗಟ್ಟಿಯಾಗಿಸುತ್ತಾ ಸಾಗುತ್ತವೆ. ರಾತ್ರಿ ಊಟದ ಜೊತೆ ಕೊಟ್ಟಿದ್ದ ಚಕ್ಕಲಿ ಮುರುಕುಗಳನ್ನು ರಾಮೇಗೌಡ ಹಾಗೆಯೇ ಉಳಿಸಿದಾಗ ಗೌರಿಯ ದು:ಖ ಹೆಚ್ಚಾಗುತ್ತದೆ. ಇದರಿಂದಾಗಿ ಗಂಡನ ಬಳಿ ಎಲೆಅಡಿಕೆಯನ್ನಿಟ್ಟು ಕುಳಿತುಕೋ ಅಂದರೆ ಲೆಕ್ಕಿಸದೆ ತಾಯಿಯ ಬಳಿಗೆ ಬಂದು ಮಲಗಿಕೊಳ್ಳುತ್ತಾಳೆ. ಇಲ್ಲಿ ಈಕೆ ತಾಳ್ಮೆಯನ್ನು ತಂದುಕೊಂಡಿದ್ದರೆ ಅಡಿಕೆಯ ಮೂಲಕ ತನ್ನ ಅನುಮಾನವನ್ನು ಬಗೆಹರಿಸಿಕೊಳ್ಳಬಹುದಾಗಿತ್ತು.

ಹೆಣ್ಣು ಮಕ್ಕಳು ತಮಗೊದಗಿದ ಎಂಥ ಕಷ್ಟವನ್ನಾದರೂ ಸಹ ತಾಯಿಯ ಬಳಿ ತೋಡಿಕೊಳ್ಳುವುದು ಸಹಜವಾಗಿದೆ. ಆದರೆ ಈ ಕಥಾನಾಯಕಿ ತನ್ನ ಗೆಳತಿ ಸೃಷ್ಟಿಸಿದ ಸಂಶಯವನ್ನು ನಿಜವೆಂದೇ ಬಗೆದುದರಿಂದ ತಾಯಿಗೆ ಹೇಳಿ ಆಕೆಯ ಮನಸ್ಸನ್ನು ನೋಯಿಸಲು ಇಚ್ಛಿಸುವುದಿಲ್ಲ. ಒಂದು ವೇಳೆ ಗೌರಿ ತನ್ನೊಳಗಿನ ಸಂಶಯವನ್ನು ಯಾರೊಡನೆಯಾದರೂ ಹಂಚಿಕೊಂಡಿದ್ದರೆ ಅಥವಾ ಈಕೆಯ ದು:ಖವನ್ನು ಮನೆಯವರಾದರೂ ಗುರುತಿಸಿದ್ದರೆ, ಅವಳಲ್ಲಿನ ದುಗುಡದ ಕ್ಷಣಗಳು ಕರಗಿ ಆಹ್ಲಾದದ ಕ್ಷಣಗಳು ಎದುರಾಗುತ್ತಿದ್ದವು. ಅದರೆ ಕಥಾ ಮುಂದುವರಿಕೆಗೆ ಇದರಿಂದ ತೊಂದರೆ ಉಂಟಾಗುತ್ತಿತ್ತಾದ್ದರಿಂದ ಕಥೆಗಾರರು ಗೌರಿಯ ದು:ಖವನ್ನು ಅವಳಲ್ಲೇ ಅಡಗಿಸಿ ಕಥಾ ತಂತ್ರವನ್ನು ಸ್ವಾರಸ್ಯವಾಗಿ ಹೆಣೆಯುತ್ತಾರೆ.

ಗೌರಿ ನಡೆಸಿದ ಪರೀಕ್ಷಾ ವಿಧಾನಗಳೆಲ್ಲಾ ರಾಮೇಗೌಡನಿಗೆ ಹಲ್ಲಿಲ್ಲದ ಬಗೆಗೆ ಬಲವಾದ ಸಾಕ್ಷ್ಯಾಧಾರಗಳನ್ನು ಒದಗಿಸುತ್ತವೆ. ಇದರಿಂದಾಗಿ ಗೌರಿಗೆ ಬಾಳು ಬೇಸರವಾಗುತ್ತದೆ. ಗೌರಿಯ ಬಾಳು ದುರಂತದಲ್ಲಿ ಪರ್ಯವಸಾನವಾಗುತ್ತದೆ ಎಂದು ಊಹಿಸುವಾಗ ಅವಳನ್ನು ಯಾವುದೋ ಒಂದು ಅವ್ಯಕ್ತ ಧೈರ್ಯ ಆವರಿಸುತ್ತದೆ. ನಾಚಿಕೆ, ಅಂಜಿಕೆ, ಅಸಹ್ಯ ಈ ಎಲ್ಲ ಭಾವನೆಗಳನ್ನೂ ತೊರೆದು ಸತ್ಯವನ್ನು ಬೆತ್ತಲು ಮಾಡಲು ಸಿದ್ಧಳಾಗುತ್ತಾಳೆ. ಮತ್ತೆ ಚಕ್ಕಲಿ ಮುರುಕುಗಳೊಡನೆ ಗಂಡನ ಕೋಣೆಗೆ ದಿಟ್ಟವಾಗಿ ಪ್ರವೇಶಿಸುತ್ತಾಳೆ. ಪತಿರಾಯ ಮುನಿಸಿನಿಂದಾಗಿ ಮಾತನಾಡದಿದ್ದರು ಹತ್ತಿರಕ್ಕೆ ಹೋಗಿ ಕುಳಿತುಕೊಳ್ಳುತ್ತಾಳೆ. ಚಕ್ಕಲಿ ಮುರುಕುಗಳನ್ನು ತೆಗೆದುಕೊಳ್ಳುವಂತೆ ಗಂಭೀರವಾಗಿ ಒತ್ತಾಯಿಸುತ್ತಾಳೆ. ನೀನು

ಇಲ್ಲೇ ಇರಬೇಕೆಂಬ ಗಂಡನ ಷರತ್ತಿಗೆ ಒಪ್ಪಿ, ಆತನ ಆಶಯದಂತೆ ಬಾಯಿಗೂ ಹಾಕುತ್ತಾಳೆ. ಹಲ್ಲುಗಳು ಇರುವುದು ಸ್ಪಷ್ಟವಾದಾಗ 'ನಿಮಗೂ ಹಲ್ಲಿವೆ' ಎಂದು ಅತ್ಯಾನಂದದಲ್ಲಿ ಉದ್ಗರಿಸುತ್ತಾಳೆ. ಈ ಉದ್ಗಾರದಲ್ಲಿ ಅವಳ ದು:ಖದುಮ್ಮಾನಗಳು ಮಾಯವಾಗಿ 'ಬದುಕಿನಲ್ಲಿ ಗೆದ್ದೆ' ಎಂಬ ಭಾವ ಹೊರಹೊಮ್ಮುತ್ತದೆ. ಯಾಂತ್ರಿಕವಾಗಿ ನಡೆದುಕೊಂಡಿದ್ದ ಪ್ರೇಮಜೀವಗಳು ಒಮ್ಮೆಲೆ ಭಾವಪರವಶವಾಗಿ ಬಿಡುತ್ತವೆ.

ಸಂಶಯ ಮತ್ತು ಪಿಶಾಚಿ ಇವೆರಡೂ ಪರಿಣಾಮದಲ್ಲಿ ಒಂದೇ ಸ್ವಭಾವದವುಗಳಾಗಿರುತ್ತವೆ. ಮನುಷ್ಯನಿಗೆ ಸಂಶಯ ಬೆನ್ನು ಹತ್ತಿದರೂ ಅಷ್ಟೇ ಪಿಶಾಚಿ ಬೆನ್ನು ಹತ್ತಿದರೂ ಅಷ್ಟೇ, ಇಡೀ ಅಸ್ತಿತ್ವವನ್ನೇ ಅಲುಗಾಡಿಸಿಬಿಡುತ್ತದೆ. ಇದರಿಂದಾಗಿ ಸಂಶಯವೂ ಒಂದು ರೀತಿ ಪಿಶಾಚಿ ಇದ್ದ ಹಾಗೇ. ಈ ಹಿನ್ನೆಲೆಯಲ್ಲಿ ಕಥೆಗೆ ಇಟ್ಟಿರುವ 'ಸಂಶಯ ಪಿಶಾಚಿ' ಎಂಬ ಶೀರ್ಷಿಕೆ ಹೆಚ್ಚು ಉಚಿತವಾದುದಾಗಿದೆ. (ಈ ಕಥೆಯನ್ನು ಘಟ್ಟಮರಾಜು ಅಶ್ವತ್ಥನಾರಾಯಣರು 'ಅನುಮಾನಂ ಪೆನುಭೂತಂ' ಎಂಬ ಹೆಸರಿನಲ್ಲಿ ತೆಲುಗು ಭಾಷೆಗೆ ಅನುವಾದಿಸಿದ್ದಾರೆ).

ಡಿ. ಲಿಂಗಯ್ಯ ಅವರ **'ಕತ್ತಲು-ಬೆಳಕು'** ಕಥೆಯಲ್ಲಿ ಮಲತಾಯಿಯ ಆಶ್ರಯದಲ್ಲಿ ಬಾಳಬೇಕಾಗಿ ಬಂದ ಹೆಣ್ಣು ಮಗಳೊಬ್ಬಳ ದಾರುಣ ಚಿತ್ರಣವನ್ನು ಹೃದಯಂಗಮವಾಗಿ ಚಿತ್ರಿಸುತ್ತದೆ. ಮಲಮಕ್ಕಳು ತನ್ನ ಮಕ್ಕಳ ಸವಲತ್ತುಗಳಲ್ಲಿ ಭಾಗಿದಾರರೆಂದೋ ಇವರ ತಾಯಿ ತನ್ನ ಗಂಡನೊಡನೆ ಸುಖ ಹಂಚಿಕೊಂಡಳೆಂಬ ಆಕ್ರೋಶವೋ ಇದಕ್ಕೆ ಕಾರಣವಿರಬೇಕು. ಹೆಣ್ಣು ಮತ್ತೊಂದು ಹೆಣ್ಣಿನ ಮೇಲೆ ಚಲಾಯಿಸುವ ಕ್ರೌರ್ಯ ಅಸಹ್ಯವನ್ನು ಉಂಟುಮಾಡುತ್ತದೆ ಎಂಬುದನ್ನು ಕಥೆ ಯಶಸ್ವಿಯಾಗಿ ಧ್ವನಿಸುತ್ತದೆ. ಹೆಣ್ಣುಮಕ್ಕಳ ಪಾಲಿಗೆ ತಾಯಿ ಅಗತ್ಯ ಎಂದು ಕಥೆಗಾರರು ಮನಮುಟ್ಟುವಂತೆ ಚಿತ್ರಿಸಿದ್ದಾರೆ.

ಕಥಾ ಕೇಂದ್ರ ಬಿಂದು ಲೀಲಾವತಿ ಆಕೆಯ ತಾಯಿಗೆ ತನ್ನ ಸೋದರನ ಮಗನಾದ ರಾಜುಗೇ ತನ್ನ ಮಗಳನ್ನು ಕೊಟ್ಟು ಮದುವೆ ಮಾಡಬೇಕೆಂಬ ಆಸೆ ಇರುತ್ತದೆ. ಈ ಇಂಗಿತವನ್ನು ಅವರು ಎಲ್ಲರೊಡನೆಯೂ ವ್ಯಕ್ತಪಡಿಸಿರುತ್ತಾರೆ. ಹೀಗೆ ಹಿರಿಯರ ನಡುವೆಯೇ ರಾಜು ಮತ್ತು ಲೀಲಾವತಿ ಮುಂದೆ ಮದುವೆಯಾಗುವವರೆಂದು ಗುರುತಿಸಲ್ಪಟ್ಟಾಗ ಇಬ್ಬರಲ್ಲೂ ಪರಸ್ಪರ ಪ್ರೀತಿ ಬೆಳೆಯುತ್ತದೆ. ಈ ಸಂತಸದ ಕ್ಷಣಗಳು ಲೀಲಾವತಿಯ ಪಾಲಿಗೆ ಬಹುಕಾಲ ಉಳಿಯುವುದಿಲ್ಲ. ತಾಯಿ ಸತ್ತನಂತರ ಆಕೆಯ ಈ ಎಲ್ಲ ಆಹ್ಲಾದದ ಕ್ಷಣಗಳು

ಹಿಂದೆ ಸರಿದು ಕಠೋರತೆಯ ಕ್ಷಣಗಳು ಎದುರಾಗುತ್ತವೆ. ತಾಯಿ ಸತ್ತ ವರ್ಷವೇ ರಾಜುವಿನ ಅಣ್ಣ ಹೆಂಡತಿಯ ಮಾತನ್ನು ಕೇಳಿಕೊಂಡು ಆತನಲ್ಲಿ ಜಗಳ ತೆಗೆದು ಮನೆಯಿಂದ ಹೊರಗಟ್ಟುತ್ತಾನೆ. ಹೀಗೆ ಒಂದೇ ವರ್ಷದಲ್ಲಿ ಎರಡು ಪ್ರೀತಿಯ ಜೀವಗಳನ್ನು ಕಳೆದುಕೊಂಡು ಲೀಲಾವತಿ ಅನಾಥಭಾವವನ್ನು ಅನುಭವಿಸುತ್ತಾಳೆ.

ಹೆಂಡತಿ ಸತ್ತ ಮೇಲೆ ಎರಡನೇ ಮದುವೆಯನ್ನೇ ಆಗುವುದಿಲ್ಲ ಎಂದು ಹೇಳುತ್ತಿದ್ದ ಲೀಲಾವತಿಯ ತಂದೆ, ನಂತರ ಸದ್ದಿಲ್ಲದೆ ಮದುವೆಯಾದ. ಆತ ಹೆಂಡತಿಯ ಗುಲಾಮನಾಗಿ ಬದುಕತೊಡಗುತ್ತಾನೆ. ಇದು ಲೀಲಾವತಿಯ ಪಾಲಿಗೆ ದೊಡ್ಡ ಹಿಂಸೆಯೇ ಆಗುತ್ತದೆ. ಹೆಣ್ಣಿಗೆ ಹೆಣ್ಣೇ ಶತ್ರು ಎಂಬ ಮಾತು ಇಲ್ಲಿ ಸತ್ಯವಾಗುತ್ತದೆ. ಪುರುಷ ಪ್ರಧಾನ ಸಮಾಜವೆಂದು ನಾವು ಬೊಬ್ಬೆ ಇಟ್ಟರೂ ಹೆಣ್ಣಿನ ಮುಂದೆ ಕೈಕಟ್ಟಿ ನಿಲ್ಲುವ ಗಂಡಿನ ಅಸಹಾಯಕತೆ ಇಲ್ಲಿ ತಾಂಡವವಾಡಿದೆ. ಅಪ್ಪನ ಅಸಹಾಯಕತೆಯನ್ನು ಲೀಲಾವತಿ ತಿಳಿದುಕೊಳ್ಳುತ್ತಾಳೆ. ಇದರಿಂದಾಗಿ ಅವಳಿಗೆ ಅಸಹ್ಯ ಉಂಟಾಗುವುದಿಲ್ಲ ಬದಲಿಗೆ ಮರುಕ ಉಂಟಾಗುತ್ತದೆ.

ಎಷ್ಟೋ ವರ್ಷಗಳ ನಂತರ ಊರಿಗೆ ಬಂದ ರಾಜು, ಲೀಲಾವತಿಯನ್ನು ಕದ್ದು ಭೇಟಿಮಾಡಲು ಹವಣಿಸುತ್ತಾನೆ. ಇದಕ್ಕೆ ಲೀಲಾವತಿಯ ಚಿಕ್ಕಮ್ಮನ ಭಯವೋ ಅಥವಾ ಊರಿನವರು ಯಾರಾದರೂ ಕಂಡಾರು ಎಂಬ ಅಳುಕೋ ಕಾರಣವಿರಬೇಕು! ರಾಜು ಮರದಿಂದ ಕಾಂಪೌಂಡಿಗೆ ಹಾರಿದಾಗ ಲೀಲಾವತಿಗೆ ಭಯವಾಗುತ್ತುದೆ. ತಕ್ಷಣ ಕಿರುಚಿಕೊಳ್ಳುತ್ತಾಳೆ. ಆಗ ಮಲತಾಯಿ ನಿದ್ದೆಗೆ ಭಂಗವಾಯಿತೆಂದು ಲೀಲಾವತಿಯನ್ನು ಚೆನ್ನಾಗಿ ಥಳಿಸುತ್ತಾಳೆ. ಕೆಟ್ಟ ಮಾತುಗಳನ್ನು ಹರಿಯಬಿಡುತ್ತಾಳೆ. ಆ ಮೂಲಕ ಮಲತಾಯಿ ಬಲವಂತದ ತಾಯಿ ಎಂಬುದನ್ನು ಸಾಬೀತುಗೊಳಿಸುತ್ತಾಳೆ. ಹೆಣ್ಣಿನ ಇನ್ನೊಂದು ಕರಾಳ ಮುಖವನ್ನು ಪ್ರದರ್ಶಿಸುತ್ತಾಳೆ. ಲೀಲಾವತಿಗೆ ಬದುಕು ಬೇಸರವಾದಂತೆಲ್ಲ ಇರುವಿಕೆಯ ಅರ್ಥವೂ ಶೂನ್ಯವಾಗುತ್ತಾ ಹೋಗುತ್ತದೆ. ಹೀಗಾಗಿ ಬದುಕನ್ನು ಕೊನೆಗಾಣಿಸಲು ನಿಶ್ಚಯಿಸಿ ಮೊದಲ ಮುಂಜಾನೆ ಕೋಳಿ ಕೂಗುವ ಹೊತ್ತಿನಲ್ಲಿ ಮೇಲೇಳುತ್ತಾಳೆ; ಆ ಮೂಲಕ ಮಲತಾಯಂದಿರ ನೆರಳಿನಲ್ಲಿ ಬದುಕುತ್ತಿರುವ ಅದೃಷ್ಟಹೀನ ಹೆಣ್ಣುಮಕ್ಕಳ ಹಣೆಯ ಬರಹವನ್ನು ಅನಾವರಣಗೊಳಿಸುತ್ತಾಳೆ.

ಲೀಲಾವತಿ ಬಾವಿಗೆ ಬೀಳಲು ಅದರ ಹತ್ತಿರ ಬರುತ್ತಾಳೆ. ಆಗ ರಾಜು ಮೆಟ್ಟಿದ ಪವಿತ್ರ ಸ್ಥಳವನ್ನು ಕಲುಷಿತಗೊಳಿಸಲು ಅವಳ ಮನ ಒಪ್ಪುವುದಿಲ್ಲ. ಇದು ಅವಳ ಪವಿತ್ರ ಪ್ರೀತಿಗೆ ಸಾಕ್ಷಿಯಾಗುತ್ತದೆ. ಹೀಗಾಗಿ ಕೊಳದ ಹತ್ತಿರ

ನಡೆಯುತ್ತಾಳೆ. ಕೊಳಕ್ಕೆ ಹಾರುವ ಮುನ್ನ ಕೊಳದ ಮಧ್ಯೆ ಬೆಳಕನ್ನು ಕಾಣುತ್ತಾಳೆ. ಅದರೊಳಗೆ ರಾಜುವನ್ನು ಗುರುತಿಸುತ್ತಾಳೆ. ಇನ್ನೇನು ಕೊಳಕ್ಕೆ ಬೀಳಬೇಕೆನ್ನುವಾಗ ಲೀಲಾವತಿಯ ಕೈಹಿಡಿದುಕೊಳ್ಳುವ ರಾಜು ಅವಳ ಬಾಳಿಗೆ ಬೆಳಕಾಗಿ ಪ್ರಕಾಶಿಸುತ್ತಾನೆ. ಆನಂದದಿಂದ 'ರಾಜು ಮಾವಾ' ಎಂದ ಲೀಲಾವತಿಯ ಧನಿಯಲ್ಲಿ, ಎಂದೋ ಕತ್ತರಿಸಿ ಬಿದ್ದಿದ್ದ ಆಸೆ, ಆಕಾಂಕ್ಷೆ, ಪ್ರೀತಿ, ಪ್ರೇಮ ಕನಸುಗಳೆಲ್ಲ ಒಮ್ಮೆಲೆ ಮೈಗೂಡಿದ್ದು ಸ್ಪಷ್ಟವಾಗುತ್ತದೆ. ರಾಜು ಮನೆಬಿಟ್ಟು ಬೆಂಗಳೂರು ಸೇರಿ ಹಂತಹಂತವಾಗಿ ಮೇಲೆಬಂದು, ತಾನೇ ಸ್ವಂತ ಹೋಟೆಲ್‌ವೊಂದನ್ನು ತೆರೆಯುತ್ತಾನೆ. ಇಂಥ ಸಂತೋಷದ ಕ್ಷಣಗಳು ಎದುರಾದಾಗ ಮಹಾನಗರದಲ್ಲಿ ಬಣ್ಣಬಣ್ಣದ ಹುಡುಗಿಯರಿದ್ದರೂ ಕಪ್ಪುಬಣ್ಣದ ಲೀಲಾವತಿಯನ್ನೇ ಅರಸಿ ಬರುತ್ತಾನೆ. ಇದು ಆತನ ದೊಡ್ಡತನಕ್ಕೆ, ಅವರ ಅಮರಪ್ರೀತಿಗೆ ಕನ್ನಡಿ ಹಿಡಿಯುತ್ತದೆ. ಅವರಿಬ್ಬರೂ ಕತ್ತಲು ಕಳೆಯುವ ಮುನ್ನವೇ ಊರುಬಿಡಲು ತೀರ್ಮಾನಿಸಿ ಹೊರಟಾಗ, ಕತ್ತಲು ಕರಗಿ ಬೆಳಕು ಹರಿಯಲಾರಂಭಿಸುತ್ತದೆ. ಇದು ಲೀಲಾವತಿಯ ಕಷ್ಟದ ಕ್ಷಣಗಳು ದೂರವಾಗಿ ಸಂತಸದ, ಕ್ಷಣಗಳು ಎದುರಾದುದನ್ನು ಸುಂದರವಾಗಿ ಧ್ವನಿಸುತ್ತದೆ. ಗ್ರಾಮೀಣ ಪರಿಸರದಲ್ಲಿ ಕೌಟುಂಬಿಕ ಚೌಕಟ್ಟಿನಲ್ಲಿ ಕಂಡುಬರುವ ಆದರ್ಶ ಪ್ರೇಮ ಕೊನೆಗೆ ಸಾಕ್ಷಾತ್ಕಾರಗೊಳ್ಳುವುದು ಕಥೆಯಲ್ಲಿ ಉತ್ತಮವಾಗಿ ಅಭಿವ್ಯಕ್ತಗೊಂಡಿದೆ.

ಕಷ್ಟದ ಕ್ಷಣಗಳನ್ನು ಸೃಷ್ಟಿಸಿದ ಮಲತಾಯಿ ಕತ್ತಲಾಗಿ, ಇವುಗಳನ್ನು ತೊಡೆದುಹಾಕಿದ ರಾಜು ಬೆಳಕಾಗಿ ಕಾಣಿಸಿಕೊಳ್ಳುವುದರಿಂದ ಕಥೆಯ ಶೀರ್ಷಿಕೆ 'ಕತ್ತಲು–ಬೆಳಕು' ಅರ್ಥಪೂರ್ಣವೆನಿಸುತ್ತದೆ. (ಎನ್. ನಾರಾಯಣರಾವ್ ಈ ಕಥೆಯನ್ನು 'ಅಂಧೇರಾ ಔರ್ ಉಜಾಲ' ಎಂಬ ಹೆಸರಿನಲ್ಲಿ ಹಿಂದಿ ಭಾಷೆಗೆ ಅನುವಾದಿಸುವ ಮೂಲಕ ಕಥೆಯ ಶ್ರೇಷ್ಠತೆಗೆ ಗೌರವ ತಂದಿದ್ದಾರೆ).

ಡಿ. ಲಿಂಗಯ್ಯ ಅವರ **'ಬಂಧನ'** ಕಥೆಯಲ್ಲಿ ಹೆಣ್ಣಿಗೆ ಹೆಣ್ಣೇ ಶತ್ರು ಎಂಬುದನ್ನು ಮತ್ತು ವರದಕ್ಷಿಣೆ ಸಮಸ್ಯೆಯನ್ನು ಧ್ವನಿಸುತ್ತದೆ. ಕಥೆಯಲ್ಲಿ ಕೆಂಚಮ್ಮ ಪತಿಗೆ ನಿಷ್ಠೆಯಾಗಿರುವುದು ಕಂಡುಬರುತ್ತದೆ. ಗಂಡ, ತನ್ನ ಮಗಳನ್ನು ತನ್ನ ತಂಗಿಯಾದ ಕಾಳಮ್ಮನ ಮಗ ಸಿದ್ಧೇಗೌಡನಿಗೆ ಕೊಟ್ಟು ಮದುವೆ ಮಾಡಬೇಕೆಂದು ಹೇಳಿರುತ್ತಾನೆ. ನಂತರ ಆತ ಸತ್ತುಹೋದಾಗ ಕೆಂಚಮ್ಮ ಪತಿಯ ಮಾತಿಗೆ ಬದ್ಧಳಾಗಿರುತ್ತಾಳೆ. ಕಾಳಮ್ಮನ ದುರ್ಗುಣಗಳು ಆಕೆಗೆ ಗೊತ್ತಿದ್ದರೂ ತನ್ನ ಗಂಡನ ಆಸೆಗೆ ವಿರುದ್ಧವಾದ ಕಾರ್ಯಕ್ಕೆ ಕೈಹಚ್ಚುವುದಿಲ್ಲ.

ಇರುವ ಒಬ್ಬಳೇ ಮಗಳು ನಿಂಗಿಯನ್ನು ಸಿದ್ಧೇಗೌಡನಿಗೆ ಕೊಟ್ಟು ಮನ್ವಂತಳ್ಕೆ(ಮಗಳನ್ನು ಕೊಟ್ಟು ಮದುವೆ ಮಾಡಿ ಅಳಿಯನನ್ನು ತಮ್ಮ ಮನೆಯಲ್ಲಿಯೇ ಶಾಶ್ವತವಾಗಿ ಇಟ್ಟುಕೊಳ್ಳುವುದಕ್ಕೆ 'ಮನ್ವಂತಳ್ಕೆ ಮದುವೆ' ಎಂದು ಕರೆಯುತ್ತಾರೆ)ಮದುವೆ ಮಾಡಿಕೊಳ್ಳುತ್ತಾಳೆ. ಈಗ ಸಿದ್ಧೇಗೌಡನು ಕೆಂಚಮ್ಮನ ಸಕಲ ಆಸ್ತಿಗೂ ಉತ್ತರಾಧಿಕಾರಿಯಾಗಿಯೇ ಆಗುತ್ತಾನೆ. ವಾಸ್ತವ ಹೀಗಿದ್ದರೂ ಒಸಗೆಯ ದಿನ ಸಿದ್ಧೇಗೌಡ ಮತ್ತು ಆತನ ತಾಯಿ ಚಿನ್ನದ ಕಪ್ಪ ಕೊಡಲಿಲ್ಲ ಎಂಬ ಕಾರಣಕ್ಕಾಗಿ ಒಸಗೆಯನ್ನೇ ನಿರಾಕರಿಸುವುದು ಅವರ ದುರಾಸೆಗೆ ಕನ್ನಡಿ ಹಿಡಿಯುತ್ತದೆ. ಮನ್ವಂತಳ್ಕೆ ಮದುವೆ ಮಾಡಿಕೊಂಡಿರುವುದರಿಂದ ನ್ಯಾಯವಾಗಿ ಸಿದ್ಧೇಗೌಡನಿಗೆ ಯಾವ ವರದಕ್ಷಿಣೆಯನ್ನೂ ಕೆಂಚಮ್ಮ ಕೊಡಬೇಕಾಗಿಲ್ಲ. ಆದರೂ ಸಹ ಆಕೆ ಕಪ್ಪ ಮಾಡಲು ಆಚಾರಿಗೆ ನೇಮಿಸಿರುತ್ತಾಳೆ. ಇದು ಆಕೆಯ ದೊಡ್ಡಗುಣವನ್ನು ಅಥವಾ ಅನಿವಾರ್ಯವನ್ನು ಪ್ರಕಟಿಸುತ್ತದೆ. ಆದರೆ ಆಚಾರಿಯ ಹೆಂಡತಿಗೆ ವಿಪರೀತ ಅನಾರೋಗ್ಯ ಕಾಡಿದ್ದರಿಂದ ಸಕಾಲಕ್ಕೆ ಕಪ್ಪವನ್ನು ಮಾಡಿಕೊಡಲು ಸಾಧ್ಯವಾಗುವುದಿಲ್ಲ. ಇಲ್ಲಿ ಆಚಾರಿಯ ಹೆಂಡತಿಗೆ ಬಂದ ಕಾಯಿಲೆಯೇ ಕಥೆಯ ಬೆಳವಣಿಗೆಗೆ ಮುಖ್ಯ ಅಂಶವಾಗಿದೆ.

ಸಿದ್ಧೇಗೌಡ ಕಪ್ಪ ಬರುವ ತನಕ ಒಸಗೆಯೇ ಬೇಡ ಎಂದದ್ದು, ಎಲ್ಲರಂತೆ ತಾನು ಆ ಸಂದರ್ಭದಲ್ಲಿ ಶೋಕಿ ಮಾಡಬೇಕು ಎಂಬ ಸಣ್ಣ ಆಸೆಯಿಂದಲೇ ಹೊರತು ಸಂಪತ್ತಿನ ವ್ಯಾಮೋಹದಿಂದಂತೂ ಅಲ್ಲ. ಈ ಸಂದರ್ಭದಲ್ಲಿ ಕಾಳಮ್ಮ ಬುದ್ಧಿ ಹೇಳಿದ್ದರೆ ತಾಯಿಯ ಮಾತೇ ವೇದವಾಕ್ಯವಾದ ಸಿದ್ಧೇಗೌಡ ಖಂಡಿತ ಬೆಲೆಕೊಡುತ್ತಿದ್ದ. ಆದರೆ ಕಾಳಮ್ಮ ಅಂಥ ದೊಡ್ಡಗುಣವನ್ನು ಪ್ರದರ್ಶಿಸುವುದಿಲ್ಲ. ತನ್ನ ಅಣ್ಣನ ಇಡೀ ಆಸ್ತಿಯೇ ತನ್ನ ಮಗನಿಗೆ ಸೇರಿದೆ ಎಂಬ ದಾಕ್ಷಿಣ್ಯವಾಗಲಿ ಅಥವಾ ಅಣ್ಣನ ಮಗಳು ಎಂಬ ಪ್ರೀತಿಯೇ ಆಗಲಿ ಕಾಳಮ್ಮನಿಗೆ ಇರುವುದಿಲ್ಲ. ಹೀಗೆ ಪರಿಸ್ಥಿತಿಯ ಅರಿವೇ ಇಲ್ಲದ ಕಾಳಮ್ಮ ತನ್ನ ಸ್ವಭಾವಕ್ಕನುಗುಣವಾಗಿ ಬೀಗತಿಯೊಡನೆ ಕಾಲುಕೆರೆದು ಜಗಳವನ್ನೇ ಮಾಡಿಬಿಡುತ್ತಾಳೆ. ಸ್ವಾಭಿಮಾನದಲ್ಲಿ ಕೆಂಚಮ್ಮನೂ ಯಾರಿಗೇನು ಕಡಿಮೆ ಇಲ್ಲ. ಹೀಗಾಗಿ ಕಾಳಮ್ಮ ಮತ್ತು ಕೆಂಚಮ್ಮ ಇಬ್ಬರ ನಡುವೆಯೂ ಜಗಳ ಆರಂಭವಾಗುತ್ತದೆ. "ಯೆಣ್ಣೆತ್ತವಳು ನೀನು; ತಗ್ಗಿಬಗ್ಗಿ ಮಾತಾಡಬೇಕು ಅನ್ನುವನಂಗಿಲ್ವಾ? ಗಂಡಿನವರು ಅಂದ್ರೆ ಅಸ್ಟುಸದರವಾ?"(ಡಿ. ಲಿಂಗಯ್ಯ, ರಣಕಾಟಿಗಳು, ೧೯೮೯, ಪಟ-೧೭) ಎನ್ನುವ ಕಾಳಮ್ಮನ ಮಾತಿನಲ್ಲಿ ಗಂಡು ಹೆತ್ತವರ 'ಅಹಂ'ನ್ನು ತೋರಿಸುತ್ತದೆ. ಆದರೆ ಕೆಂಚಮ್ಮನ ಮಾತಿನಲ್ಲಿ ಈ 'ಅಹಂ'

ನೋಡಲಾಗುವುದಿಲ್ಲ. ಬದಲಿಗೆ ಹೆಣ್ಣು ಹೆತ್ತವರ ಅಸಹಾಯಕ ಸ್ವಾಭಿಮಾನವನ್ನಷ್ಟೇ ನೋಡುತ್ತೇವೆ.

ಜಗಳದ ನಡುವೆ ಊರಿನ ಹಿರಿಯರು ಸೇರಿ ವಾರಕ್ಕೆ ಸರಿಯಾಗಿ ಕಪ್ಪಕೊಡುವಂತೆ ತೀರ್ಮಾನಮಾಡುತ್ತಾರೆ. ಆದರೂ ಸಹ ಕೆಟ್ಟ ಸ್ವಭಾವದ ಕಾಳಮ್ಮ ಒಸಗೆಯ ಪ್ರತಿಯೊಂದು ಶಾಸ್ತ್ರದಲ್ಲಿಯೂ ತಪ್ಪನ್ನೇ ಹುಡುಕುತ್ತಾಳೆ. ಅವಳಿಗೆ ಆ ಸಂದರ್ಭದಲ್ಲಿ ಗಂಡೆತ್ತವರ ಪ್ರತಿಷ್ಠೆಯನ್ನು ಎತ್ತಿಹಿಡಿಯುವುದು ಮುಖ್ಯವಾಗಿರುತ್ತದೆ. ಕೊನೆಗೆ ವಾಲಗದವರು ಸರಿಯಾಗಿ ವಾಲಗ ಊದಲಿಲ್ಲ ಎಂಬ ಕಾರಣಕ್ಕೆ ಬೆಳಗ್ಗೆ ಜಗಳ ತೆಗೆದು, ಅದನ್ನೇ ರಂಪಗೊಳಿಸಿ ಮಗನನ್ನು ಎಳೆದುಕೊಂಡು ಹೊರಟೇಹೋಗುತ್ತಾಳೆ. ಆಗ ಕೆಂಚಮ್ಮ ಮಗಳನ್ನು ಅಪ್ಪಿಕೊಂಡು ಧಾರಾಕಾರವಾಗಿ ಕಣ್ಣೀರು ಸುರಿಸಿ ಅಳುತ್ತಾಳೆ. ಈ ಪ್ರಸಂಗ ನಮ್ಮ ಸಮಾಜದಲ್ಲಿ ಹೆಣ್ಣು ಹೆತ್ತವರ ಅಸಹಾಯಕ ಸ್ಥಿತಿಗತಿಗಳ ಮೇಲೆ ಬೆಳಕು ಚೆಲ್ಲುತ್ತದೆ. ಕಾಳಮ್ಮ ಗಂಡೆತ್ತ ಪ್ರತಿಯೊಬ್ಬ ಭಾರತೀಯ ಮಹಿಳೆಯನ್ನೂ ಪ್ರತಿನಿಧಿಸಿದರೆ, ಕೆಂಚಮ್ಮ ಹೆಣ್ಣೆತ್ತವರನ್ನು ಪ್ರತಿನಿಧಿಸುತ್ತಾಳೆ. ಇಲ್ಲಿ ಗಂಡೆತ್ತವರ 'ಅಹಂ' ಮತ್ತು ಹೆಣ್ಣೆತ್ತವರ ಅಸಹಾಯಕತೆ ಬಹಳ ಮನೋಜ್ಞವಾಗಿ ಚಿತ್ರಿತವಾಗಿದೆ.

ಕೆಂಚಮ್ಮ ಮಧ್ಯಸ್ಥಗಾರರ ಮಾತಿನಂತೆ ಒಸಗೆಯಾದ ಎಂಟು ದಿನಕ್ಕೆ ಸರಿಯಾಗಿ ಚಿನ್ನದ ಕಪ್ಪವನ್ನು ಸಿದ್ಧ ಮಾಡಿಸುತ್ತಾಳೆ. ಮಾನಮರ್ಯಾದೆಯನ್ನೆಲ್ಲ ಕಳಚಿ ಹೋದ ಬೀಗತಿಯ ಮನೆಯ ಬಾಗಿಲಿಗೆ ಹೋಗಲು ಆಕೆಯ ಮನಸ್ಸು ಒಪ್ಪುವುದಿಲ್ಲ. ಇಲ್ಲಿ ಅವಳ ಪ್ರತಿಷ್ಠೆಗಿಂತ ಹೆಚ್ಚಾಗಿ ಆತ್ಮಗೌರವವೇ ಜಾಗೃತವಾಗಿರುತ್ತದೆ. ಇನ್ನು ಕಪ್ಪವನ್ನು ಕೊಡದಿರುವಂತೆಯೂ ಇಲ್ಲ. ಅದರೊಳಗೆ ಮಗಳ ಭವಿಷ್ಯದ ಪ್ರಶ್ನೆಯೇ ಹುದುಗಿದೆ. ಹೀಗಾಗಿ ಕರಿಗಮ್ಮನ ಕೈಯಲ್ಲಿ ಕಪ್ಪವನ್ನು ಕೊಟ್ಟು ಬೀಗತಿ ಮನೆಗೆ ಕಳುಹಿಸುತ್ತಾಳೆ. ಆಗ ಕಾಳಮ್ಮನಲ್ಲಿ ಗಂಡೆತ್ತ 'ಅಹಂ' ಮತ್ತುಷ್ಟು ತೀಕ್ಷ್ಣಗೊಳ್ಳುತ್ತದೆ. ಕರಿಗಮ್ಮನ ಎದುರೆ ಬೀಗತಿಯ ಧಿಮಾಕನ್ನು ಜಾಲಾಡಿಸಿಬಿಡುತ್ತಾಳೆ. ಹೀಗೆ ಕಪ್ಪವನ್ನು ಸ್ವೀಕರಿಸಿಯೂ ಮಗನನ್ನು ಹೆಂಡತಿಯ ಹತ್ತಿರ ಹೋಗದಂತೆ ತಡೆದ ಕಾಳಮ್ಮ ಸಣ್ಣತನದ ನಿಕೃಷ್ಟವಾಗಿ ಗೋಚರಿಸುತ್ತಾಳೆ. ಅವ್ವನ ಈ ನಡತೆ ಸಿದ್ಧೇಗೌಡನಲ್ಲಿ ಬೇಸರ ಮೂಡಿಸುತ್ತದೆ. ಕದ್ದಾದರೂ ಹೆಂಡತಿಯ ಹತ್ತಿರ ಹೋಗಿ ಬರಲು ಯೋಚಿಸಿ ಸೋಲುತ್ತಾನೆ. ನಂತರ ಗೆಳೆಯರು ಆಡಿದ ವಿವೇಕಪೂರಿತ ಮಾತುಗಳು ಸಿದ್ಧೇಗೌಡನ ಚೇತನವನ್ನು ಬಡಿದೆಬ್ಬಿಸುವಲ್ಲಿ ಯಶಸ್ವಿಯಾಗುತ್ತದೆ. ಅವ್ವನ ಹತ್ತಿರ ಅತ್ತೆಮನೆಗೆ ಹೋಗುವ ತನ್ನ

ನಿರ್ಧಾರವನ್ನು ಪ್ರಕಟಿಸುತ್ತಾನೆ. ಆಗ ಕಾಳಮ್ಮ ಮತ್ತೊಂದು ಮದುವೆ ಮಾಡುವುದಾಗಿಯೂ ಈ ಸಂಬಂಧ ನಮಗೆ ಬೇಡವೆಂದೂ ಹೇಳುವ ಮೂಲಕ ಹೆಣ್ಣಿಗೆ ಹೆಣ್ಣೇ ಶತ್ರು ಎಂಬ ಸತ್ಯವನ್ನು ಸಾಬೀತುಗೊಳಿಸುತ್ತಾಳೆ. ಅವನು ಈ ಆಮಿಷವನ್ನು ಧಿಕ್ಕರಿಸಿದ ಸಿದ್ಧೇಗೌಡ 'ಅತಿಯಾದದ್ದು ಅಸಹ್ಯವಾಗುತ್ತದೆ' ಎಂಬ ನಾಣ್ಣುಡಿಗೆ ಜೀವ ತುಂಬುತ್ತಾನೆ.

ಕಪ್ಪ ಕೊಟ್ಟರೂ ಅಳಿಯ ಮನೆಗೆ ಬಾರದಿದ್ದದ್ದು ಕೆಂಚಮ್ಮನಲ್ಲಿ ಬಹಳ ಆತಂಕ ಮೂಡಿಸುತ್ತದೆ. ಇಂಥ ಚಿಕ್ಕ ವಿಷಯ ಎಷ್ಟೊಂದು ದೊಡ್ಡದಾಗುತ್ತದೆ ಎಂದು ಅವಳು ತಿಳಿದಿರಲಿಲ್ಲ. ಬಹುಶ: ಅವಳಿಗೆ ಇನ್ನೊಬ್ಬ ಮಗನೋ ಮಗಳೋ ಇದ್ದಿದ್ದರೆ ಇಷ್ಟೊಂದು ತಲೆಯನ್ನೇ ಕೆಡಿಸಿಕೊಳ್ಳುತ್ತಿರಲಿಲ್ಲವೇನೋ! ಆದರೆ ಇರುವ ಒಬ್ಬಳೇ ಮಗಳ ಭವಿಷ್ಯ ಹಾಳಾಗುವುದನ್ನು ಆಕೆ ಕನಸು ಮನಸ್ಸಿನಲ್ಲಿಯೂ ಯೋಚಿಸಲಾರಳು. ಇದರಿಂದಾಗಿ ಮನೆಗೆ ತಾನೇ ಹೋಗಿ ಕ್ಷಮೆ ಕೇಳಲು ನಿರ್ಧರಿಸುತ್ತಾಳೆ. ಆದರೆ ಅಕೆಯ ಆತ್ಮಾಭಿಮಾನ ಅಡ್ಡಿಬರುತ್ತದೆ. ಕೊನೆಗೆ ಈ ಆತ್ಮಾಭಿಮಾನ, ಸುಮಾರು ಎರಡು ತಿಂಗಳಿಂದ ಕೊರಗುತ್ತಿರುವ ಮಗಳ ವೇದನೆಯ ಮುಂದೆ ಗೌಣವಾಗುತ್ತದೆ. ಊರಿನ ಹಿರಿಯರ ಜೊತೆ ಬೀಗತಿಯ ಮನೆಗೆ ಹೋಗಿ ಕ್ಷಮೆ ಬೇಡಿ ಮಗಳ ಬಾಳು ಬೆಳಗಿಸಲು ನಿರ್ಧರಿಸುತ್ತಾಳೆ. ಆದರೆ ಕಾಳಮ್ಮನಿಗೆ ಮಗನ ಸುಖ ಸಂತೋಷ ಮತ್ತು ಭವಿಷ್ಯಕ್ಕಿಂತಲೂ ಮಗನಿಗೆ ಮದುವೆಯನ್ನೇ ಮಾಡಿಲ್ಲವೇನೋ ಎಂಬುವಷ್ಟರಮಟ್ಟಿಗೆ ಆ ಸುದ್ದಿಯನ್ನೇ ಮರೆತು ನಿರ್ಲಿಪ್ತಳಾಗಿಬಿಡುತ್ತಾಳೆ. ಇಬ್ಬರು ತಾಯಂದಿರೂ ತಮ್ಮ ಮಕ್ಕಳ ಸುಖಸಂತೋಷದ ಬಗೆಗೆ ಇಟ್ಟುಕೊಂಡಿರುವ ರೀತಿ ಇಲ್ಲಿ ಒಡೆದುಕಾಣುತ್ತದೆ. ಇಲ್ಲೊಂದು ಅಂಶವನ್ನು ಗಮನಿಸಬೇಕು; ಕಾಳಮ್ಮನಿಗೆ ಇದಿಲ್ಲದಿದ್ದರೆ ಇನ್ನೊಂದು ಹೆಣ್ಣು ತರಬಹುದು ಎಂಬ ಧೈರ್ಯವಿರುವುದರಿಂದ ತನ್ನ ಮಗನ ಭವಿಷ್ಯದಲ್ಲಿ ಅಷ್ಟಾಗಿ ತಲೆಕೆಡಿಸಿಕೊಳ್ಳುವುದಿಲ್ಲ. ಆದರೆ ಪುರುಷಪ್ರಧಾನ ಸಮಾಜದಲ್ಲಿ ಈ ಧೈರ್ಯ ಹೆಣ್ಣೆತ್ತ ಕೆಂಚಮ್ಮನಿಗೆ ಎಲ್ಲಿಂದ ಬರಬೇಕು? ಹೀಗಾಗಿಯೇ ಆಕೆ ಮಗಳ ಭವಿಷ್ಯ ರೂಪಿಸಲು ಹೆಣಗಾಡುತ್ತಾಳೆ.

ಕಡೆಗೆ ಸಿದ್ಧೇಗೌಡ ತನ್ನ ಹೆಂಡತಿ ನಿಂಗಿಯ ತಲೆಗೆ ಮುಡಿಸುವ ಮಲ್ಲಿಗೆ ಹೂ, ಅವರ ಬದುಕು ಪರಿಮಳಗೊಂಡ ಸಂಕೇತವೂ ಹೌದು. ಸಿದ್ಧೇಗೌಡನಿಗೆ ತನ್ನ ಎಲ್ಲಾ ತಪ್ಪಿನ ಅರಿವಾಗಿ ಮುಪ್ಪಿನ ಅತ್ತೆಯ ಸೇವೆಯಲ್ಲಿಯೇ ಇನ್ನು ಮುಂದೆ ತೊಡಗುವುದಾಗಿ ಪ್ರಕಟಿಸುತ್ತಾನೆ. ಈತನ ಸಂಗಡ ನಿಂಗಿ, ನನ್ನನ್ನು ಮರೆತು ದೂರ ಇರಬೇಡಿ ಎಂದು ಅಳುವುದು ನಮ್ಮ ಹೆಣ್ಣು ಮಕ್ಕಳು ಗಂಡನಿಲ್ಲದೆ

ಒಂಟಿಯಾಗಿ ಬಾಳಲಾರದ ಅಸಹಾಯಕ ಸ್ಥಿತಿಯನ್ನು ಬಿಂಬಿಸುತ್ತದೆ. "ನೋಡು ಕೆಂಚಕ್ಕ ಇವೊತ್ತು ಮಾತ್ರ ನಿಂಗೀನ ಗಂಡನ ತಾವ್ಕೆ ಬುಡಬ್ಯಾಡ.. ಮುಕ್ಕ ಇನ್ನೂವಸಿ ಕಾಯ್ಲಿ!"(ಡಿ. ಲಿಂಗಯ್ಯ, ರಣಕಾಟಿಗಳು, ೧೯೮೯, ಪುಟ-೨೯-೩೦)ಎಂದು ಹೇಳಿದ ಕರಿಗಮ್ಮನ ಮಾತಿನಂತೆಯೇ ನಿಂಗಿಯನ್ನು ತನ್ನ ಪಕ್ಕವೇ ಕೆಂಚಮ್ಮ ಮಲಗಿಸಿಕೊಳ್ಳುತ್ತಾಳೆ. ಆಗ ಸಿದ್ಧೇಗೌಡ ಮತ್ತು ನಿಂಗಿಯನ್ನು ಕಾಡಿದ ಕಾಮದಾಹದ ತೀವ್ರತೆಯನ್ನು ಚಿತ್ರಿಸಲು, ಬೆಕ್ಕುಗಳಾದ ಬಿಳಿಗಿ ಮತ್ತು ಗಡವ, ಹಾಗೆಯೇ ಎಮ್ಮೆ ಕಡಸು ಹಾಗೂ ಕೋಣಗಳ ಕಾಮದಾಹವನ್ನೂ ಕಥೆಗಾರರು ಕಥೆಗೆ ಪ್ರತಿಮಾತ್ಮಕವಾಗಿ ತಂದಿದ್ದಾರೆ. ಬಾಯಿ ಮಾತಿನಲ್ಲಿ ಕಟ್ಟಿಕೊಡಲಾಗದ ನಿಂಗಿ ಮತ್ತು ಸಿದ್ಧೇಗೌಡನ ಕಾಮದಾಹದ ತೀವ್ರತೆ ಮತ್ತು ತೀಕ್ಷ್ಣತೆಯನ್ನು ಪ್ರಾಣಿಗಳ ಮೂಲಕ ಸಮರ್ಥವಾಗಿ ಕಟ್ಟಿಕೊಡುತ್ತಾರೆ. ಇಂಥ ಸಂದರ್ಭದಲ್ಲಿ ಕಥೆಗಾರರ ಪ್ರತಿಭಾ ಸಾಮರ್ಥ್ಯ ಪ್ರಜ್ವಲಿಸುತ್ತದೆ. ನೈತಿಕತೆಯನ್ನು ಮೀರಿದರೂ ಕಥೆಗೆ ಸಂಕೇತವಾಗಿದೆ. ಕೊನೆಗೆ ಮಗಳ ಮೂಕ ವೇದನೆ ಕೆಂಚಮ್ಮನ ಸಿಟ್ಟನ್ನು ದಹಿಸಿಬಿಡುತ್ತದೆ. ನೋವು ತಿಂದ ಕೆಂಚಮ್ಮನಿಗೆ ಮಗಳ ಬಾಳು ಹಸನಾದದ್ದು ಪ್ರಕಟಗೊಳ್ಳುತ್ತದೆ. ವರದಕ್ಷಿಣೆಯ ಪಿಡುಗು ಹೆಣ್ಣೆತ್ತವರಿಗೊಂದು ಶಾಪ ಎಂಬುದೇ ಈ ಕಥೆಯ ಒಟ್ಟಾರೆ ಧೋರಣೆಯಾಗಿದೆ.

ಕುಟುಂಬದ ಸದಸ್ಯರ ನಡುವೆ ನಡೆಯುವ ಮಾನಸಿಕ ತುಮುಲುಗಳನ್ನು ಮತ್ತು ವೈಯಕ್ತಿಕ ಸ್ವಾರ್ಥಗಳ ಸಾಧನೆಗಾಗಿ ನಡೆಯುವ ಘರ್ಷಣೆಯನ್ನು ಕೌಟುಂಬಿಕ ಸಂಘರ್ಷವೆನ್ನಬಹುದು. ಈ ಹಿನ್ನೆಲೆಯಲ್ಲಿ ಬೆಸಗರಹಳ್ಳಿ ರಾಮಣ್ಣ ಅವರ 'ಸುಗ್ಗಿ' ಕಥೆಯನ್ನು ಕಾಣಬಹುದು. ಶಿವರಾಮಣ್ಣ ಮತ್ತು ಪುಟ್ಟಸ್ವಾಮಿ ಅನ್ಯೋನ್ಯವಾಗಿದ್ದ ಅಣ್ಣತಮ್ಮಂದಿರು. ತಂದೆ-ತಾಯಿಯ ಆಶಯದಂತೆ ಒಟ್ಟಾಗಿ ಸಂಸಾರದ ನೊಗವನ್ನು ಎಳೆಯುತ್ತಿದ್ದಾಗ, ಅದರಲ್ಲಿ ಒಂದು ನೊಗ ಕಳಚಿದಂತಾಯಿತು. ತಮ್ಮನಾಗಿದ್ದ ಪುಟ್ಟಸ್ವಾಮಿಯಂತೆ ಪ್ರತಿ ಹಳ್ಳಿಗಳಲ್ಲಿ ಮನಸ್ಸು-ಮನೆ ಒಡೆಯುವ ಕೆಲಸ ಮಾಡುವಂತ ವ್ಯಕ್ತಿಗಳು ಇರುತ್ತಾರೆ ಈ ಕಥೆಯಲ್ಲಿ ಸಿದ್ಧಣ್ಣ, ಕೆಂಪಣ್ಣ, ಮರಿಯಮ್ಮ ಎಂಬ ಪಾತ್ರಗಳಲ್ಲಿ ಕಾಣಿಸುತ್ತಾರೆ. "ಈಗ ನಿಮ್ಮ ಶಿವರಾಮಣ್ಣನವರ ಮಗ ನಾಗರಾಜು ಮೈಸೂರೇಲಿ ಓದ್ತಾ ಅವನಲ್ಲ ನಿಮಗೆ ಬಂದ ಸಿರಿ ಏನೂ ಅಂತ? ಸುಮ್ಮನೆ ಮೂರತ್ತು ಎದೆ ಮುರ್ಕಳಿ.. ನೀವು ಹೊರ್ಗೆ, ಸರೋಜಕ್ಕ ಒಳ್ಗೆ, ಉಳಿದೋರು ಕಾಲ್ಮೇಲೆ ಕಾಲಾಕ್ಕೊಂಡು ಮಜಾ ಮಾಡಲಿ... ಅವರ ಮಕ್ಕಳು ಅವರಿಗೆ ಹೆಚ್ಚು ನೀವು ಕೆಟ್ಟಾಗ ಯಾರಾದಾರೂ?"

(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೬, ಪುಟ-೧೦). ಈ ರೀತಿಯ ಮಾತುಗಳಿಂದ ಮನೆ ಒಡೆಯಲು ಪ್ರೇರಣೆಗೊಂಡ ಪುಟ್ಟಸ್ವಾಮಿಯು ನನಗೆ ಬರಬೇಕಾದ ಪಾಲು ಬಂದುಬುಡ್ಲಿ 'ಇಸ್ಸೆ' ಆಗೋಲ್ಗೀ ಎಂದು ಹೇಳಿದಾಗ ಅವಳ ತಾಯಿ ಕಲ್ಲಾಗಿ ಹೋದಳು. ತಮ್ಮನ ಮಾತನ್ನು ಅರ್ಥೈಸಿಕೊಂಡ ಶಿವರಾಮಣ್ಣ ತಂದೆ ಹೇಳಿದ ಮಾತನ್ನು ಈಗ ನೆನಪಿಸಿಕೊಂಡ. "ಲೋ ಮಗ ತುಂಬಿದ ಮನೆ ಜೋಡೆತ್ತಿನ ಗಾಡಿಯಿಂದ್ದಗೆ.. ಇಲ್ದೆ ಹೋದ್ರೆ ಯಾವುದಾದ್ರು ಬೇರೆ ಕಡೆ ಹೆಜ್ಜೆ ಹಾಕಿದ್ರೆ ಗಾಡಿ ಮುಂದಕ್ಕೋದದೆ? ಇಲ್ಲ. ಅಂಗೇಯ ತುಂಬಿದ ಮನೇಲಿ ಅಣ್ಣ ತಮ್ಮಂದಿರು ಅನುಸರಿಸಿಕೊಂಡು ಹೋಗಬೇಕು. ಇಲ್ದೇ ಹೋದ್ರೆ ಆ ಮನೆ ಹೇಳೋಕೆ ಹೆಸರಿಲ್ಲದಂಗೆ ಹೂತೋಗ್ತದೆ, ಒಡೆದು ಹೋಳಾಗೋಯ್ತದೆ"(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೬, ಪುಟ-೧೩)ಎಂಬುದು ಐದು ವರ್ಷಗಳ ನಂತರ ನಿಜವಾಗುತ್ತಿರುವುದನ್ನು ಕಂಡು ಶಿವರಾಮಣ್ಣನ ಮನಸ್ಸು ಅಳುಕಿತು. ಎಂಟು ಕಂಬದ ಮನೆಯನ್ನು ಎರಡಾಗಲು ಇಟ್ಟಿಗೆಯನ್ನು ಒಡೆಸಿ ಮಧ್ಯಕೆ ಗೋಡೆ ಹಾಕುವ ಪ್ರಯತ್ನದಲ್ಲಿ ಹಾಗೂ ಕೆರೆಮೇಗಳ ಗದ್ದೆಯ ಬತ್ತ ಪಾಲಾಗಬೇಕೆಂದು ಹಠಮಾಡಿದ ಪುಟ್ಟಸ್ವಾಮಿಯು ತನ್ನ ಮನೆ ಮುರಿಯವ ಕೆಲಸದಲ್ಲಿ ಬಾಗಿಯಾಗಿದ್ದ ಸಿದ್ಧಣ್ಣ, ಕೆಂಪಣ್ಣರೊಂದಿಗೆ ಕಣಕ್ಕೆ ಬಂದಾಗ ಬತ್ತದ ರಾಶಿಗೆ ಪೂಜೆ ಸಲ್ಲುವ ಎಲ್ಲಾ ಸಿದ್ಧತೆಗಳು ನಡೆದಿದ್ದವು. ಆದರೆ ಇಲ್ಲಿ ಅಣ್ಣ ಕಾಣದಿರುವುದನ್ನು ಗಮನಿಸಿದ ತಮ್ಮ ಪುಟ್ಟಸ್ವಾಮಿ ದೂರದ ನೇರಳೆ ಮರದ ಕೆಳಗೆ ಎಲ್ಲವನ್ನು ಕಳೆದುಕೊಂಡವನಂತೆ ಅಸಹಾಯಕ ಸ್ಥಿತಿಯಲ್ಲಿ ಕುಳಿತ್ತಿದ್ದ ಅಣ್ಣನನ್ನು ಕಂಡು "ಭೂತಕಾಲದ ದಾಳಿಂಬೆಯನ್ನು ವರ್ತಮಾನದ ಮುಷ್ಠಿಯಲ್ಲಿ ಜಜ್ಜಿದಾಗ ನೆನಪಿನ ಬೀಜಗಳು ದೃಷ್ಟಿಯ ಮುಂದೆ ಚೆಲ್ಲಿದವು, ಈಗ ಎಂಟು ಕಂಬದ ತೊಟ್ಟಿಯ ಮನೆ ಎರಡಾಗುತ್ತದೆ. ನಾಲ್ಕಾರು ತಲೆಮಾರುಗಳಿಂದ ಒಡೆಯದ ಮನೆ ಹೋಳಾಗುತ್ತದೆ. ಮಧ್ಯಕ್ಕೊಂದು ಗೋಡೆ, ಅಣ್ಣ-ತಮ್ಮಂದಿರ ನಡುವೆ ಒಡಕು. ಹೀಗೆಯೇ ತಮ್ಮ ಮಕ್ಕಳು ತಮ್ಮಂತೆಯೇ ಪಾಲಾಗಿ ಅವರ ಮಕ್ಕಳು ಅವರನ್ನು ಅನುಸರಿಸಿದರೆ ಮನೆಯ ಆಸ್ತಿಯೆಲ್ಲಾ ಚೂರು ಚೂರು. ಅವ್ವ ಕುಳಿತ ಕಡೆ ನೋಡಿದಾಗ ಹುಲ್ಲಿನ ರಾಶಿಯ ಪಕ್ಕದಲ್ಲಿ ಕುಳಿತು ರಾಶಿಯನ್ನೇ ನೋಡುತ್ತಿದ್ದಾಳೆ. ರೆಪ್ಪೆಯಾಡಿಸದೆ ಕಣ್ಣು ಮಂಜಾಗಿರಬೇಕು. ಗಂಡನ ಬಯಕೆ ತನ್ನೆದುರೇ ಸಿಡಿದು ಹಾಳಾಗಿ ಹೋಗಿತ್ತಿರುವುದನ್ನು ನೆನೆದು ರಾಶಿಯನ್ನೇ ನೋಡುತ್ತಿದ್ದ ಅವ್ವ ಪುಟ್ಟಸ್ವಾಮಿಯ ಕಡೆ ಒಮ್ಮೆ ಕತ್ತೆತ್ತಿ ಒಂದಷ್ಟು ಕ್ಷಣಗಳನ್ನು ನೋಡುತ್ತಿದ್ದು ಮತ್ತೆ ಅತ್ತ

ಹೊರಳಿಸಿದಳು. ಕ್ಷಣದಲ್ಲೆ ರಾಶಿಯನ್ನು ಪಾಲು ಮಾಡಿಸಿ ನಮ್ಮ ಮನೆಯ ಮಾನ ಊರುಪಾಲು ಮಾಡುತ್ತೀಯ? ನಿನ್ನ ಹೆತ್ತ ನನ್ನೊಡಲು"(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೭, ಪುಟ-೧೭)ಎನ್ನುವಂತೆ. ಪುಟ್ಟಸ್ವಾಮಿಯ ಮನಸ್ಸು ಬೆದರಿತು. ಮೊದಲಿದ್ದ ಭಂಡ ಧೈರ್ಯ ಈಗ ಇರಲಿಲ್ಲ.

ಈ ಕಥೆಯ ಕೊನೆಯಲ್ಲಿ ಪುಟ್ಟಸ್ವಾಮಿಯ ಮನಸ್ಸು ಪರಿವರ್ತನೆಯಾಗಿ ಅಣ್ಣನನ್ನು ಮೊದಲು ಪೂಜೆಗೆ ಕರೆಯಿಸಿದಾಗ ಶಿವರಾಮಣ್ಣ ಅಚ್ಚರಿಗೊಂಡರು. ತಪ್ಪು ಮಾಡಿದ ಮಗುವಿನಂತೆ ದೂರದಲ್ಲಿ ನಿಂತಿರುವ ತಮ್ಮನನ್ನ ಕಂಡು ಮನಸ್ಸಿನಲ್ಲೇ ಹಸುಗೂಸಿನಂಥ ಮನಸ್ಸು ಎಂದು ಕ್ಷಮಿಸಿದರು. ತಮ್ಮ ಬೇಳೆ ಕೊನೆಯಲ್ಲಿ ಬೇಯದೇ ಹೋಗುವುದನ್ನು ಕಂಡು ಅಲ್ಲಿಂದ ಕಾಲು ಕೀಳುವುದಕ್ಕೆ ಕೆಂಪಣ್ಣ, ಮರಿತಮ್ಮ ಮುಂದಾದರು. ಈ ಕಥೆಯಲ್ಲಿ ಕೌಟುಂಬಿಕ ಸಂಘರ್ಷ ಕಾಣಿಸಿಕೊಂಡರೂ ಹಿರಿಯರು ಹಾಕಿಕೊಟ್ಟ ಮಾರ್ಗವನ್ನು ನೆನೆದು ಮುಂದೆ ಆಗಬಹುದಾದ ಅಚಾತುರ್ಯಗಳಿಗೆ ಅವಕಾಶ ಮಾಡಿಕೊಡಬಾರದೆಂದು ಕಥೆಗಾರರು ಪ್ರಯತ್ನಿಸಿದ್ದಾರೆ. ಒಂದು ಕುಟುಂಬದಲ್ಲಿ ಅನ್ಯೋನ್ಯತೆ, ಪ್ರೀತಿ-ವಿಶ್ವಾಸ ಇವುಗಳಿಂದ ಕೂಡಿರುವಂಥ ಕುಟುಂಬವು ಸಮಾಜದ ಉತ್ತಮ ಕುಟುಂಬವೆನಿಸುತ್ತದೆ ಎಂಬುದು ಈ ಕಥೆಯ ಆಶಯವಾಗಿದೆ.

"ನಮ್ಮೂರ ಕಾಯೊಳ ನಮ್ಮವ್ವ
ಎಲ್ಲವ್ವ ನಂಮನೆ ಒಂದಾಗಿ ಇರಲಲ್ವ ಬೆಳೇಲವ್ವ
ನಂಕಣಜ ಹಿಗ್ಗಲ ಇಂಥ ಸುಗ್ಗಿ ಬರಲವ್ವ"
(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೭, ಪುಟ-೧೯).

ಈ ರೀತಿ ಅರ್ಥಪೂರ್ಣವಾಗಿ ಸುಗ್ಗಿ ಕಥೆಯನ್ನು ಪೂರ್ಣಗೊಳಿಸಲಾಗಿದೆ. ಕೌಟುಂಬಿಕ ಸಂಘರ್ಷ ಗ್ರಾಮೀಣ ಪ್ರದೇಶಗಳಲ್ಲಿ ಕೂಡ ಸಾಮಾನ್ಯವೆಂಬಂತೆ ಓರಗಿತ್ತಿಯರ ಸನ್ನಿವೇಶ ಕಂಡು ಬಂದಿದೆ. ಇದೇ ಕಥೆಗಾರರು 'ದೇವರ ಹೂವು' ಕಥೆಯಲ್ಲಿ ಓರಗಿತ್ತಿ ನಿಂಗಕ್ಕನ ಮಾತುಗಳು ಗ್ರಾಮ್ಯ ಪ್ರದೇಶದ ಪ್ರತಿಯೊಂದು ಮನೆಯಲ್ಲಿ ಸಹಜವೆಂಬಂತೆ ಮನಸ್ಸುಗಳು ಒಡೆದಿರುವುದು ಕಂಡುಬರತ್ತದೆ. ಇಲ್ಲಿ ನೇರವಾಗಿ ತನ್ನ ಕುಟುಂಬ ಸದಸ್ಯರ ಮೇಲೆ ವಾಗ್ದಾಳಿ ಮಾಡಲು ಸಾಧ್ಯವಿಲ್ಲದಾಗ ಬೇರೊಂದು ವಸ್ತುವಿನ ಮೇಲೆ ಹೇಳುವುದರ ಮೂಲಕ ತಮ್ಮ ಸಿಟ್ಟನ್ನು ತೋರಿಸುವುದು ಕಂಡುಬರುತ್ತದೆ. ಮೊಟ್ಟೆ ಕೋಳಿಯ ಹಿಂದೆ ಓರಗಿತ್ತಿ ನಿಂಗಕ್ಕ ಆಡಿದ ಮಾತು "ಥೂ ನಿನ್ನ ಹೊಟ್ಟೆ ಹಾಳಾಗ್ಹೋಗ ಬಂದು ಬತ್ತದ ಮೂಟೆ ಕುಟುಕಿ ಕುಟುಕಿ ತೂತು ಮಾಡಿ ಹೊಟ್ಟೆ ಪಿಣುಗರಿವಂಗೆ ಮುಕ್ಕುತೀಯಲ್ಲ; ನಂಮನೆ ಬತ್ತವೇ

ರುಚಿಯೇನೋ ನಿಂಗೆ! ನಿನ್ಗೆ ಕೊಕ್ಕರೆ ರೋಗ ಬರಾ... ಕಂಡೋರ ಮನೆ ರಾಗಿ ಬತ್ತ ತಿಂದು ನಲೆದೇಲೇ ಉಂಟಾಡ್ತೀ ಅಲ್ಲ ಥೂ! ನಿನ್ನ ಸಾಕದೊರ ಮನೆ ಹಾಳಾಗ್ಹೋಗ. ನಿನ್ನ ತಿಂದೋದರ ಹೊಟ್ಟೆ ಸಿಡಿಯ! ಅಲ್ಲ ನಿಂಕಂಡರೆ ನೆಟಕೆ ಮುರೀತಾರೆ; ನಮ್ಮನೆ ಸೊತ್ತುಗೆ ಬರೋಕೆ ನಾಚ್ಕೆ ಆಗೊದಿಲ್ಲವೇನೋ"(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೩, ಪುಟ-೭೪) ಈ ಮಾತುಗಳು ಕೋಳಿಗೆ ಬೈಯ್ದರೂ ಅದು ನೇರವಾಗಿ ನಿಂಗಕ್ಕನ ಓರಗಿತ್ತಿ ಚನ್ನಕ್ಕನ ಕಿವಿಗೆ ಬಿದ್ದು ಕುದಿಯುವ ಬೆಲ್ಲದ ಪಾಕ ಮೈಮೇಲೆ ಬಿದ್ದಂತಾಗುತ್ತದೆ. ಈ ರೀತಿ ಕುಟುಂಬದಲ್ಲಿ ಸಾಮರಸ್ಯ, ಸಹಬಾಳ್ವೆ ಇಲ್ಲದಾಗ ಪ್ರತಿ ಕ್ಷಣ ಕ್ಷಣವು ವಿರೋಧಿಗಳನ್ನು ಯಾವುದಾದರು ಸಂದರ್ಭಗಳನ್ನು ತೆಗೆದುಕೊಂಡು ಜಗಳಕ್ಕೆ ನಿಲ್ಲುವ ಸೂಚನೆಗಳು ಕಥೆಯಲ್ಲಿ ಕಂಡು ಬರುತ್ತದೆ.

ಬೆಸಗರಹಳ್ಳಿ ರಾಮಣ್ಣ ಅವರ **'ಸೋಲು'** ಕಥೆಯಲ್ಲಿ ದೊಡ್ಡೇಗೌಡರು ಮತ್ತು ಅವರ ಮಗನ ನಡುವೆ ಓದಿನ ವಿಚಾರಕ್ಕೆ ಮನಸ್ತಾಪಗಳು ನಡೆಯುತ್ತಿದ್ದವು. ತಂದೆಗೆ ಮಗ ಓದಿ ವಿದ್ಯಾವಂತನಾಗಬೇಕೆಂಬುದು ಸಹಜ ಆಕಾಂಕ್ಷೆಯೆಂದು ಹೇಳಬಹುದು. ಮಗ ನಾಗಣ್ಣ ಎಸ್.ಎಸ್.ಎಲ್.ಸಿ ಪಾಸು ಮಾಡಲು ಈಗಾಗಲೇ ಎರಡು ವರ್ಷ ತೆಗೆದುಕೊಂಡರೂ ಪಾಸಾಗಲಿಲ್ಲ. ಆದ್ದರಿಂದ ಪಟ್ಟಣಕ್ಕೆ ಹೋಗಿ ಟ್ಯೂಷನ್‌ಗೆ ಸೇರಿ ಪಾಸು ಮಾಡು ಎಂದು ಸಿಟ್ಟಿನಿಂದಲೇ ಹೇಳಿದರು. ತಂದೆಯ ಸಿಟ್ಟಿನ ಮಾತುಗಳಿಗೆ ಬೆಲೆಕೊಡದ ಮಗ ತನ್ನ ಮನಸ್ಸಿನಲ್ಲಿ ಹೋದ ವರ್ಷ ಬಂದ ಕಾಲರಾ ಗಲಾಟೇಲಿ ತಂದೆ ಸತ್ತಿದ್ರೆ ಚೆನ್ನಾಗಿತ್ತು ಅಂದುಕೊಳ್ಳುತ್ತಾನೆ. ಈ ಸಂದರ್ಭವು ಮೂರನೇ ಮತ್ತು ನಾಲ್ಕನೇ ಸಂಬಂಧವಲ್ಲ ಸ್ವತಃ ತಂದೆ-ಮಕ್ಕಳ ನಡುವೆ ನಡೆಯುವ ಕಲಹವಾಗಿದೆ. ತಂದೆಗೆ ಮಗನ ಇಚ್ಛೆಯೇನೆಂದು ಕೇಳುವ ಮನಸ್ಥಿತಿ ಇಲ್ಲ. ಮಗನಿಗೆ ತಂದೆಯ ಆಸೆಯೇನೆಂದು ತಿಳಿದುಕೊಳ್ಳುವ ವ್ಯವಧಾನವಿಲ್ಲ.

ದೊಡ್ಡೇಗೌಡರು ಹೆಂಡತಿ ಸತ್ತ ಮೇಲೆ ಮತ್ತೊಂದು ಮದುವೆ ಆಗಲಿಲ್ಲ. ಕಿರಿಯ ಮಗ ಲಕ್ಷ್ಮಣನಿಗೆ ಜನ್ಮ ಕೊಟ್ಟ ಹದಿನೆಂಟನೇ ದಿನಕ್ಕೆ ಸನ್ನಿ ಬಂದು ಹೆಂಡತಿ ಸತ್ತಳು. ತೊಟ್ಟಿಲಲ್ಲಿ ಹಾಲಿಗಾಗಿ ಅಳುವ ಮಗು ಲಕ್ಷ್ಮಣ, ತೆಕ್ಕೆಯಲ್ಲಿ ನಾಗಣ್ಣ, ಇನ್ನೊಂದು ತೆಕ್ಕೆಯಲ್ಲಿ ನಾಲ್ಕು ವರ್ಷದ ಗಂಗು ಇವರುಗಳನ್ನು ಸಾಕುತ್ತಾ ಹೆಂಡತಿಯ ನೆನಪಲ್ಲೇ ಉಳಿದರು. ವಿಧವೆಯಾಗಿ ಬಂದ ಸುಬ್ಬಕ್ಕನೊಂದಿಗೆ, ಎಷ್ಟೇ ಹತೋಟಿ ಮಾಡಿದರು ಅವರ ಮನಸ್ಸು ತಡೆಯದೆ ಅವಳೊಂದಿಗೆ ಅನೈತಿಕ ಸಂಬಂಧ ಹೊಂದಿದರು. ಸುಬ್ಬಕ್ಕ ಗಂಡ ಸಾಯುವ ಮೊದಲು ಒಂದು ಹೆಣ್ಣನ್ನು

ಎತ್ತಿದಳು ಅವಳ ಹೆಸರು ಕೆಂಪಿ. ಕೆಂಪಿಯೊಂದಿಗೆ ದೊಡ್ಡೇಗೌಡರ ಮಗ ನಾಗಣ್ಣ ಅನೈತಿಕ ಸಂಬಂಧ ಹೊಂದಿದ್ದನ್ನು ಕಂಡ ತಂದೆಗೆ ತಾನು ಮಾಡಿದ್ದು ತಪ್ಪೋ ಅಥವಾ ಮಗ ಮಾಡಿದ್ದು ತಪ್ಪೋ ಎಂದು ಚಿಂತೆಗೆ ಒಳಗಾಗುವನು. ಇಲ್ಲಿ ದಿಕ್ಕು ದೆಸೆಯಿಲ್ಲದ ವಿಧವೆ ಸುಬ್ಬಕ್ಕ ಮತ್ತು ಅವಳ ಮಗಳು ಕೆಂಪಿ ಇಬ್ಬರೂ ಪುರುಷನ ಹಿಡಿತಕ್ಕೆ ಒಳಪಟ್ಟು ಶೋಷಣೆಗೆ ಒಳಗಾಗುವರು. ಹೆಣ್ಣು ಮಕ್ಕಳಿಗೆ ರಕ್ಷಣೆ ಇಲ್ಲದ ಪರಿಸ್ಥಿತಿ ಮತ್ತು ಸಮಾಜದಲ್ಲಿ ಹೆಣ್ಣನ್ನು ಗೌರವಿಸಿ ಆದರಿಸುವ ಸ್ಥಿತಿಗಳು ಕಥೆಯಲ್ಲಿ ಕಾಣಬರದಿರುವುದು ಪ್ರಸ್ತುತವಾಗಿಯೂ ಕಾಣುತ್ತಿದೆ. ಇದೇ ಕಥೆಗಾರರ **'ಮಹಾನವಮಿ'** ಕಥೆಯಲ್ಲಿ ತಾಯಿ–ಮಗನ ನಡುವೆ ಸಣ್ಣ ಜಗಳವಾದರೂ ನಂತರದಲ್ಲಿ ಒಂದಾಗುವ ಸನ್ನಿವೇಶವಿದೆ. ಮಗ ಚಿಕ್ಕಣ್ಣನಿಗೆ, "ಹೆತ್ತು ಹೊತ್ತು ಸಾಕಿದೋಳ್‌ಗಿಂತ ಬಂದೋಳೇ ಜಾಸ್ತಿ ಆದ್ಲು ನಿಂಗೆ" ಎಂದಾಗ "ಅವಳ ಕಡ್ದು ಕಟ್ಲೆಗಾಕ್ಲಾ..?" ಮಗನ ಉತ್ತರ ಕೇಳಿ ತಾಯಿ ನಿಂಗಕ್ಕ ರೋಸಿಹೋಗಿ ಹಬ್ಬ ಬಂತು ಮನೆಯಲ್ಲಿ ಯಾವ ಸಿದ್ಧತೆಯು ನಡೆದಿಲ್ಲ ದುಡ್ಡು ಕೊಳೀತಾ ಬಿದ್ದದಾ ಎಂದು ರೇಗಿದಳು. ಈ ರೀತಿ ವಾದ–ವಿವಾದಗಳು ನಡೆಯುತ್ತಲೆ ಕಥೆ ಆರಂಭಗೊಂಡು ಅದೇ ಸಮಯದಲ್ಲಿ ಪಾಕಿಸ್ತಾನ–ಭಾರತಕ್ಕೂ ಯುದ್ಧ ನಡೆಯುತ್ತಿರುವ ವಿಚಾರ ಹಳ್ಳಿಯ ಮನೆ–ಮನೆಯಲ್ಲಿ ಸುದ್ಧಿಯಾಗಿ, ಚಿಕ್ಕಣ್ಣನ ಹೆಂಡತಿ ಪುಟ್ಟನಿಂಗಿ ತನಗೆ ತರುವ ಸೀರೆಯ ಬದಲು ಯುದ್ಧಕ್ಕೆ ಸಹಾಯವಾಗಿ ಸರ್ಕಾರಕ್ಕೆ ಹಣಕೊಟ್ಟು ಬನ್ನಿ. ಅತ್ತೆಯವರಿಗೆ ಮಾತ್ರ ಸೀರೆ ತನ್ನಿ ಎನ್ನುವ ಮಾತನ್ನು ಕೇಳಿದ ಅತ್ತೆ ನಿಂಗಕ್ಕ, ಸೊಸೆಗೆ ಬೇಡವಾದ ಸೀರೆ ತನಗೆ ಏಕೆ, ನನಗೂ ಸೀರೆ ಬ್ಯಾಡ ಮಗ ಆ ಸೀರೆಯ ದುಡ್ಡನ್ನು ಸರ್ಕಾರಕ್ಕೆ ಕೊಟ್ಟುಬಿಡು, ಎನ್ನುವ ಮಾತುಗಳ ಮೂಲಕ ಅತ್ತೆ–ಸೊಸೆಯರು ಮಾನವೀಯ ಮೌಲ್ಯಗಳ ಸಂಕೇತಗಳಾಗಿದ್ದಾರೆ. ಈ ಕಥೆಯಲ್ಲಿ ಕೌಟುಂಬಿಕ ಘರ್ಷಣೆ ಕಂಡುಬಂದರು ಕಥೆಗಾರರು ಘರ್ಷಣೆಗೆ ಆಸ್ಪದ ಕೊಡದೆ ಕಥೆಯನ್ನು ದೇಶಾಭಿಮಾನದಲ್ಲಿ ಅಂತ್ಯಗೊಳಿಸಿದ್ದಾರೆ. ಬೆಸಗರಹಳ್ಳಿ ರಾಮಣ್ಣ ಅವರ 'ಅವ್ವ' ಕಥೆಯಲ್ಲಿ ತಾಯಿ ವಾತ್ಸಲ್ಯ, ಮೌಲ್ಯಯುತ ಸಂಕೇತವಾಗಿದೆ. ಚನ್ನಣನ ಮಗ ಹಸು ಮೇಯಿಸಿಕೊಂಡು ಬರಲು ಹೋಗಿ ಜೋರಾದ ಮಳೆ ಬಂದು ಹಸು ತಪ್ಪಿಸಿಕೊಂಡಿರುತ್ತದೆ. ಹಸುವಿನ ಎರಡು ಕರುಗಳು ರಾತ್ರಿಯಿಡೀ 'ಅಂಬಾ–ಅಂಬಾ' ಎಂದು ಕೂಗುವುದನ್ನು ಕಂಡು ಚನ್ನಣ್ಣನಿಗೆ ತನ್ನ ಬಾಲ್ಯ ಜೀವನ ನೆನಪಾಗುವುದು. ಸಾಹುಕಾರ ವೀರಭದ್ರಯ್ಯನವರು "ಕೆಂಪಿ, ಕೆಂಪಿ

ಎಂದು ಕೂಗಿಕೊಂಡಾಗ, ಸ್ವಾಮಿ.. ಬಂದೆ ಸ್ವಾಮಿ ಬಡವಿ, ಜೊತೆಗೆ ಮುಂಡೆ. ಬಡ್ಡಿ ಕೊಡಲಾರದೆ ಅಸಲು ಕೊಟ್ಟು ಬಿಡ್ತಿನಿ"(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೩, ಪುಟ-೧೦೨) ಎಂದು ಇನ್ನೂರು ರೂಪಾಯಿಗಳನ್ನು ತೆಗೆದುಕೊಂಡು ಬಂದು ಕೊಟ್ಟಾಗ ವೀರಭದ್ರಯ್ಯ ಬಡ್ಡಿ ಕೊಡಲೇಬೇಕು ಎಂದು ಹಠ ಹಿಡಿದು, ನಿನ್ನ ಮಗನ್ನ ಎರಡು ವರ್ಷ ನಂಮನೇಲಿ ಜೀತಕ್ಕಿರಿಸು ಎಂದಾಗ, ಚನ್ನನ ತಾಯಿ ಕೆಂಪಿಯು "ಸ್ವಾಮಿ, ಇನ್ನೊಂದು ಸಾರಿ ಜೀತಕ್ಕೆ ನನ್ನ ಮಗನ್ನ ನಿಂಮನೇಲಿ ಇರ್ಸೊ ಅನ್ನೋ ವಾಕ್ಸು ನೀವು ಕಡೀಸಬ್ಯಾಡಿ" ಎಂದು ದಿಟ್ಟತನದಿಂದ ಉತ್ತರಿಸುತ್ತಾಳೆ. ಓಲೆ, ಕಡಗ, ಅಡಮಡಗಿ ಸಾಹುಕಾರನ ಮುಖಕ್ಕೇ ಒಡೆದಂತೆ ಬಡ್ಡಿ ಬಿಸಾಡಿ ತನ್ನ ಮಗನನ್ನು ಜೀತಕ್ಕಿರಿಸುವುದಿಲ್ಲ ಮುಂದೆಯೂ ಛಲದಿಂದ ದುಡಿದು, ಬದುಕುತ್ತಾಳೆ. ಇಲ್ಲಿ ಲಂಕೇಶರ 'ಅವ್ವ' ಕವಿತೆ ನೆನಪಾಗುವುದು. 'ಅವ್ವ' ಕವಿತೆಯಲ್ಲಿ ಗಂಡನಿಗಾಗಿ, ಮಕ್ಕಳಿಗಾಗಿ ಯೌವ್ವನದಲ್ಲಿ ಚಿಂದಿ ಸೀರೆಯನ್ನು ಹುಟ್ಟು ಸಾವಿನವರೆಗೂ ಇನ್ನೊಬ್ಬರಿಗಾಗಿ ದುಡಿದಳು. ಕೊನೆಗೆ ತ್ಯಾಗದಲ್ಲೇ ಅವಳ ಜೀವನ ಕೊನೆಗೊಂಡು ಸತ್ತಾಗ ಅಂದರೆ 'ಮನೆಯಿಂದ ಹೊಲಕ್ಕೆ' ಎನ್ನುವಲ್ಲಿ ಎರಡು ಹನಿ ಕೃತಜ್ಞತೆಯ ಕಣ್ಣೀರನ್ನು ತೋರಿರುವುದು ಲಂಕೇಶ್ 'ಅವ್ವನ' ವ್ಯಕ್ತಿತ್ವವನ್ನು ಎತ್ತಿ ತೋರಿಸಿದ್ದಾರೆ. ಇದೇ ರೀತಿ 'ಅವ್ವ' ಕಥೆಯಲ್ಲಿ ಸಾಲಕ್ಕಾಗಿ ತನ್ನ ಮಗನನ್ನು 'ಜೀತ'ಕ್ಕೆ ಇಡದೆ ತನ್ನ ಶಕ್ತಿ ಮೀರಿ ಹೋರಾಡಿ ಮಗನನ್ನು ಉಳಿಸಿಕೊಳ್ಳುತ್ತಾಳೆ. ಕಥೆಯಲ್ಲಿ ಜೀತ ಪದ್ಧತಿಯ ಮುಕ್ತಿಗೆ ಅನಕ್ಷರಸ್ಥ ತಾಯಿಯ ಮೂಲಕ ಪ್ರತಿರೋಧವನ್ನು ಅಭಿವ್ಯಕ್ತಿಸಿರುವುದನ್ನು ನಾವು ಕಾಣಬಹುದು.

**'ಬೇಲ'** ಇದೊಂದು ನೀಳ್ಗತೆ ಬೆಸಗರಹಳ್ಳಿ ರಾಮಣ್ಣನವರ ವ್ಯಕ್ತಿ ಅನುಭವದ ಕಥೆಯಂತೆಯೇ ಭಾಸವಾಗುತ್ತದೆ ಸ್ವತಃ ವೈದ್ಯರಾದ ಕಥೆಗಾರ ದೂರದ ಬಿಹಾರ ರಾಜ್ಯದ ಬಾಗಲಪುರ ಜಿಲ್ಲೆಗೆ ಸಿಡುಬು ನಿರ್ಮೂಲನ ಆಂದೋಲನಕ್ಕೆ ಹೋಗುವಂಥ ಸನ್ನಿವೇಶ ಮನೆ ಬಿಡುವಾಗ ತಂದೆ ಮತ್ತು ಪತ್ನಿ ತೋರಿಸಿದ ಹಿಂಜರಿತ, ತಾಯಿ ಕೊಟ್ಟ ಪ್ರೋತ್ಸಾಹ ಗಮನಾರ್ಹವಾಗಿದೆ. ಇವರು ಬಿಹಾರ ತಲುಪುವ ಹೊತ್ತಿಗೆ ಜಯಪ್ರಕಾಶ್ ನಾರಾಯಣರ ನೇತೃತ್ವದ ಎರಡನೇ ಸ್ವಾತಂತ್ರ್ಯ ಹೋರಾಟದ ಚಳವಳಿ ನಡೆಯುತ್ತಿರುತ್ತದೆ. ಈ ನಡುವೆಯೇ ವಿಶ್ವ ಆರೋಗ್ಯ ಸಂಸ್ಥೆಯ ಅಡಿಯಲ್ಲಿ ಸಿಡುಬು ನಿರ್ಮೂಲನ ಆಂದೋಲನವೂ ಜರುಗುತ್ತಿರುತ್ತದೆ. ಸ್ವತಃ ಕಥೆಗಾರರು ವೈದ್ಯರಾಗಿ ತನ್ನ ನಿಗದಿತ ಕ್ಯಾಂಪಿಗೆ ಸೇರಿಕೊಳ್ಳುವುದು ಪ್ರಾರಂಭದ ಅನುಭವ ಹೇಳಿಕೊಳ್ಳುತ್ತಿದ್ದಂತೆಯೇ ಕಥೆ ಸಿನಿಮೀಯ ರೀತಿಯಲ್ಲಿ

ಬದಲಾಯಿಸಿಕೊಳ್ಳುತ್ತದೆ. ಬಿಸಾಲ್ ಎಂಬ ಊರಿಗೆ ಪ್ರಯಾಣ, ಅಲ್ಲಿ ಚಮ್ಮಾರ್ ಕಾಲೋನಿಯಲ್ಲಿ ಸಿಡುಬು ರೋಗದ ಪತ್ತೆ ಕಾರ್ಯ ಜತೆಗೇ ಸಂಗೀತ, ನೃತ್ಯಗಾರ್ತಿಯಾದ ಸುಂದರಳಾದ ಬೇಲಾಳ ಪರಿಚಯ. ಒಂದಷ್ಟು ಸಂಭಾಷಣೆ, ವಿಶೇಷವಾಗಿ ಫಣೀಶ್ವರನಾಥರೇಣು, ಸುಮಿತ್ರಾನಂದನಪಂತರ ಸಾಹಿತ್ಯದ ಮಾತುಕತೆಗಳು ಹಾಗೂ ಲೇಖಕನ ಸಾಹಿತ್ಯದ ವಿಚಾರಗಳು ಬರುತ್ತವೆ.

ಸಿಡುಬು ರೋಗ ನಿವಾರಣೆ ಆಂದೋಲನಕ್ಕೂ ಮಿಗಿಲಾಗಿ ವೈದ್ಯ ಮತ್ತು ಬೇಲಳ ಪ್ರೀತಿ, ಪ್ರೇಮ, ಕಾಮದ ಕಡೆಗೆ ತಿರುಗುತ್ತದೆ. ಬೇಲಾಳ ನೃತ್ಯವನ್ನು ಆನಂದಿಸುವುದು ಅಲ್ಲಿಯೇ ರಾತ್ರಿ ಕಳೆಯುವುದು. ಇದಕ್ಕೆಲ್ಲ ಜೀಪ್ ಡ್ರೈವರ್ ಗೋಪಾಲ ಪ್ರಸಾದ್ ಸಹಕಾರ ಇದೆಲ್ಲ ಮುಂದುವರಿದಂತೆ ಒಂದು ಹಂತದಲ್ಲಿ ಸಿನಿಮಾದಲ್ಲಿ ತೋರಿಸುವಂತೆ ಬೇಲ ಮತ್ತು ವೈದ್ಯರ ನಡುವೆ ಕ್ಲೈಮ್ಯಾಕ್ಸ್ ಸೀನ್ ಬರುತ್ತದೆ. ಸಿಡುಬು ರೋಗ ನಿವಾರಣ ಆಂದೋಲನದ ಅವಧಿ ಮುಗಿಯುವ ಹೊತ್ತಿಗೆ ಬೇಲಾಳಿಂದ ಬೀಳ್ಕೊಟ್ಟು ತಡೆಯಲಾಗದ ಮನಸ್ಸಿನಿಂದ ಮರಳಿ ಬಂದಾಗ ಬೇಲ ನೆನಪಿಗಾಗಿ ಕೊಟ್ಟಿದ್ದ ಪೆಟ್ಟಿಗೆಯಲ್ಲಿ ಫಣೀಶ್ವರನಾಥರೇಣು ಅವರ ಕಾದಂಬರಿ 'ಮೈಲಾ ಅಂಚಲ್' ಹೊಚ್ಚ ಹೊಸ ಕೃತಿ ಇರುತ್ತದೆ. ಇದಕ್ಕೆ ಮುಂಚೆಯೇ ಲೇಖಕ ಬೇಲಾಳಿಗೆ ಬಹುಮಾನವಾಗಿ ನೀಡಿದ್ದ ಜರತಾರಿ ರೇಷ್ಮೇ ಸೀರೆಯಲ್ಲಿ ಅವಳು ಕೊಟ್ಟಂತೆ ಹಾಗೂ 'ಗಲ್-ಗಲ್' ಎನ್ನುವ ಅವಳ ಕಾಲ್ಗೆಜ್ಜೆಗಳನ್ನು ನೆನೆಯುವುದು ಎಲ್ಲೋ ಒಂದು ಕಡೆ ಕಥೆಗಾರ ಕಥೆ ಬರೆಯುವುದರಲ್ಲಿ ದ್ವಂದ್ವಕ್ಕೆ ಸಿಕ್ಕಂತೆ ಕಾಣುತ್ತದೆ. ಜಮಿನ್ದಾರಿ ಪದ್ಧತಿಯಲ್ಲಿ ದೊಡ್ಡವರ ಸಿರಿಗೆಂದೇ ಮೀಸಲಾದ ನರ್ತಕಿಯರ ಪರಂಪರೆಯಲ್ಲಿ ಬಂದಂಥ ಬೇಲಾಳ ಬದುಕು ಎಲ್ಲೋ ಅರ್ಧಕ್ಕೆ ನಿಂತಂತಾಯಿತು. ಅವಳಿಗೆ ಹೇಳಿಕೊಳ್ಳುವಂತಹ ಪರಿಹಾರ ಕಥೆಯಲ್ಲಿ ಕಾಣಲಿಲ್ಲ ಎನಿಸುತ್ತದೆ.

ಒಟ್ಟಾರೆ ಈ ನೀಳ್ಗತೆ ನಿರ್ದಿಷ್ಟ ಗುರಿ ಕಾಣದಿದ್ದರೂ ಸರಳವಾಗಿ ಓದಿಸಿಕೊಂಡು ಹೋಗುತ್ತದೆ. ಕಥೆಯ ನಡುವೆ ಸಿಡುಬು ನಿವಾರಣೆ ಆಂದೋಲನ ಮರೆಯಾಗಿ ಬಿಡುತ್ತದೆ. ಮತ್ತೇ ಬಲವಂತವಾಗಿ ತಂದುಬಿಡುವಂತಿದೆ. ಬೇಲಾಳದೇ ಪ್ರಮುಖ ವಿಷಯವಾಗಿ ಬಿಡುತ್ತದೆ. ಸಾಹಿತ್ಯದ ತೋರಿಕೆಯ ಪ್ರಸಂಗ ನಡೆದಂತಾಗುತ್ತದೆ. ಕಥೆಯ ಚೌಕಟ್ಟು ಎಲ್ಲೆ ಮೀರಿದಂತ್ತಾಗಿದೆ.

ಕಥೆಯ ಪ್ರಾರಂಭದಲ್ಲಿ ೧೯೭೪ರ ಜಯಪ್ರಕಾಶ್ ನಾರಾಯಣರ ಜನತಾ ಚಳವಳಿಗೆ ಹೊಂದಿಕೊಂಡಂತೆ ತಾಯಿಯ ಪ್ರೋತ್ಸಾಹದ ನುಡಿ ತಾಳೆಯಾಗುತ್ತದೆ.

"ಹೋಗು, ದೇಶದ ಕೆಲಸ ಮಾಡೋ ನಿನ್ನ ಆಸೆಗೆ ನಾನ್ಯಾಕೆ ಅಡ್ಡ ಬರ್ಲಿ. ಹುಟ್ಟಿದ ಮೇಲೆ ಮನುಷ್ಯ ಸಾಯ್ಲೇಬೇಕಲ್ಲ. ದೇಶದ ಕೆಲ್ಸ ಮಾಡ್ತಾ ಸತ್ರೆ ಅದೇ ಸ್ವರ್ಗ ಅಲ್ವೆ" (ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೩, ಪುಟ-೨೯೮). ಈ ತೀವ್ರತೆಯಲ್ಲಿ ನಡೆದಿದ್ದರೆ ಕಥೆಗೆ ಒಂದು ಸಾಂಧ್ರತೆ ಇರುತ್ತಿತ್ತು ಎನಿಸುತ್ತದೆ. ಸಿಡುಬಿನ ಪ್ರಥಮ ಸುದ್ದಿಯನ್ನು ತಿಳಿಸಿದವರಿಗೆ ನೂರು ರೂಪಾಯಿ ನಗದು ಬಹುಮಾನದ ದುರುಪಯೋಗವನ್ನು ಬಳಸಿಕೊಳ್ಳುವ ವ್ಯಕ್ತಿಯ ಬಾಯಲ್ಲಿ "ನಾನು ಮೂವತ್ತು ಜನರನ್ನು ಪತ್ತೆ ಹಚ್ಚಿದ್ದೀನಲ್ರಪ್ಪ" ಅಲ್ಲಿಗೆ ಮೂರುಸಾವಿರ ರೂಪಾಯಿ!! ಒಂದು ಸಾವಿರ ನೀವೇ ಹೆಂಡ ಕುಡಿದು, ಹುಡುಗೀರ ಕೈಲಿ ಡ್ಯಾನ್ಸ್ ಮಾಡ್ಸಿ, ಮಜಾ ಮಾಡಿ ಎಂಬ ಮಾತುಗಳಲ್ಲಿ ಗಟ್ಟಿತನವೂ ಜೊಳ್ಳಾಗುವ ಮಾರ್ಗದಲ್ಲಿ ನಡೆಯುತ್ತದೆ. ಅದೇ ವ್ಯಕ್ತಿ ತಕ್ಷಣವೇ ಮಾತು ಮುಂದುವರೆಸಿ "ಬೇಲ ಅಲ್ಲೇ ಹೊಸ ಹೊಸ ಹಾಡುಗಳನ್ನು ಕಟ್ಟಿ ಹಾಡೋಕೆ ಸುರು ಮಾಡಿದ್ರೆ, ಆಹಾ! ಅವಳ ಎಣ್ಣೆಗೆಂಪಿನ ಆ ಮುಖ, ಆ ಮೂಗು, ಆ ಜಿಂಕೆ ಕಣ್ಣುಗಳು, ಗಿಣಿ ಮೂಗಿನಂತಹ ಚೂಪಾದ ಎದೆಗಳು, ಬಳುಕುವ ನಡು, ಮೇಲಕ್ಕೂ ಕೆಳಕ್ಕೂ ಅವಳು ಹೇಳಿದಂತೆ ಕುಂಡಿಗಳು!"(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ,೧೯೮೩, ಪುಟ-೩೦೩) ಈ ವಿವರಣೆಯು ಕಥೆಯ ಮೂಲ ಸತ್ವವನ್ನೆ ತಿರುಚಿ ಬಿಡುತ್ತದೆ. ಬಿಹಾರದಲ್ಲಿನ ಜಮೀನ್ದಾರಿ ಪದ್ಧತಿಯನ್ನು ತೆಗೆದುಕೊಂಡು ಅವರು ಬಳಸಿಕೊಳ್ಳುತ್ತಿದ್ದ ಬೇಲಾಳಂಥ ಪ್ರತಿಭಾ ಶಕ್ತಿ ಸ್ತ್ರೀಯೊಬ್ಬಳ ಕಥೆಯನ್ನು 'ಬೇಲ' ಎಂಬ ಶೀರ್ಷಿಕೆಯ ಕಥೆಯಲ್ಲಿ ಪರಿಣಾಮಕಾರಿಯಾಗಿ ಚಿತ್ರಿಸಬಹುದಾಗಿತ್ತು. ಸಾಹಿತ್ಯ, ಸಂಸ್ಕೃತಿಯ ಮೂಸೆಯಲ್ಲಿ ಬೆಳೆದ ಬೇಲಾಳ ಬದುಕಿಗೆ ಒಂದು ಹೊಸ ಆಯಾಮವನ್ನು ನೀಡಿದ್ದರೆ ಅದಕ್ಕೊಂದು ಪರಿಹಾರ ದೊರಕಿಸಿದ್ದರೆ ಕಥೆಯಲ್ಲಿ ನೈಜತೆಯಿರುತ್ತಿತ್ತು.

ಕಥೆಯಲ್ಲಿ ಕಥೆಗಾರರೇ ಹಿಂದೆ ಇದ್ದ ಜಮೀನ್ದಾರಿ ಪದ್ಧತಿಯಲ್ಲಿ ಇಂಥ ನರ್ತಕಿಯರ ಬಗ್ಗೆ ಹೇಳುತ್ತಾರೆ. ಇಂತ ನರ್ತಕಿಯರು ನರ್ತಿಸಿ ಜೀವನ ಮಾಡುತ್ತಾರೆಂದರೆ ಎಲ್ಲರೂ ಸುಲಭವಾಗಿ ತಮ್ಮ ದೇಹ ವಿಕ್ರಯಿಸಿಕೊಳ್ಳುವುದಿಲ್ಲ. ಒಮ್ಮೊಮ್ಮೆ ಇಲ್ಲಿಯ ಸುಂದರ ನರ್ತಕಿಯರು ಮದುವೆ ಮತ್ತು ವಿಶೇಷ ಹಬ್ಬಗಳಿಗೆ ಹೋಗಿ ನರ್ತನ ಮಾಡುವಾಗ ಕೆಲವು ದುಷ್ಟ ಜನರು ಶಿಳ್ಳೆ ಹೊಡೆದು, ಪೋಲಿ ಮಾತುಗಳನ್ನಾಡಿ ತಮ್ಮ ಮೃಗೀಯ ಭಾವನೆಗಳನ್ನು ವ್ಯಕ್ತಪಡಿಸಿದಾಗ, ನೃತ್ಯವನ್ನು ಅಲ್ಲಿಗೇ ನಿಲ್ಲಿಸಿ, ಪ್ರತಿಭಟಿಸಿ, ತಮಗೆ ಮುಂಗಡವಾಗಿ ನೀಡಿದ್ದ ಹಣವನ್ನು ಹಿಂದಿರುಗಿಸಿ ತಮ್ಮ ಸಾರೋಟನ್ನು ಹತ್ತಿ ಊರಿಗೆ ಹಿಂದಿರುಗಿದ

ನಿದರ್ಶನಗಳಿವೆ. ಇಂಥ ಪಾರಂಪರಿಕ ವಿಷಯಗಳನ್ನು ತೆಗೆದುಕೊಂಡು ಬೇಲಾಳ ಇಂದಿನ ಸ್ಥಿತಿಯನ್ನು ಉತ್ತಮ ಮಟ್ಟಕ್ಕೆ ತೆಗೆದುಕೊಂಡು ಹೋಗುವಂಥ ಅವಕಾಶವನ್ನು ಬೇಲಾಳಿಗೆ ನೀಡಿದ್ದರೆ ಅದಕ್ಕೊಂದು ಉತ್ತಮ ವಾತಾವರಣ ಕಲ್ಪಿಸುವಂತಾಗಿತ್ತು. ಇಂದಿನ ಕಲುಷಿತ ವಾತಾವರಣದಲ್ಲಿಯೂ ಕಥೆಗಾರನಿಗೆ ಮನಸೋತ ಬೇಲಾಳ ಕಥೆಯನ್ನು ನಡು ನೀರಿನಲ್ಲಿ ಬಿಟ್ಟಂತಾಯಿತು. ಸುಮಿತ್ರಾನಂದನ್ ಪಂತರ ದೇಶಭಕ್ತಿ ಗೀತೆಗಳನ್ನು ಬೇಲಾಳ ಮೂಲಕ ಹಾಡಿಸಿದ ಲೇಖಕ ಅವಳ ದೈಹಿಕ ಸೌಂದರ್ಯದಲ್ಲಿ ಮಾರು ಹೋಗುವುದು ಕಥೆಯ ನ್ಯೂನ್ಯತೆಯಾಗಿದೆ.

ಬೆಸಗರಹಳ್ಳಿ ರಾಮಣ್ಣ ಅವರ **'ತಾಯಿ'** ಕಥೆಯಲ್ಲಿ ಶೀರ್ಷಿಕೆಗೆ ತಕ್ಕ ಹಾಗೆ ಪ್ರತ್ಯಕ್ಷ ದೈವವೆಂದೇ ತಾಯಿಯನ್ನು ನಿರೂಪಿಸಿದ್ದಾರೆ. ಮಗನಾಗಿ ಪುಟ್ಟರಾಜಪ್ಪನಿಗೆ ಉರುಗಮ್ಮ ಚೆನ್ನಮ್ಮನಿಗೆ ಮೋಸ ಮಾಡದಂತೆ, ಸೆಟ್ಟಿಯ ಲಂಚದ ಹಣಕ್ಕೆ ಆಸೆ ಪಡಬೇಡ. ನಿನಗೂ ಒಂದುಗಂಡು ಮಗುವಿದೆ ಧರ್ಮಕರ್ಮ ನೋಡು ಎಂದು ಬೇಡಿಕೊಳ್ಳುವಳು.

ಉರಗಮ್ಮನ ಮಾತು ಕೇಳಿ ಮಗ ಪುಟ್ಟರಾಜಪ್ಪ "ಸರ್ಕಾರಿ ವ್ಯವಹಾರವೆಲ್ಲ ನಿಂಗ್ಯಾಕೆ, ಆದಷ್ಟು ತಿಂದುಕೊಂಡು ಮೂಲೇಲಿ ಸಾಯೂಗಂಟ ಬಿದ್ದಿರೋದು ನೋಡ್ಕೊ"(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೬, ಪುಟ-೩೯೭)ಎಂದು ಚುಚ್ಚಿ ಮಾತನಾಡಿದನು. ಸೊಸೆ ಅತ್ತೆಗೆ "ಗಂಜಿ ಕುಡಿದೀಯೋ, ಅನ್ನ ಉಂಡೀಯಮ್ಮಾ" ಎಂದು ಕೇಳಿದಳು, ಸೊಸೆ ಯಶೋಧ ಗಂಡನ ನೋವಿನಲ್ಲಿ ಭಾಗಿಯಾಗಿರುವ ಈ ಸಮಯವನ್ನು ಬಿಡಬಾರದೆಂದು "ಏನು ಮಾಡಾಳು ಕಷ್ಟವೋ ಸುಖವೋ ತಂದಾಕ್ತೀರಿ. ಇವಳ ಔಷಧಿಗೇ ಅಂತ್ಲೆ ೪-೫ ಸಾವಿರ ಆಯ್ತು. ಇಲ್ದೆ ಇರೊದ್ನೆಲ್ಲ ಕೆದಕ್ಕೊಂಡು ಕ್ಯಾತೆ ತಗೀತಾಳೆ ಮೊದಲೇ ಗಾದೇ ಇಲ್ವೇ; ಎಮ್ಮೆಗೆ ಈಯೋ ದು:ಖ ಆದ್ರೆ, ಕೋಣನಿಗೆ ಕೊಸಿಯೋ ದು:ಖದಂತೆ, ನಿಮ್ಮ ಕಷ್ಟ ನಿಮ್ಗೆ; ಅವ್ಳ ಸುಮಾನ ಅವಳ್ಗೆ"(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೬, ಪುಟ-೩೯೭) ಎಂದು ಬೈಯುವಳು. ಸೊಸೆಯ ಈ ಮಾತುಗಳನ್ನು ಕೇಳಿ ಉರುಗಮ್ಮ "ಹಾಳ್ ದೇವ್ರು, ಆದಷ್ಟು ಬ್ಯಾಗ ಸಾವುಕೋಡೋ... ನಿನ್ನ ಮನೆ ಹಾಳಾಗೋಗ" ಬಿಕ್ಕಳಿಸಿ ಅಳುವಳು.

ಸೊಸೆ ಯಶೋಧ ಮತ್ತು ಅತ್ತೆ ಉರಗಮ್ಮನಿಗೆ ಜಗಳ ಪ್ರಾರಂಭವಾಗುವುದು, ಪುಟ್ಟರಾಜನ ವಿಷಯವಾಗಿ ತಾಯಿಗೆ ಮಗ ತಪ್ಪುದಾರಿ ಹಿಡಿದು ಹಣ ಸಂಪಾದಿಸಿ ಬಡವರ ಹೊಟ್ಟೆ ಒಡೆಯಬಾರದೆಂಬ ಆಸೆ. ಯಶೋಧ

ತನ್ನ ಗಂಡ ಯಾವ ಹಣ ಸಂಪಾದಿಸಿದರು ಐಷರಾಮಿಯಾಗಿ ಬದುಕುವ ಆಸೆ. ಅತ್ತೆ-ಸೊಸೆಯ ಮನಸ್ಥಿತಿಗಳು ಒಂದೇ ಸಮನಾಗಿ, ಇಲ್ಲದಿದ್ದರೆ ಜಗಳ ಪ್ರಾರಂಭವಾಗುತ್ತದೆ ಎನ್ನುವುದಕ್ಕೆ ಸ್ಪಷ್ಟ ಉದಾಹರಣೆ. ಹಿರಿಯರ ಅನುಭವದ ಮಾತುಗಳಿಗೆ ಎಳ್ಳಿನಷ್ಟು ಬೆಲೆ ಕೊಡದ ಯಶೋಧಳ ಮನಸ್ಥಿತಿ ಇಲ್ಲಿ ಎದ್ದು ಕಾಣುತ್ತದೆ. ಈ ತೆರನಾದ ಮನಸ್ಥಿತಿ ಕುಟುಂಬಕ್ಕೆ ಶೋಭೆ ತರಲಾರದು. ಇದರಿಂದ ಕುಟುಂಬದಲ್ಲಿನ ನೆಮ್ಮದಿ ನಾಶವಾಗುವುದನ್ನು ಕಥೆಯಲ್ಲಿ ಕಂಡುಬರುತ್ತದೆ.

ಬೆಸಗರಹಳ್ಳಿ ರಾಮಣ್ಣ ಅವರ **'ಮಗಳು'** ಕಥೆಯಲ್ಲಿ ಒಂದು ಹೆಣ್ಣು ಮಗಳು ಪ್ರತಿಭಟಿಸುವ ಮೂಲಕ ಹೆಣ್ಣಿನ ಮಾನ ರಕ್ಷಣೆಯನ್ನು ಕಾಪಾಡುವ ತಾತ್ವಿಕತೆ ಕಥೆಯಲ್ಲಿ ಮೂಡಿದೆ. ಡಾ॥ ಮರಿನಂಜೇಗೌಡ ಸರ್ಕಾರಿ ವೈದ್ಯನಾಗಿ ಹಾಗೂ ಅಧಿಕಾರಿಯಾಗಿರುತ್ತಾನೆ. ಸಮಾಜ ದೃಷ್ಟಿಯಲ್ಲಿ ಉತ್ತಮ ಹಾಗೂ ಶ್ರೀಮಂತನೆಂಬ ಪಟ್ಟ. ಆದರೆ ಆರೋಗ್ಯ ಕಾರ್ಯಕರ್ತೆ ಕುಸುಮ ಎಂಬುವಳ ಮೇಲೆ ಅತ್ಯಾಚಾರ ಮಾಡುತ್ತಾನೆ. ಕುಸುಮ ವೈದ್ಯನಲ್ಲಿ ಬೇಡಿಕೊಳ್ಳುವಳು ನಿಮ್ಮ ಮಗಳ ವಯಸ್ಸು ನನಗೆ ತಾನು ನೀತಿವಂತಳು ತನಗಾಗಿ ಮದುವೆಯಾಗುವ ವರ ನಿಶ್ಚಯವಾಗಿದೆ. ತನ್ನ ಬಾಳನ್ನು ಹಾಳು ಮಾಡಬೇಡಿ ಎಂದು ಕೇಳಿಕೊಂಡರೂ ಸಹ ಅವಳನ್ನು ಭೋಗಿಸುತ್ತಾನೆ. ಇದರಿಂದ ಕುಸುಮ ಪತ್ರದಲ್ಲಿ ಡಾ॥ ಮರಿನಂಜೇಗೌಡರ ಮಗಳು ಅನಿತಾಗೆ ನಡೆದ ವಿವರಗಳನ್ನು ಬರೆದು ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ.

"ಡಾ॥ ಮರಿನಂಜೇಗೌಡರ ಮಗಳು ಅನಿತಾ ವಯಸ್ಸೇ ಕುಸುಮನಿಗೂ ಆಗಿರುತ್ತೆ. ಹೆಣ್ಣಿನ ಕಷ್ಟವನ್ನು ಅರಿಯುವ ಅನಿತಾ ಅನಾಥ ಹಳ್ಳಿಗಾಡಿನ ನರ್ಸುಗಳ ಸಂರಕ್ಷಣೆಯಾಗಬೇಕು, ನಿನ್ನಂಥವರಿಂದ ಆಗಿರುವ ಕೊಲೆಯನ್ನು ಬಯಲಿಗೆಳೆಯಬೇಕೆಂದು ತಾನೇ ಖುದ್ದಾಗಿ ಎಸ್.ಪಿ.ಗೆ ಪೋನ್ ಮಾಡುತ್ತಾಳೆ. ಮರಿನಂಜೇಗೌಡ ಅಸಹಾಯಕನಾಗಿ ಹೆಂಡತಿ ಯಶೋಧಮ್ಮ ರಕ್ಷಣೆಯನ್ನು ಕೊಡುವಳೆಂದು ತಿಳಿದುಕೊಂಡ. ಆದರೆ ಯಶೋಧಮ್ಮನ ಬಾಯಿಂದ ಎಸ್.ಪಿ. ಗೆ ಪೋನ್ ಮಾಡಮ್ಮ"(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೭, ಪುಟ-೫೩೪) ಎಂಬ ಮಾತುಗಳು ಗುಂಡಿನಂತೆ ಬಂದವು. ಕಥೆಯಲ್ಲಿ ಸುಸಂಸ್ಕೃತ ಮನೆಯ ಹೆಣ್ಣು ಮಗಳು ತಂದೆಯಾಗಲೀ, ಗಂಡನಾಗಲೀ ತಪ್ಪು ಮಾಡಿದರೆ ಮುಚ್ಚಿ ಕೊಳ್ಳುವಂತ ತಪ್ಪನ್ನು ಮಾಡದೆ, ಮಾಡಿರುವ ತಪ್ಪಿಗೆ ಶಿಕ್ಷೆ ಹಾಗೂ ಪಶ್ಚಾತ್ತಾಪ ಎರಡೂ ಜರುಗುತ್ತದೆ. ಇದು ಸಮಾಜದಲ್ಲಿ ಬದಲಾವಣೆಯ ಪ್ರಯತ್ನ ಎನ್ನಬಹುದು. ಪ್ರಸ್ತುತ ಸಮಾಜದಲ್ಲಿ

ಮಾವ ಸೊಸೆಯ ಮೇಲೆ, ತಂದೆ ಮಗಳ ಮೇಲೆ, ಅಣ್ಣ ತಂಗಿಯ ಮೇಲೆ ಮಾಡುತ್ತಿರುವ ಲೈಂಗಿಕ ಕಿರುಕುಳಗಳ ಬಗ್ಗೆ ಕೇಳುತ್ತಿದ್ದೇವೆ ನೋಡುತ್ತಿದ್ದೇವೆ. ಇದನ್ನು ಪ್ರತಿಭಟಿಸುವ ಮನೋಸ್ಥೈರ್ಯವನ್ನು ಆ ಹೆಣ್ಣು ಮಕ್ಕಳೇ ತಿಳಿದು ತಮ್ಮನ್ನು ಉಳಿಸಿಕೊಳ್ಳುವ ಹಾಗೂ ಮತ್ತೊಂದು ಹೆಣ್ಣನ್ನು ಸಂರಕ್ಷಿಸುವ ಹೊಣೆಯನ್ನು ಹೊರಬೇಕಾಗುತ್ತದೆ. ಈ ಕಥೆಯಲ್ಲಿ ಮಗಳೆ ತಂದೆಗೆ ಶಿಕ್ಷೆಯನ್ನು ಕೊಡಿಸುವ ಮೂಲಕ ಸ್ತ್ರೀಸಬಲೀಕರಣವನ್ನು ಗುರುತಿಸುವಂತಿದೆ.

ಬೆಸಗರಹಳ್ಳಿ ರಾಮಣ್ಣ ಅವರ **'ಅಪ್ಪ'** ಕಥೆಯಲ್ಲಿ ಪ್ರತಿಯೊಬ್ಬ ತಂದೆಗೂ ತನ್ನ ಮಕ್ಕಳು ಸಮಾಜದಲ್ಲಿ ಉತ್ತಮ ಪ್ರಜೆಯಾಗಬೇಕೆಂದು ಹಂಬಲಿಸಿ ಬೆಳೆಸುತ್ತಾರೆ. ತನ್ನ ದುಡಿಮೆಯ ಬಹು ಭಾಗ ಮಕ್ಕಳ ಶಿಕ್ಷಣ ಮತ್ತು ಅವರ ಹಾರೈಕೆಗೆ ವಿನಿಯೋಗಿಸುತ್ತಾರೆ. ಒಳ್ಳೆಯ ಹುದ್ದೆಯನ್ನು ಪಡೆದು ಬಡವರ ಉಪಕಾರಿಯಾಗಲೆಂದು ಬಯಸುವ ತಂದೆ-ತಾಯಿಗಳು ಹೆಚ್ಚು. ಆದರೆ ಮಕ್ಕಳು ವಿರುದ್ಧ ದಿಕ್ಕಿನಲ್ಲಿ ನಡೆದು ಸಮಾಜ ಘಾತುಕನಾದರೆ ತಂದೆಯ ಸ್ಥಿತಿ ಚಿಂತಾಜನಕ. ಇಂತಹ ಚಿತ್ರಣ ಈ ಕಥೆಯಲ್ಲಿ ಮೂಡಿದೆ.

ಎಂಭತ್ತರ ಇಳಿ ವಯಸ್ಸಿನ ಮೇಲೆಗೌಡರು ಮಗ ಮಾಡಿರೊ ಅನ್ಯಾಯ ಹಣದಿಂದ ಮೊಮ್ಮಗ ಎಂ.ಬಿ.ಬಿ.ಎಸ್. ಮಾಡುವುದು ಸರಿಯಲ್ಲವೆಂದು ಮೊಮ್ಮಗನೊಂದಿಗೆ ಮಾತಾನಾಡುವಾಗ ಸೊಸೆ ಕೇಳಿಸಿಕೊಂಡು "ನಮ್ಮ ಹಂಗಿನಲ್ಲಿ ಇರುವ ನೀನು ನಮಗೆ ಕೆಟ್ಟದ್ದನ್ನು ಬಯಸಿ, ಮರ್ಯಾದೆ ಇಲ್ಲದೆ ಮಾತನಾಡುತ್ತಿರು" ಎಂದು ತಾಕೀತು ಮಾಡುವಳು.

ಮೇಲೆಗೌಡರ ಮಗ ಲಿಂಗಪ್ರಕಾಶ ಲೋಕೋಪಯೋಗಿ ಇಲಾಖೆಯ ಎಕ್ಸಿಕ್ಯುಟಿವ್ ಇಂಜನಿಯರ್ ರಸ್ತೆ, ಸೇತುವೆ ಬಿಲ್ಡಿಂಗ್ ಕೆಲಸಗಳನ್ನು ಮಾಡುವಾಗ ಮೋಸದಿಂದ ಹಣಗಳಿಸಿರುವುದನ್ನು ಅಪ್ಪನಾದ ಮೇಲೆಗೌಡರು ಇದು ಸರಿಯಾದ ಬದುಕುವ ದಾರಿಯಲ್ಲ ಎಂದು ಹೇಳುವರು. ಇದರಿಂದ ಕೋಪಗೊಂಡ ಮಗ ಲಿಂಗಪ್ರಕಾಶ "ಇಲ್ಲಿ ನೋಡಪ್ಪ! ತೀಟೆ ಇದ್ರೆ ಇಲ್ಲಿರು; ಇಲ್ದೇ ಹೋದ್ರೆ ನೀನು ಕೊಟ್ಟಿರೋ ಸಾಲದ ಪತ್ರ ಎಲ್ಲಾನೂ ತಕ್ಕೊಂಡು, ಎಲ್ಲಾನೂ ಮುಚ್ಕಂಡು ಮನೆಯಿಂದ ಆಚೆಗೆ ಹೋಗು! ಇವತ್ತಿಗೇ ಮಗಿದು ಹೋಲ್ಲಿ, ಅಪ್ಪ-ಮಗನ ಸಂಬಂಧ! ಥೂ! ನಿನ್ನ ಯೋಗ್ಯತೆಗೆ ಬೆಂಕಿ ಹಾಕ! ನನ್ ಕೈನ ಅನ್ನ ತಿಂದು ನನ್ ಮ್ಯಾಲೆ ಮಾತಾಡ್ತೀಯ? ನಿನ್ನಂಥ ಅಲಾಲ್ಕೋರನ್ನ ಅಪ್ಪಾ ಅನ್ನೋಬದ್ಲು: ಒಂದು ಕಂತ್ರಿ ಕಜ್ಜಿ ನಾಯಿಯ ಅಪ್ಪನ ಸಮಾನ ಅಂತ ಉಪಚಾರ ಮಾಡಿ ಸಾಕುದ್ರೆ ಪುಣ್ಯ

ಬತ್ತದೆ!"(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೭, ಪುಟ-೫೪೧) ಎನ್ನುವನು. ಆಧುನಿಕ ಐಷರಾಮಿ ಬದುಕಿನ ಆಕರ್ಷಣೆ ತಂದೆ ಮಗನ ನಡುವೆ ಬಿರುಕು ಉಂಟಾಗಿದೆ ಎಂದರೆ ತಪ್ಪಾಗಲಾರದು.

ತೀವ್ರ ನೋವನ್ನುಂಡ ಮೇಲೆಗೌಡರು ರಾತ್ರೋರಾತ್ರಿ ತಾವು ಸಾಲ ನೀಡಿದ ಪತ್ರಗಳನ್ನು ತೆಗೆದುಕೊಂಡು ತಮ್ಮ ಊರು ಮಬ್ಬೂರಿಗೆ ಬರಿಕಾಲಲ್ಲಿ ನಡೆದು ಬರುವರು. ದಣಿವಾಗಿದ್ದ ಮೇಲೆಗೌಡರನ್ನು ಮಬ್ಬೂರಿನ ದೊಡ್ಡಯ್ಯ ನೀರನ್ನು ಕುಡಿಸಿ ಸಮಾಧಾನದ ಮಾತುಗಳನ್ನು ಹೇಳುವನು. ಮೇಲೆಗೌಡರು "ಅಪ್ಪಾ! ನೀನು ನನಗೇನಾಗಬೇಕು? ನಾನು ನನ್ನವರು ಅನ್ನೋರು ಯಾರು ಇಷ್ಟು ಪ್ರೀತಿ, ಕರುಣೆಯಿಂದ ನನ್ನ ಒಂದು ಕ್ಷಣವೂ ನೋಡಿಕೊಳ್ಳಲಿಲ್ಲ. ಆದರೆ ಇವತ್ತು ನೀನು ಉರಿಯೋ ಒಡಲಿಗೆ ತಂಪು ಎರದೆ! ನೂರ್ಕಾಲ ಬಾಳು ನನ್ನಪ್ಪ!"(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೭, ಪುಟ-೫೩೪) ಎನ್ನುವ ಬದುಕಿನ ಅನುಭವದ ಮಾತುಗಳಾಗಿವೆ. ರಕ್ತ ಅಂಚುಕೊಂಡು ಹುಟ್ಟಿದ ಮಗ ತಂದೆಯನ್ನು ಅರ್ಥ ಮಾಡಿಕೊಳ್ಳಲಿಲ್ಲ. ರಕ್ತ ಸಂಬಂಧಿಗಳಲ್ಲದ ಇನ್ನೊಬ್ಬರು ಕಷ್ಟಕ್ಕೆ ಆಗುವರು ಎಂಬ ಅಂಶ ಕಥೆಯಲ್ಲಿ ವ್ಯಕ್ತವಾಗುತ್ತದೆ.

ಮೇಲೆಗೌಡರು ಊರ ಮುಂದಿನ ಗುಡಿಗಳ ಬಳಿ ಸಾಗಿದಾಗ ಹೊಲೇರ ಮುತ್ತ ಎದುರಾಗುವನು. ಬಸವಳಿದ ಮೇಲೆಗೌಡರನ್ನು ಹಿಡಿದು ಎಲ್ಲಮ್ಮ ಗುಡಿ ಬಳಿ ಕೂರಿಸುವನು. ಹೊಲೇರ ಮುತ್ತ ಸಾಲ ಪಡೆದು ಬಡ್ಡಿ ಕಟ್ಟಲು ಆಗದೆ ಸಮಯ ಕೇಳುವನು. ಆಗ ಮೇಲೆಗೌಡರು ನಿನ್ನ ಯಾವ ಸಾಲ ಕೇಳಿದ ಎನ್ನುತ್ತಾ ತಾನು ತಂದಿದ್ದ ಸಾಲಪತ್ರಗಳನ್ನು ಬೆಂಕಿಗೆ ಹಾಕಿ ನನ್ನ ಪಾಪವನ್ನು ಸುಡುತ್ತಿದ್ದೇನೆ ಎಂದು, ಉಸಿರಾಡುವುದನ್ನು ನಿಲ್ಲಿಸಿದರು. ಈ ಕಥೆಯಲ್ಲಿ ಬರುವ ಅಪ್ಪ-ಮಕ್ಕಳ ನಡುವಿನ ಭಿನ್ನಾಭಿಪ್ರಾಯಗಳು ದೇಶಕಾಲತೀತವಾಗಿದೆ. ಮನುಷ್ಯ ತಾನು ಬದುಕುವುದು ನೀರ ಮೇಲಣ ಗುಳ್ಳೆಯಂತೆ ತಿಳಿದು, ಹಾಗೂ ಸ್ವಾರ್ಥತತೆಯನ್ನು ಬಿಟ್ಟು ಎಲ್ಲರನ್ನು ಪ್ರೀತಿಸಿ, ಮಾನವೀಯತೆ ಬೆಳೆಸಿಕೊಳ್ಳುವುದು ನಮ್ಮೆಲ್ಲರ ಹೊಣೆಯಾಗಿದೆ.

ಎಚ್.ಎಲ್. ನಾಗೇಗೌಡ ಅವರ **'ಏಡಿ ಕಚ್ಚಿದ ಕೈ'** ಕಥೆಯಲ್ಲಿ ಪೂಜಾರಿ ಪುಟ್ಟಯ್ಯ ದಿನಾ ಏನಾದರೊಂದು ಮೀನು, ನಳ್ಳಿ ಇಲ್ಲದಿದ್ದರೆ ಅವನ ಗಂಟಲಿನಲ್ಲಿ ಹಿಟ್ಟು ಇಳಿಯುತ್ತಿರಲಿಲ್ಲ. ಅಂತಹ ದಿನ ಅವನ ಹೆಂಡತಿ ಮಾಯಮ್ಮ ಅಷ್ಟೆ ಚೆನ್ನಾಗಿ ಬೇರೆಸಾರು ಮಾಡಿದರು ಹೊಡೆದು ಬಡೆದು ಅವಳಿಗೆ ಹಿಂಸೆ ಕೊಡುತ್ತಿದ್ದ. ಈ

ಸನ್ನಿವೇಶವನ್ನು ಗಮಿನಿಸಿದರೆ ಇದೊಂದು ಪುರುಷ ಪ್ರಧಾನ ಕುಟುಂಬ ಎನ್ನುವುದಲ್ಲಿ ಅನುಮಾನವಿಲ್ಲ, ವ್ಯವಸ್ಥೆ ಮನೆಯ ಜವಾಬ್ದಾರಿಯನ್ನು ಮೇಲು ನೋಟಕ್ಕೆ ಪೂಜಾರಿ ಪುಟ್ಟಯ್ಯನೇ ಕಂಡು ಬಂದರು, ನಿಜವಾದ ಜವಾಬ್ದಾರಿ ಮಾಯಮ್ಮನದೇ ಆಗಿದೆ. 'ಸ್ತ್ರೀ' ಶೋಷಣೆಯು ಯಾವುದೇ ಪ್ರದೇಶಗಳಿಗೆ ಸೀಮಿತವಾಗದೆ, ಎಲ್ಲೆಡೆಯು ಕಾಣಬರುತ್ತದೆ. ಪೂಜಾರಿ ಪುಟ್ಟಯ್ಯ ಹೆಣ್ಣು ದೇವತೆಯಾದ ಮಾರಮ್ಮನ ಪೂಜೆಯನ್ನು ಮಾಡಿದರೂ ಅವನಿಗೆ ಅದರ ಅರ್ಥ ತಿಳಿಯದೆ ತನ್ನ ಹೆಂಡತಿಯು ಹೆಣ್ಣು-ಎಂಬುದನ್ನು ಗೌರವಿಸದೆ ಕೀಳಾಗಿ ಕಾಣುವನು. ತಾನು ಪೂಜಿಸುವ ದೇವತೆ ಹೆಣ್ಣು ಹಾಗೂ ಹೆಂಡತಿ ಹೆಣ್ಣು ಎಂಬ ಸಾಮಾನ್ಯ ಅರಿವಿಲ್ಲದವನ್ನಾಗಿ ಪೂಜಾರಿ ಪುಟ್ಟಯ್ಯ ಕಂಡುಬರುತ್ತಾನೆ. ಈ ಕಥೆಯಲ್ಲಿ ಶೋಷಣೆ ಮಾತ್ರ ಗೋಚರಿಸುತ್ತದೆ, ಅದರ ವಿರುದ್ಧ ಯಾವುದೇ ಪ್ರತಿಭಟನೆ ಕಾಣುವುದಿಲ್ಲ.

ಎಂ. ರಾಮಕೃಷ್ಣ ಅವರ **'ತೇರು ಬಂತು ತವರಿಗೆ'** ಕಥೆಯು ದುಃಖದಲ್ಲಿ ಮುಗಿದು ಹೋಗಬೇಕಾದ ಒಂದು ಹೆಣ್ಣಿನ ಬಾಳು ಇದ್ದಕ್ಕಿದಂತೆ ಅರಳಿಕೊಳ್ಳುವ ಈ ಕಥೆಯಲ್ಲಿ ಸಾಮಾಜಿಕ ಜೀವನದ ಮೇಲೆ ಅನುಕಂಪ ಮೂಡುತ್ತದೆ. ಕಥೆಯಲ್ಲಿ ಬರುವ ಪುಟ್ಟಚೆನ್ನಿ, ದೇವಕ್ಕ, ಚೆಲುವಕ್ಕ ಮುಂತಾದ ಸ್ತ್ರೀ ಪಾತ್ರಗಳು ಕೌಟುಂಬಿಕ ಜೀವನದ ಸ್ಥಿತಿ-ಗತಿಗಳನ್ನು ಪರಿಚಯಿಸುತ್ತದೆ. ಪುಟ್ಟಚೆನ್ನಿ ಚಿಕ್ಕ ವಯಸ್ಸಿನಲ್ಲೇ ವಿವಾಹವಾದ ನಂತರ ಗಂಡ ಮನೆ ಬಿಟ್ಟು ಹೋದ ಮೇಲೆ ಅತ್ತೆ ಮನೆಯಿಂದ ತೌರು ಮನೆಗೆ ಬಂದು ಸೇರುವ ಪರಿಸ್ಥಿತಿ ಒದಗುತ್ತದೆ. ಅತ್ತಿಗೆಯ ಉಡಾಫೆ ಮಾತು, ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದ ಅಣ್ಣನು ತನ್ನ ಬಗ್ಗೆ ತೋರುತ್ತಿದ್ದ ಅಸೂಯೆ, ಎಲ್ಲವನ್ನು ಸಹಿಸಿಕೊಂಡು ಜೀವನ ಸಾಗಿಸುತ್ತಿರುತ್ತಾಳೆ.

ಒಂದು ಕಾಲಕ್ಕೆ ಪುಟ್ಟಚೆನ್ನಿ ಪ್ರೀತಿ, ವಾತ್ಸಲ್ಯ ಎಲ್ಲವನ್ನೂ ತನ್ನ ಕುಟುಂಬದವರಿಂದ ಭರ್ಜರಿಯಾಗಿ ಪಡೆದವಳು ಈಗ ನಿತ್ರಾಣಳಾಗಿದ್ದಾಳೆ. ಆಕೆಯ ದೇಹ ನಿಶ್ಚಲ ಸ್ಥಿತಿಯಲ್ಲಿದೆ. ಕಥೆಗಾರರು ಪುಟ್ಟಚೆನ್ನಿಯ ಈ ನಿಶ್ಚಲ ದೇಹವನ್ನು ಒಣಗಿದ ತೆಂಗಿನ ಮರಕ್ಕೆ ಹೋಲಿಸಿದ್ದಾರೆ. 'ಕಾಲ ಎಂಬುದು ಲಾಳ ಇಲ್ಲದ ಕುದುರೆಯಂತೆ' ವಿಧಿಯಾಟಕ್ಕೆ ಹೆಣ್ಣು-ಗಂಡು ಎಂಬ ಯಾವ ವ್ಯತ್ಯಾಸವು ಇಲ್ಲ.

ಪುಟ್ಟಚೆನ್ನಿಯು ಈರಾಪುರದ ಜಾತ್ರೆಯ ಮೂಲಕ ತನ್ನ ಬಾಲ್ಯವನ್ನು ಮೆಲುಕು ಹಾಕುತ್ತಾ ಕುಳಿತಿರುತ್ತಾಳೆ. ಅದೇ ಸಂದರ್ಭದಲ್ಲಿ ಚೆನ್ನಿ ಹಗಲುಗನಸು

ಕಂಡಳು. ಕನಸಿನಲ್ಲಿ ತನ್ನ ಗಂಡ ಮಾದಪ್ಪ ಬಂದಿರುವ ಹಾಗೆ. ಇದಕ್ಕೆ ಪೂರಕವೆಂಬಂತೆ ದೇವಕ್ಕ ಹಗಲು ಹೊತ್ತಿನ ಕನಸು ನಿಜವಾಗುತ್ತದೆಂದು ತನ್ನ ಅನುಭವದ ಮೂಲಕ ಹೇಳಿರುವುದನ್ನು ನೆನಪು ಮಾಡಿಕೊಂಡಳು. ಊರಿಗೆ ಊರೇ ಜಾತ್ರೆಗೆ ಹೊರಟಿದ್ದುದರಿಂದ ಊರು ಪ್ರಶಾಂತವಾಗಿತ್ತು. ಆ ಮೌನವನ್ನೇ ಅನುಸಂಧಾನ ಮಾಡುತ್ತ ಮಲಗಿದ್ದ ಚೆನ್ನಿ ಇದ್ದಕ್ಕಿದ್ದಂತೆ ಬೆಚ್ಚಿದಳು. ಅತ್ತಿಗೆ ಧ್ವನಿ ಕೇಳಿಸಿದ ಹಾಗೆ ಇದೆಯೆಂದು ಮತ್ತೆ ಜಾತ್ರೆ ಬಿಟ್ಟು ಬರುವುದಿಲ್ಲ ಎಂಬ ಕನಸೆಂದುಕೊಂಡಳು. ಆದರೆ ನಿಜ ಸ್ಥಿತಿ ಅತ್ತಿಗೆ ಬಂದು ಕರೆದ್ದಿದಳು. ಗಂಡನ ಮನೆ ಬಿಟ್ಟು ಬಂದ ಮೇಲೆ ಕೀಳಾಗಿ ಕಾಣುತ್ತಿದ್ದ ತನ್ನನ್ನು ಈ ರೀತಿ ಕರೆಯುತ್ತಿರುವುದಕ್ಕೆ ಆಶ್ಚರ್ಯಪಟ್ಟಳು. ಈ ಜಾತ್ರೆ ಅತ್ತಿಗೆ ಮೂಲಕ ಅವಳಿಗೆ ಹೊಸ ಬದುಕನ್ನು ಹರ್ಷವನ್ನು ನೀಡುತ್ತದೆ. ಏಕೆಂದರೆ ಚೆನ್ನಿಯ ಗಂಡ ಮಾದಪ್ಪನು ಅತ್ತಿಗೆ ಜೊತೆ ಮನೆಗೆ ಬಂದುದು ಅವಳ ಬದುಕಿನ ಆಸರೆಗೆ ಗಟ್ಟಿಯಾಗುತ್ತದೆ.

ಸಾಮಾಜಿಕ ಬದುಕಿನಲ್ಲಿ ಮದುವೆಯಾದ ಹೆಣ್ಣಿಗೆ ಗಂಡನಿಲ್ಲದ ಬದುಕು ದುಸ್ತರವಾಗಿದೆ ಎಂಬುದನ್ನು ಈ ಕಥೆ ಧ್ವನಿಸುತ್ತದೆ. ಕಾರಣಾಂತರಗಳಿಂದ ಮನೆ ಬಿಟ್ಟು ಹೋದ ಮಾದಪ್ಪ, ನಂತರದ ಬದುಕಿನಲ್ಲಿ ಚೆನ್ನಿ ಅತ್ತೆ ಮತ್ತು ಓರಗಿತ್ತಿಯ ಒಡೆತ ಮತ್ತು ಕಿರುಕುಳಗಳು ಪ್ರಾರಂಭವಾದವು. ಚೆನ್ನಿಯ ಭಾವ ಹೃದಯವಂತಿಕೆಯುಳ್ಳ ವ್ಯಕ್ತಿಯಾದರೂ ಚೆನ್ನಿಯನ್ನು ರಕ್ಷಿಸುವಲ್ಲಿ ವಿಫಲನಾದನು. ಅತ್ತೆ ಮತ್ತು ಓರಗಿತ್ತಿಯ ಕಿರುಕುಳ ತಡೆಯಲಾರದೆ ಸಾಯಲು ನಿರ್ಧಾರ ಮಾಡಿದಾಗ ಅಣ್ಣನ ಮನೆಗೆ ಹೋಗಲು ಭಾವ ಸಲಹೆ ನೀಡುವನು. ಅಣ್ಣನ ಮನೆಗೆ ಹೋದರೆ 'ಅಣ್ಣ ನಮ್ಮೋನಾದ್ರೆ ಅತ್ತಿಗೆ ನಮ್ಮೋಳೆ' ಎಂಬ ಗಾದೆಯ ರೀತಿ ಚನ್ನಿಯ ಸ್ಥಿತಿಯಾಯಿತು. ಈ ವಿವರಣೆಗಳನ್ನು ನೋಡಿದಾಗ ಹೆಣ್ಣು ತವರಿನಲ್ಲಾಗಲಿ ಗಂಡನ ಮನೆಯಲ್ಲಾಗಲಿ ಸ್ವತಂತ್ರವಾಗಿ ಬದುಕುವುದು ಕಷ್ಟವೆಂಬುವುದು ತಿಳಿಯುತ್ತದೆ. ಪ್ರಸ್ತುತ ಚೆನ್ನಿಯ ಸ್ಥಿತಿಯೆ ಸಮಾಜದಲ್ಲಿನ ಬಹು ಮಂದಿ ಹೆಣ್ಣು ಮಕ್ಕಳ ಪರಿಸ್ಥಿತಿ ಇರುವುದು ವಾಸ್ತವಾಂಶವಾಗಿದೆ.

ಎಂ. ರಾಮಕೃಷ್ಣ ಅವರ **'ಕಾಮನ ಬಿಲ್ಲು'** ಕಥೆಯಲ್ಲಿ ನಮ್ಮ ಹಿಂದಿನ ಪರಂಪರೆಯಿಂದ ನಡೆದು ಬಂದ ಸಂಪ್ರದಾಯದಂತೆ ಹೆಣ್ಣು ಮಗಳು ಯೌವ್ವನ ಸ್ಥಿತಿಗೆ ಬಂದ ಕ್ಷಣ ತಂದೆ ತಾಯಿ ತಮ್ಮ ಜವಾಬ್ದಾರಿ ಮುಗಿಸಲು ಮದುವೆ ಮಾಡಿ ಮುಗಿಸುವ ಆತುರದಲ್ಲಿ ಆ ಹೆಣ್ಣಿನ ಬಾಳು ದುರಂತವಾಗುವುದನ್ನು ಬಿಂಬಿಸುತ್ತದೆ.

ಈ ಕಾಮನಬಿಲ್ಲು ಕಥೆಯಲ್ಲಿ ಬರುವ ಪುಟ್ಟ ತಾಯಿ ಮತ್ತು ಸಿದ್ಧಣ ದಂಪತಿಗಳ ಮೂಲಕ ಕುಟುಂಬದಲ್ಲಿ ಪತಿಯ ಪಾತ್ರದ ಪ್ರಾಮುಖ್ಯತೆ, ಪತಿ ದಾರಿ ತಪ್ಪಿದಾಗ ಸಂಸಾರದ ಅವ್ಯವಸ್ಥೆಯನ್ನು ಕಥೆಗಾರರು ಇಲ್ಲಿ ಚಿತ್ರಿಸಿದ್ದಾರೆ. ಜೊತೆಗೆ 'ಕೂತು ತಿನ್ನುವವನಿಗೆ ಕುಡಿಕೆ ಹೊನ್ನು ಸಾಕಾಗದು' ಎಂಬ ಅಂಶವನ್ನು ಈ ಕಥೆ ಒಳಗೊಂಡಿದೆ.

ಪತ್ನಿ-ಪತಿ ಒಬ್ಬರಿಗೊಬ್ಬರು ಅರ್ಥ ಮಾಡಿಕೊಂಡು, ಸಂಸಾರದ ಸಾರತೆಯನ್ನು ಅರಗಿಸಿಕೊಂಡಾಗ ಒಂದು ಸುಂದರವಾದ ಬದುಕು ರೂಪಿತವಾಗುತ್ತದೆ. ಇಲ್ಲವಾದರೇ ಅಸೂಯೆ, ಅನಾಚಾರಗಳು ಬದುಕನ್ನು ವಿರೂಪಗೊಳಿಸುತ್ತವೆ. "ನಾ ಕಾಣದ್ದೆ ಅದು. ಒಳಗಿಂದು ನಿಮಗೇನು ಗೊತ್ತಾದದು. ಪಾಲಾದ ಮೇಲೆ ಸಿದ್ಧಣ್ಣನ ಪಾಲಿಗೆ ಬಂದದ್ರಲ್ಲಿ ಅರ್ಧಾನೂ ಮಡಗಿಲ್ಲವಂತೆ. ಎಷ್ಟು ಹೊತ್ತೇಲೂ ಎಂತೆದೂ ಓಟ್ಲು ಮನೆ ತಾವೇ ಬಿದ್ದು ಸಾಯ್ತಾನಂತೆ. ಅಂತೋನು ಹೆಂಡ್ತೀನ ಸರಿಯಾಗಿ ನೋಡ್ಕತ್ತಾನ ಅಂತ"(ಎಂ. ರಾಮಕೃಷ್ಣ, ತೇರು ಬಂತು ತವರಿಗೆ-೧೯೭೦, ಪುಟ-೪೫). ಪುಟ್ಟತಾಯಿಯ ತಾಯಿ ಮಾತುಗಳಲ್ಲಿ ಯೋಗ್ಯನಲ್ಲದ ಹುಡುಗನಿಗೆ ಮಗಳನ್ನು ಕೊಡಲು ನಿರಾಕರಿಸುತ್ತಾಳೆ. ಆದರೆ ಪುಟ್ಟತಾಯಿಯ ತಂದೆ ಹೆಂಡತಿಯ ಮಾತುಗಳಿಗೆ ಗಮನಹರಿಸುವುದಿಲ್ಲ. "ಪಾಪ ಅದೆಲ್ಲ ನೋಡ್ಕಂಡಾನು ಹೇಳು. ಪಲ್ಲಕ್ಕಿ ಮೇಲೆ ಮೆರವಣಿಗೆ ಮಾಡಿ ಸುಪ್ಪತ್ತಿಗೆ ಮೇಲೆ ಕುಂಡ್ರಿಸಬೇಕೇನೋ ನಿನ್ನ ಮಗಳ್ನ, ನನಗೇ ಹೇಳೂಕೆ ಬತ್ತಾಳೆ ಕಣಯ. ಮದ್ವೆ ಆದ್ರೆ ಎಲ್ಲ ಸರೋಯ್ತದೆ. ಆಮೇಲೂ ಹಿಂಗೇ ಆಡಿದ್ರೆ ಕಂಡೋರು ಉಗ್ದು ಉಪ್ಪಾಕ್ತಾರೆ. ನೀನು ಈಗ ಬಾಯ್ಮುಚ್ಚಿಕೊಂಡು ಸುಮ್ನಿರು. ಆಗೂ ಕಾರ್ಯಕ್ಕೆ ಏನಾರ ಒಂದು ಮಾಡಬೇಡ"(ಎಂ. ರಾಮಕೃಷ್ಣ, ತೇರು ಬಂತು ತವರಿಗೆ, ೧೯೭೦, ಪುಟ-೪೫). ಈ ಮಾತುಗಳಲ್ಲಿ ಹೆಂಗಸರ ಮಾತಿಗೆ ಬೇಜವಾಬ್ದಾರಿತನದ ಉತ್ತರ ಗುರುತಿಸಬಹುದು. ತಪ್ಪು ದಾರಿ ಹಿಡಿದ ಹುಡುಗನಿಗೆ ಮದುವೆ ಮಾಡಿದರೆ ಸರಿ ಹೋಗುತ್ತಾನೆಂಬ ಮಾತುಗಳು ಹೆಣ್ಣನ್ನು ಬಲಿಪಶು ಮಾಡುವ ವ್ಯವಸ್ಥೆಯನ್ನು ನಿರೂಪಿಸಲಾಗಿದೆ. ಇಂದಿಗೂ ಅಡ್ಡದಾರಿ ಹಿಡಿದ ಹುಡುಗರಿಗೆ ಮದುವೆ ಮಾಡಿದರೆ ಸರಿ ಹೋಗುವನೆಂಬ ನಂಬಿಕೆಯಿಂದ ಎಷ್ಟೋ ಹೆಣ್ಣು ಮಕ್ಕಳ ಸ್ಥಿತಿ ಇರುಳ ಕಂಡ ಬಾವಿಗೆ ಹಗಲಲ್ಲಿ ಬಿದ್ದ ಸ್ಥಿತಿಯಾಗಿದೆ.

ಸಿದ್ಧಣ್ಣ ದಾರಿ ತಪ್ಪಲು ಕಾರಣವಾಗಿದ್ದ ಹಳ್ಳಿಯ ಹೋಟಲಲ್ಲಿ ಮಾತುಕತೆಗಳು ಹೊಳೆಯಾಗಿ ಹರಿದು ಬಯಲನ್ನೆಲ್ಲಾ ತುಂಬಿದ್ದಲ್ಲದೆ, ಆಡುತ್ತಿದ್ದ ತರತರದ ಭಕ್ಷ್ಯಗಳ ಮಸಾಲೆ ಬೆರೆತ ವಾಸನೆ ದಾರಿಹೋಕರ ಮೂಗನ್ನು ಸೇರಿ ಮನಸ್ಸಿಗೆ ಕುಣಿಕೆ ಹಾಕಿ ಎಳೆಯಬಲ್ಲುದಾಗಿತ್ತು. ಜತೆಗೆ ಕುಡಿಯಲೂ ಸಿಗುತ್ತಿದ್ದರಿಂದ ಬೇರೆ ದಾರಿಯಲ್ಲಿ ಹೋಗಬಹುದಾದರೂ ಬೇಕೆಂದೇ ಕಾರಣ ಹೇಳಿಕೊಂಡು ಆ ದಾರಿ ತುಳಿಯುತ್ತಿದ್ದರು. ಗಟ್ಟಿ ಕುಳಗಳೆನ್ನಿಸಿಕೊಂಡವರಿಗೆ 'ಕಡ' ಸಿಗುತ್ತಿದ್ದರಿಂದ ದಿನದಿನಕ್ಕೆ ಗಿರಾಕಿಗಳು ಹೆಚ್ಚಾದರು. ಹೀಗಾಗಿ ಸಿದ್ಧಣ್ಣ ನಾಲಗೆಗೆ ಸೋತು ಮೊದಲು ಕೇವಲ 'ಟೀ' ಕುಡಿಯಲು ಬರುತ್ತಿದ್ದವನು, 'ಸವರನ್' ಕುಡಿಯಲು ಕಲಿತದ್ದು ಆಕಸ್ಮಿಕವಾದರೂ ಮಂಡಣ್ಣನ ಗೆಳತನವೂ ಕಾರಣವಾಗಿತ್ತು. ಕ್ರಮೇಣ ತೋಟ ಬುಡನ್‌ಸಾಬರಿಗೆ ಸೇರಿತು. ಗದ್ದೆಗಳು ಒಂದೊಂದಾಗಿ ಅವರಿವರ ಪಾಲಾಗಿ ಉಳಿದದ್ದು ಕೇವಲ ಅರ್ಧ ಎಕರೆ ಮಾತ್ರ. ಪುಟ್ಟತಾಯಕ್ಕನಲ್ಲದೆ ಬೇರೆಯವರಾಗಿದ್ದರೆ ಎದೆ ಒಡೆದು ಸಾಯುತ್ತಿದ್ದುದ್ದು ಖಂಡಿತ. ಅಪ್ಪ ಅವ್ವ ಇರೂವರ್ಗೆ ಏನೋ ಒಂದು ಧೈರ್ಯ ಇತ್ತು. ಆದರೆ ಅವರು 'ಫ್ಲೂ' ಬಂದು ತೀರಿಕೊಂಡಮೇಲೆ ಪುಟ್ಟತಾಯಿಗೆ ಎಲ್ಲ ದಾರಿಗಳೂ ಕಾಣದಾದುವು. ಕೇವಲ ಕಾಲ ತಳ್ಳುವುದೊಂದೇ ಮಾರ್ಗವಾಯಿತು.

ಸಿದ್ಧಣ್ಣ ನೋಡಲು ಕಪ್ಪಗಿದ್ದರು ಧೃಡಕಾಯ ಹೊಂದಿರುವ ವ್ಯಕ್ತಿ. ಜೊತೆಗೆ ಮಾತು ಮಾತಿಗೆ ನಗುತ್ತಿದ್ದ ಹಗುರ ಮನಸ್ಸು. ಅಂಗ್ಲಟ್ಟಿ ಬುಸಿಯಪ್ಪನ ಮಗ. ಊರಿಗೆ ದೊಡ್ಡ ಶ್ರೀಮಂತ ಮನೆತನ. ಪುಟ್ಟತಾಯಿಯನ್ನು ಸಿದ್ಧಣ್ಣನಿಗೆ ಕೊಟ್ಟು ಮದುವೆ ಮಾಡಲಾಯಿತು. ಮದುವೆಯಾದ ಕೆಲವರ್ಷ ಪುಟ್ಟತಾಯಿ ಅಂಗ್ಲಟ್ಟಿಯ ಮಹಾರಾಣಿಯಾಗಿ ಮೆರೆದಳು. ಸಿದ್ಧಣ್ಣ ಬುಸಿಯಪ್ಪ ಬದುಕಿರುವವರೆಗೂ ಚೆನ್ನಾಗಿ ದುಡಿಯುತ್ತಿದ್ದವನು, ತಂದೆಯ ಮರಣದ ನಂತರ ಕೆಟ್ಟ ಚಟ ಕಲಿತು ಕುಡಿತಕ್ಕಾಗಿ ಜಮೀನು ಮನೆ ಮಾರುತ್ತಾ ಬಂದ. ಪುಟ್ಟತಾಯಿಗೆ ಸಿದ್ಧಣ್ಣನನ್ನು ಇದರ ಬಗ್ಗೆ ಪ್ರಶ್ನಿಸುವ ಧೈರ್ಯ ಇರಲಿಲ್ಲ. ಒಂದು ಕಾಲಕ್ಕೆ ಮೆರೆದ ಶ್ರೀಮಂತ ಕುಟುಂಬ ಬೀದಿ ಪಾಲಾಗುತ್ತದೆ. ಹಸಿವು, ಬಡತನದ ಸೋಂಕು ತಗುಲಿದ ಪುಟ್ಟತಾಯಿಯ ಜೀವನ ಸಿದ್ಧಣ್ಣನಿಂದ ಬೀದಿ ಪಾಲಾಗುತ್ತದೆ. ಮಕ್ಕಳನ್ನು ಕಟ್ಟಿಕೊಂಡು ಪುಟ್ಟತಾಯಿ ನಿತ್ಯ ಗಂಡನನ್ನೆ ಹುಡುಕುವುದೇ ಅವಳ ಕೆಲಸವಾಗಿರುತ್ತದೆ. ಕೊನೆಗೊಂದು ದಿನ, ಸಿದ್ಧಣ್ಣ ಅತಿಯಾಗಿ ಕುಡಿದಿದ್ದರಿಂದ ಅವನ ದೈಹಿಕ ಸ್ಥಿತಿ ಹದಗೆಡುತ್ತದೆ. ಮುಂದೆ ಏನು ಮಾಡುವುದೆಂದು ತೋಚದ

ಪುಟ್ಟತಾಯಿ ಕಾಡಿ ಬೇಡಿ ವೈದ್ಯರನ್ನು ಮನೆಗೆ ಕರೆತರುತ್ತಾಳೆ. ವೈದ್ಯರು "ನಿನ್ನ ಗಂಡ ಬದುಕುಳಿಯುವುದು ದೈವೇಚ್ಛೆ. ವಿಷಪೂರಿತ ಕುಡಿತದಿಂದ ಕರುಳು ಬೆಂದುಹೋಗಿದೆ" ಎನ್ನುತ್ತಾರೆ. ತಕ್ಷಣ ಸಿದ್ಧಣ್ಣನಿಗೆ ರಕ್ತವಾಂತಿಯಾಗಿ ದೇಹ ನಿಶ್ಚಲ ಸ್ಥಿತಿಗೆ ಬಂದು, ಆತ್ಮ ಹಳೆ ಬಟ್ಟೆಯನ್ನೆಸೆದು ಮುಂದೆ ಹೊರಟಿತು. ನಮ್ಮ ಸಮಾಜದಲ್ಲಿ ಕುಡಿತ ಅಥವಾ ದುಶ್ಚಟಗಳಿಗೆ ಬಲಿಯಾದ ಗಂಡನನ್ನು ಕಟ್ಟಿಕೊಂಡ ಎಷ್ಟೋ ಹೆಣ್ಣು ಮಕ್ಕಳ ಸ್ಥಿತಿ ಪುಟ್ಟತಾಯಿಯ ಸ್ಥಿತಿಯಂತಾಗಿದೆ. ಕಥೆಗಾರರು ಜೀವನದ ವಾಸ್ತವಾಂಶಗಳನ್ನು ಸೂಕ್ಷ್ಮವಾಗಿ ಗ್ರಹಿಸಿ ಕಥೆ ಎಣಿದಿದ್ದಾರೆ. ಇಲ್ಲಿ ಕಥೆಗಾರರು 'ವಿಧಿ, ಆತ್ಮ' ಎಂಬ ಪದ ಪ್ರಯೋಗಗಳನ್ನು ಬಳಸಿದ್ದಾರೆ. ಇದು ಅವರ ಆಧ್ಯಾತ್ಮ ದೃಷ್ಟಿ ಕೋನವಾಗಿರಬಹುದು.

ಎಂ. ರಾಮಕೃಷ್ಣ ಅವರ **'ಹಿಮಮಣಿ'** ಕಥೆಯಲ್ಲಿ ಬರುವ ಜಯಾ ಪಾತ್ರದ ಮೂಲಕ ಕಥೆಗಾರರು ಸಮಾಜದಲ್ಲಿ ಸ್ತ್ರೀಯರು ಎದುರಿಸುತ್ತಿರುವ ಕೌಟುಂಬಿಕ ಹಿಂಸೆಗಳನ್ನು ಮನೋಜ್ಞವಾಗಿ ಚಿತ್ರಿಸಿದ್ದಾರೆ. ಕಾಲ ಎಂಬುದು ಲಾಳವಿಲ್ಲದ ಕುದುರೆಯ ರೀತಿ. ಇದು ಹಲವು ನೆನಪುಗಳ ಮೇಲೆ ಸವಾರಿ ಹೊರಟಾಗ ಕೆಲವು ದೃಶ್ಯ ಕತ್ತಲು, ಬೆಳಕಿನಿಂದ ಕೂಡಿರುತ್ತದೆ. ಇಂತಹ ಕಾಲದ ಒಡೆತಕ್ಕೆ ಸಿಕ್ಕಿ ಬಲಿಯಾದ ಜೀವಗಳೆಷ್ಟೋ ತಿಳಿಯದು. ಜಯಾ ಒಬ್ಬ ಸಾಮಾನ್ಯ ಮುಗ್ದ ಹೆಣ್ಣು ಮಗಳು. ಸ್ನೇಹಿತರ ಜೊತೆ ಗಂಡು ಹೆಣ್ಣು ಎಂಬ ಭೇದವಿಲ್ಲದೆ ಆಡುತ್ತಾ ಬೆಳೆದವಳು. ಆದರೆ ಅವಳು ಅಪ್ರಾಪ್ತ ವಯಸ್ಸಿಗೆ ಬಂದಾಗ ತಾಯಿಯಿಂದ ಹುಡುಗರ ಜೊತೆ ಆಟವಾಡಲು ವಿರೋಧ ವ್ಯಕ್ತವಾಗುತ್ತದೆ. ಗೀಜುಗದ ಹಕ್ಕಿ ಮೊಟ್ಟೆಯನ್ನು, ಕುಂಬಳಕಾಯಿಯನ್ನು, ಕೀರೆ ಮಡಿಯನ್ನು ರಕ್ಷಣೆ ಮಾಡುತ್ತಾ ಪುಟ್ಟ ತಂಗಿ, ತಮ್ಮನ ಹಾರೈಕೆ ಮಾಡುತ್ತಾ ತನ್ನ ಬಾಲ್ಯವನ್ನು ಕಳೆದವಳು ಜಯ.

ಗಂಡ ಎಂದರೇನು? ಸಂಸಾರ, ಮಕ್ಕಳು ಎಂದರೇನು? ಎಂದು ತಿಳಿಯದ ವಯಸ್ಸಿನಲ್ಲೇ ವಿವಾಹವಾಗಿ ಕುಟುಂಬದ ಜವಾಬ್ದಾರಿ ಹೊತ್ತಳು. ದೇವಣ್ಣನೊಡನೆ ಇವಳ ವಿವಾಹವಾದ ಅಂದಿನಿಂದ ಈಕೆ ಸಾಯುವವರೆಗೂ ಕುಟುಂಬಕ್ಕಾಗಿ ಗಾಣದ ಎತ್ತಿನ ರೀತಿ ದುಡಿಯುತ್ತಾಳೆ. ಸಮಾಜದಲ್ಲಿ ಕೆಲವು ಸಂಪ್ರದಾಯ ಕುಟುಂಬಗಳ ಪ್ರಕಾರ ಹೆಣ್ಣಿನ ಜೀವನ ಸಾರ್ಥಕವಾಗುವುದು ಮದುವೆಯಾದಾಗ ಗಂಡು ಮಕ್ಕಳನ್ನು ಹಡೆದಾಗ. ಒಟ್ಟಾರೆಯಾಗಿ ಕಥೆಗಾರರ ಪ್ರಕಾರ ಹೇಳುವಂತೆ "ಏನು ಜನ, ಹೆಂಗಸು ಪರ್ಯಾಯವಾಗಿ ಗರ್ಭಿಣಿ, ಅಥವಾ ಬಾಣಂತಿಯಾಗಲೇ ಬೇಕೆ.? ಇಲ್ಲದಿದ್ದರೆ ಬದುಕಿನಲ್ಲಿ ಅರ್ಥವಿಲ್ಲವೇನೋ. ಏನಾದರೊಂದು ಮಾಡಬೇಕು.

ಏನಾದರೊಂದು ಆಗಿರಬೇಕು ಬಸಿರಿ ಇಲ್ಲ ಬಾಣಂತಿ. ಸೋಮಾರಿಯಾಗಿರ ಬಾರದು"(ಎಂ. ರಾಮಕೃಷ್ಣ, ತೇರು ಬಂತು ತವರಿಗೆ, ೧೯೭೦, ಪುಟ-೮೩). ಇದು ಸಮಾಜದಲ್ಲಿ ಹೆಣ್ಣಿನ ಮೇಲೆ ಏರಿರುವ ಸಂಪ್ರದಾಯದ ಮೂಟೆ ಎಂದು ಮರುಕ ವ್ಯಕ್ತಪಡಿಸಿದ್ದಾರೆ.

ಜಯಾಳ ಜೊತೆ ಬಾಲ್ಯವನ್ನು ಕಳೆದ ಶಂಕ್ರು ಅವಳ ಸ್ಥಿತಿಗೆ ಮರುಗುತ್ತಾನೆ. ಗಂಡು ಮಕ್ಕಳೊಡನೆ ಆಡಲು ಬರುತ್ತಿದ್ದ ಆಕೆಯ ವರ್ಚಸ್ಸು, ಮುನಿಸು, ಹಠ ಇವೆಲ್ಲ ಇದ್ದ ಜಯಾ ಈಗ ಜವಾಬ್ದಾರಿಯುತ ಪುಟ್ಟ ಹೆಂಗಸಾದುದನ್ನು ನೋಡಿ ಶಂಕ್ರುವಿಗೆ ಆಶ್ಚರ್ಯವಾಗುತ್ತದೆ. ಈರಾಪುರಕ್ಕೆ ರಜೆಗೆಂದು ಬಂದಿದ್ದ ಶಂಕ್ರು ಜಯಾಳ ಮನೆ ಬಳಿಗೆ ಬರುತ್ತಾನೆ. ಜಯಾ ಶಂಕ್ರನನ್ನು ಒಳಗೆ ಕರೆದು ಅತಿಥಿ ಉಪಚಾರ ಮಾಡುತ್ತಾಳೆ. ಜೊತೆಗೆ ತನ್ನ ನಾಲ್ಕು ಮಕ್ಕಳನ್ನು ಶಂಕ್ರನಿಗೆ ಪರಿಚಯ ಮಾಡಿಕೊಡುತ್ತಾಳೆ.

ಶಂಕ್ರನಿಗೆ ಜಯಾಳ ನಿಶ್ಚಲವಾದ ದೇಹದ ಸ್ಥಿತಿ ಕಂಡು ಮರುಕ ಉಂಟಾಗಿ ವೈದ್ಯರನ್ನು ಭೇಟಿ ಮಾಡಲು ಸಲಹೆ ಕೊಡುತ್ತಾನೆ. ಜಯಾ ಶಂಕ್ರುವಿನ ಮಾತಿಗೆ ನನ್ನದೊಂದು ಮಾತು ನಡೆಸಿಕೊಡಬೇಕೆಂದು ಕೇಳುತ್ತಾಳೆ. "ಏನೂ ಇಲ್ಲ ನಮ್ಮ ಲಕ್ಷ್ಮೀ ನೋಡಿದ್ದೀಯಲ್ವೇ ಅವಳನ್ನು ನೀನೇ ಮದ್ವೆ ಮಾಡ್ಕೋತೀನಿ ಅಂದ್ರೆ ನೋಡಪ್ಪ ನನಗೆ ಎಲ್ಲಾ ಭಾಗ್ಯ ಬಂದಂಗೇ"(ಎಂ. ರಾಮಕೃಷ್ಣ, ತೇರು ಬಂತು ತವರಿಗೆ, ೧೯೭೦, ಪುಟ-೮೨) ಎಂದು ಹೇಳೀ ಕುತೂಹಲದಿಂದ ನೋಡಿದಾಗ ಆ ನಿಸ್ತೇಜ ಕಣ್ಣುಗಳಲ್ಲಿಯೂ ಬೆಳಕು ಹೊಮ್ಮಿತು. ಇಡೀ ಜೀವನವನ್ನೇ ಬೇರೆಯವರಿಗಾಗಿಯೇ ತೇದು ಗಂಧವಾಗುವ ಜನ್ಮ ಹೆಣ್ಣಿನದು. ಜಯಳ ಆಸೆಯಲ್ಲಿ ತಪ್ಪಿಲ್ಲದಿದ್ದರೂ ಆತುರವಿತ್ತಷ್ಟೆ. ತನ್ನ ಮನಸ್ಸಿನಲ್ಲಿ ನನ್ನ ಸಮ ವಯಸ್ಕಳಾದ ಜಯಾ ಜೀವನ ಯಾತ್ರೆ ಮುಗಿಸಿದ್ದಾಳೆ. ನನ್ನ ಜೀವನದಲ್ಲಿ ಆಗದೇ ಇರುವ ಎಲ್ಲಾ ಅನುಭವವನ್ನು ಚಿಕ್ಕ ವಯಸ್ಸಿನಲ್ಲೇ ಪಡೆದಿದ್ದಾಳೆ ಎಂದು ಆಕೆಯ ಹದಗೆಟ್ಟಿದ್ದ ಆರೋಗ್ಯವನ್ನು ಕಂಡು ಬೇಸತ್ತು ಹೊರಗೆ ಬರುತ್ತಾನೆ. ನಿರಂತರವಾಗಿ ಒಂದರ ಹಿಂದೆ ಒಂದು ಮಗುವಿನ ಜನನವಾದ್ದರಿಂದ ಆಕೆ ಅನಾರೋಗ್ಯಕ್ಕೆ ತುತ್ತಾಗಬೇಕಿತ್ತು. ನಂತರ ಎರಡೂವರೆ ವರ್ಷದ ನಂತರ ಜಯಾ ಇಹಲೋಕ ತ್ಯಜಿಸುತ್ತಾಳೆ.

ಬಾಲ್ಯದಲ್ಲಿ ಆಕೆ ಕಟ್ಟಿದ್ದ ಕನಸಿನ ಗೋಪುರ ನುಚ್ಚು ನೂರಾಯಿತು. ಅವಳ ಬಾಲ್ಯವೇ ವಿವಾಹದೊಂದಿಗೆ ಆಡಿ ನಲಿಯಬೇಕಿದ್ದ, ವಿದ್ಯೆ ಕಲಿತು ಪರೋಪಕಾರಿ

ಆಗಬೇಕಿದ್ದ ಜಯ ಚಿಕ್ಕ ವಯಸ್ಸಿನಲ್ಲೇ ಎಲ್ಲಾ ಕೌಟುಂಬಿಕ ಹಿಂಸೆಯನ್ನು ಅನುಭವಿಸಿದಳು. ಶಂಕ್ರುವಿಗೆ ಸಿಕ್ಕ ವಿದ್ಯೆ ಜಯಾಳಿಗೆ ಸಿಕ್ಕಲಿಲ್ಲ. ಶಂಕ್ರು ಓದಲೇಬೇಕೆಂಬ ಹಠ ಮನೆಯವರಿಗೆ, ಜಯಾ ಓದುವ ಅವಶ್ಯಕತೆಯಿಲ್ಲ ಎಂಬ ಭಾವನೆ ಮತ್ತೊಂದು ಕಡೆ. ಇದು ಸ್ತ್ರೀ ಪುರುಷರ ನಡುವೆ ಇರುವ ಭೇದ ಭಾವವನ್ನು ಸೂಚಿಸುತ್ತದೆ. ಜಯಾ ಸಂಪ್ರದಾಯಕ್ಕೆ ಬಲಿಯಾದ ಮುಗ್ಧ ಹೆಣ್ಣು ಮಗಳು. ಈಕೆಯ ಬದುಕು ನರಕ ಸದೃಶ್ಯ. ಗ್ರಾಮೀಣ ಪ್ರದೇಶಗಳಲ್ಲಿ ಬಾಲ್ಯವಿವಾಹದ ದುರಂತವೆ ಈ ಪರಿಯಾಗಿದೆ. ಓದಲು-ಆಡಲೂ ಕೇವಲ ಹುಟ್ಟಿನಿಂದ ಆರೇಳು ವರ್ಷಗಳಷ್ಟೆ ಹೆಣ್ಣು ಮಕ್ಕಳ ಭಾಗ್ಯ. ಆದರೆ ಇಂದು ಜಾಗತೀಕ ಸಂದರ್ಭದಲ್ಲಿ ಬಾಲ್ಯವಿವಾಹ ಕಡಿಮೆಯಾಗಿದೆ, ಕುಟುಂಬ ಯೋಜನೆ ಬಗ್ಗೆ ಅರಿವಿದೆ. ಸಮಾಜದಲ್ಲಿ ಪರಿವರ್ತನೆ ಸ್ಥಿತಿಯನ್ನು ಕಂಡರು ಕೂಡ ಕೆಲವು ಭಾಗಗಳಲ್ಲಿ ಬಾಲ್ಯವಿವಾಹ ನಡೆಯುತ್ತಿರುವುದು ವಿಪರ್ಯಾಸ ಸಂಗತಿ. (ಮಂಡ್ಯ ಜಿಲ್ಲೆಯಲ್ಲಿ ಬಾಲ್ಯವಿವಾಹ ಬಹಳ ಕ್ಷೀಣಿಸಿದೆ ಕಾರಣ ಹೆಣ್ಣು ಮಕ್ಕಳಿಗೆ ದೊರಕುತ್ತಿರುವ ಶಿಕ್ಷಣ)

ಜಿ. ವೆಂಕಟಯ್ಯ ಅವರ **'ಮಗಳ ಮಾಂಗಲ್ಯ'** ಕಥೆಯಲ್ಲಿ ಬರುವ ಪಾತ್ರಗಳು ಬದುಕಿನ ನೈಜತೆಯನ್ನು ತೋರುತ್ತದೆ. ಕಥೆಯ ಪ್ರಾರಂಭದಲ್ಲಿ ಹೆಣ್ಣಿನ ಅಸೂಯೆ ಸಂಸಾರವನ್ನು ವಿಭಜಿಸುತ್ತದೆ. ಕೊನೆಗೆ ಸಂಕಟಕ್ಕೆ ಕಾರಣವಾಗುತ್ತದೆ ಎನ್ನುವುದನ್ನು ಚಿತ್ರಿಸಿದ್ದಾರೆ. ತನಗೆ ಚಿಕ್ಕ ಹುಡುಗಿಗೆ ಮಕ್ಕಳಾಗುವುದ ಅಸೂಯೆಗೆ ಕಾರಣವಾಗುತ್ತದೆ. ಈ ಸಂದರ್ಭವು ಹೆಣ್ಣು ಮತ್ತೊಂದು ಹೆಣ್ಣಿನ್ನು ಶೋಷಿಸುವ ಪ್ರವೃತಿಯನ್ನು ತೋರುತ್ತದೆ.

ಇದೇ ಕಥೆಗಾರ **'ಗೋಡೆಗಳ ನಡುವೆ'** ಕಥೆಯಲ್ಲಿ ಸಾಂಸಾರಿಕ ಕಲಹದಿಂದ ಮನೆಯೊಂದು ಮೂರು ಪಾಲಾಗುತ್ತದೆ. ಹಾಗಾಗಿ ಗೋಡೆಗಳ ನಡುವೆ ಎಂಬ ಶೀರ್ಷಿಕೆ ಅರ್ಥಗರ್ಭಿತವಾಗಿದೆ. ಕುಟುಂಬ ಎಂಬುದು ಒಂದು ಸಮಾಜದ ಆಧಾರಸ್ತಂಭ. ಕುಟುಂಬದ ಮೂಲಕವೇ ವ್ಯಕ್ತಿಯ ಸಾಮಾಜಿಕ ಪ್ರಕ್ರಿಯೆ ನಡೆಯುತ್ತದೆ. ಪೋಷಕರು ಅಥವಾ ಕುಟುಂಬದ ಸದಸ್ಯರು ಅದರಲ್ಲೂ ಸ್ತ್ರೀಯು ತನ್ನ ಮಗುವಿನ ಸಾಮಾಜೀಕರಣದಲ್ಲಿ ಪ್ರಮುಖ ಪಾತ್ರ ವಹಿಸುತ್ತಾಳೆ. ಮಕ್ಕಳ ಲಾಲನೆ-ಪೋಷಣೆ ಕುಟುಂಬದ ಸ್ಥಾನಮಾನವನ್ನು ಉನ್ನತಿಕರಿಸುವುದು ಆಕೆಯ ಪ್ರಮುಖ ಜವಾಬ್ದಾಯಾಗಿರುತ್ತದೆ. ಈ ಒಂದು ಹಿನ್ನೆಲೆಯಲ್ಲಿ ಮೂಡಿಬಂದಿರುವ ಪಾತ್ರ ಕೆಂಪಮ್ಮ. ಮನೆಗೆ ಹಿರಿಯ ಸೊಸೆಯಾಗಿ, ಮಕ್ಕಳಿಗೆ ಆದರ್ಶ

ತಾಯಿಯಾಗಿ, ಗಂಡನಿಗೆ ತಕ್ಕ ಹೆಂಡತಿಯಾಗಿ, ಮನೆಗೆ ಗೌಡತಿಯಾಗಿ ಇಡೀ ಕುಟುಂಬವನ್ನು ಚಾಣಾಕ್ಷತೆಯಿಂದ ನಿಭಾಯಿಸುವ ಒಂದು ಅದ್ಭುತ ವ್ಯಕ್ತಿತ್ವ ಈ ಕೆಂಪಮ್ಮ.

ಕೆಂಪಮ್ಮಳ ಗಂಡ ಹನುಮಣ್ಣ. ಶ್ರಮಜೀವಿ. ಸಂಬಂಧಗಳಿಗೆ ಹೆಚ್ಚು ಒತ್ತು ಕೊಡುವ ವ್ಯಕ್ತಿ. ಇವರಿಗೆ ನಾಲ್ಕು ಜನ ಹೆಣ್ಣು ಮಕ್ಕಳು. ಒಂದು ಮಾತ್ರ ಎರಡು ವರ್ಷದ ಹಸುಗೂಸು, ಇನ್ನೂ ಮೂವರು ಮಕ್ಕಳು ಪಾಂಡವಪುರ ಶಾಲೆಯಲ್ಲಿ ಓದುತ್ತಿರುತ್ತಾರೆ. ಕೆಂಪಮ್ಮ ಹೊಟ್ಟೆ ಬಟ್ಟೆ ಕಟ್ಟಿ ಈ ಮಕ್ಕಳನ್ನು ಓದಿಸುತ್ತಿರುತ್ತಾಳೆ. ಹನುಮಣ್ಣನಿಗೆ ರಾಮಣ್ಣ ಮತ್ತು ಗೋವಿಂದು ಎಂಬ ಇಬ್ಬರು ತಮ್ಮಂದಿರು. ರಾಮಣ್ಣನ ಹೆಂಡತಿ ಚೆನ್ನಿ, ಗೋವಿಂದನ ಹೆಂಡತಿ ಸಣ್ಣಮ್ಮ ದಾಯಾದಿಗಳ ನಡುವೆ ಆರಂಭವಾದ ಕಲಹ ಮನೆಗಳ ನಡುವೆ ಅಡ್ಡ ಗೋಡೆಗಳನ್ನು ಹಾಕುವುದರ ಮೂಲಕ ಪರ್ಯಾವಸನಗೊಳ್ಳುತ್ತದೆ.

ಹನುಮಣ್ಣನ ಆಪ್ತಸ್ನೇಹಿತ ಪುಟ್ಟೇಗೌಡ ಕಷ್ಟ-ಸುಖಕ್ಕೆ ಹೆಗಲುಕೊಡುವವನು. ಇವನ ಹೆಂಡತಿ ಈರಕ್ಕ, ಮಗಳು, ನಾಗಿ ಇವರನ್ನು ಕರೆದು ಮಾಂಸದ ಊಟ ಹಾಕಬೇಕು ಎಂಬುದು ಹನುಮಣ್ಣ ಕೆಂಪಮ್ಮನ ಆಸೆಯಾಗಿರುತ್ತದೆ. ಅದರ ಪ್ರಕಾರ ಯಾರಿಗೂ ಹೇಳದೆ ಹುನುಮಣ್ಣ ಮಾಂಸ ತರುತ್ತಾನೆ. ಕೆಂಪಿಗೆ ಆಶ್ಚರ್ಯವಾಗುತ್ತದೆ. ಬಾಡನ್ನು ಬೆಕ್ಕುಗಳಿಗೆ ಸಿಗದಂತೆ ಮಡಿಕೆಯಲ್ಲಿ ಅವಿತಿಟ್ಟು ಕುರಿ ಮೇಯಿಸಲು ಕಾಡಿಗೆ ಬರುತ್ತಾಳೆ. ಕುರಿಮೇಯಿಸುವ ಸ್ಥಳದಲ್ಲಿ ಅವಳ ದೇಹ ಮಾತ್ರ ಇತ್ತು. ಮನಸ್ಸು ಮಾತ್ರ ಮನೆಯ ಕಡೆ ವಾಲುತ್ತಿತ್ತು. ಬಾಡೂಟಕ್ಕೆ ಸಾಮಾನು ವಂಚಿಸುವುದರ(ಸರಿಹೊಂದಿಸಿ ಕೊಳ್ಳುವ) ಬಗ್ಗೆ ನಾದಿನಿಯರನ್ನು ಹೇಗೆ ಕರೆಯುವುದು ಎಂಬುದರ ಬಗ್ಗೆ ನಾನಾ ಚಿಂತೆಗಳಲ್ಲಿ ಅವಳ ಮನಸ್ಸು ತೊಳಲಾಡುತ್ತಿತ್ತು.

ಗಂಡನಿಗೆ ಈರಕ್ಕ ಮತ್ತು ಮಗಳು ನಾಗಕ್ಕನನ್ನು ಕರೆತರಲು ಹೇಳಿದಳು. ಈರಕ್ಕನ ಕುಟುಂಬದವರು ಬರುವಷ್ಟರಲ್ಲಿ ಮಕ್ಕಳ ಸಹಾಯ ಪಡೆದು ಅಡುಗೆಗೆ ಸಿದ್ಧ ಮಾಡುತ್ತಾಳೆ. ಚೆನ್ನಿ ಮತ್ತು ಸಣ್ಣಮ್ಮ ಗಂಡಂದಿರಿಗೆ, ಮಕ್ಕಳಿಗೆ ಅವರು ಕರೆದರೂ ಹೋಗಬಾರದು ಎಂದು ತಾಕೀತು ಮಾಡಿ ಮನೆ ಬಾಗಿಲು ಹಾಕಿಕೊಂಡು ಒಳಗಿರುತ್ತಾರೆ. ಕೆಂಪಮ್ಮ ತಾನು ಹೋಗಿ ಈರಕ್ಕ ಮತ್ತು ನಾಗಕ್ಕನನ್ನು ಕರೆತಂದು ಊಟಕ್ಕೆ ಹಾಕಿ ವಾರಗಿತ್ತಿಯರನ್ನು ಕರೆಯುತ್ತಾಳೆ. ವಾರಗಿತ್ತಿಯರು

ತಾವೂ ಬರುವುದಿಲ್ಲ ತಮ್ಮ ಮಕ್ಕಳನ್ನು ಕಳಿಸುವುದಿಲ್ಲ. ಕೊನೆಗೆ ತಾನು ತನ್ನ ಮಕ್ಕಳ ಜೊತೆ ಸೇರಿ ಊಟಕ್ಕೆ ಕೂರುತ್ತಾಳೆ. ಕೆಂಪಮ್ಮ ಅವ್ವ ಮಗಳನ್ನು ಉಳಿದ ಮಕ್ಕಳನ್ನೂ ಹೊರಡಿಸಿದಳು. ಬರುವ ದಾರಿಯಲ್ಲಿ ಈರಕ್ಕನೇ ಬಾಯಿ ತೆಗೆದಳು. 'ಆ ಚೆನ್ನೀಗೆ ಯಾವ್ ಕೇಡುಗ್ಗಾಲ ಬತ್ತು ಕೆಂಪಕ್ಕ? ಒಂದ್ಸೀರೆ ಇಲ್ಲ ಒಂದ್ ರವ್ಕೆ ಇಲ್ಲ, ಬರೀ ಬಾಡುನ್ಮೇಗುಳ್ ನೀರ್ಸುಡೀಕೆ ಏನಂತ ಕರ್ಕಬಂದೀಯವ್ವ ನಿನ್ ಮಗ್ಳ ಅ ಮನೇಗೆ; ಕತ್ಲೆ ಕವ್ಳ, ಇಷ್ಟೊತ್ನಲ್ ಯಾಕಕ್ಕ ಅಂತ ತಪ್ಸುಸ್ಕಬುಡು ಅಂತ ಹೇಳಿಕ್ ಬಂದಿದ್ಲು ಮದ್ದೀನಾಗ"(ಬೋರೇಗೌಡ ಚಿಕ್ಕಮರಳಿ, ಗೋಡೆಗಳ ನಡುವೆ, ೨೦೦೬, ಪುಟ-೨೫). ಕೇಳಿ ಅದಕ್ಕೆ ಪ್ರತ್ಯುತ್ತರವಾಗಿ ಕೆಂಪಮ್ಮ ನನ್ನ ಗಂಡ ಇರುವಷ್ಟರಲ್ಲಿ ಮಾಡಿದ್ದಾನೆ, ಸೀರೆ ರವಿಕೆ ಕಣ ಕೊಡುವಷ್ಟು ಶ್ರೀಮಂತರು ನಾವಲ್ಲ ಅಂತ ಹೇಳಿದಾಗ, ಪ್ರೀತಿ ಮುಂದೆ ಸೀರೆ ಒಡವೆ ಅಲ್ಲ ಎಂಬ ಈರಕ್ಕನ ಮಾತು ಕೇಳಿ ಕೆಂಪಮ್ಮ ಹರ್ಷಿತಳಾದಳು.

ಏನೇ ಆಗಲಿ ಕೆಂಪಮ್ಮನ ರೀತಿ ಮಹಿಳೆಯರು ತಮ್ಮ ಕುಟುಂಬದಲ್ಲಿ ಇರುವ ಸದಸ್ಯರ ಈರ್ಷ್ಯೆ, ಕೊಂಕುನುಡಿ, ದ್ವೇಷದ ನಡುವೆಯೇ ಹೇಗೆ ಸುಧಾರಿತ ಜೀವನ ನಡೆಸಬಹುದು ಎಂಬುದಕ್ಕೆ ಸಾಕ್ಷಿಯಾಗಿದ್ದಾಳೆ. ನಮ್ಮ ಗ್ರಾಮೀಣ ಮಹಿಳೆಯರಲ್ಲಿ ಆಧುನಿಕ ವಿಜ್ಞಾನದ ಅರಿವು ಇಲ್ಲದಿದ್ದರೂ ಕಡೆಗೆ ಅಕ್ಷರಸ್ಥರಲ್ಲದಿದ್ದರೂ ಬದುಕಿನ ಅರಿವಿತ್ತು. ಹೀಗಾಗಿ ನಮ್ಮಲ್ಲಿ ಅವಿಭಕ್ತ ಕುಟುಂಬಗಳು ಒಂದು ಕಾಲಕ್ಕೆ ಜೀವಂತವಾಗಿತ್ತು.

ಬೋರೇಗೌಡ ಚಿಕ್ಕಮರಳಿ ಅವರ ಮತ್ತೊಂದು **'ಭೂತದ ಕುಣಿತ'**ದಲ್ಲಿ ಪ್ರಾದೇಶಿಕ ನೆಲೆಯಲ್ಲಿ ಕಂಡ, ಚಿಕ್ಕ ವಯಸ್ಸಿನಲ್ಲಿ ವಿಧವೆಯಾದ ಹೆಣ್ಣು ಮಗಳ ಬದುಕಿನ ಬವಣೆಯನ್ನು ಚಿತ್ರಿಸಿದ್ದಾರೆ. ಸ್ತ್ರೀಸಬಲೀಕರಣ ಹತ್ತೊಂಬತು ಮತ್ತು ಇಪ್ಪತ್ತನೆಯ ಶತಮಾನದಲ್ಲಿ ಶಿಕ್ಷಣದ ಮೂಲಕ ಶಾಲಾ ಕಾಲೇಜುಗಳಲ್ಲಿ ಪಠ್ಯಗಳ ಮೂಲಕ ಅರಿವು ಮೂಡಿಸಲಾಗುತ್ತಿದೆ. ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ಯಾವ ಶಿಕ್ಷಣವು ಇಲ್ಲದೆ ಹೆಣ್ಣು ಮಕ್ಕಳು ತಮ್ಮ ಜೀವನಾನುಭವದಿಂದ ಸಬಲೀಕರಣವಾಗಿರುವುದನ್ನು 'ಭೂತದ ಕುಣಿತ' ಕಥೆಯ ಬೋರಮ್ಮನ ಪಾತ್ರದಲ್ಲಿ ಕಾಣಬಹುದು.

ಬೋರಮ್ಮ ಮಕ್ಕಳಿಲ್ಲದ ವಿಧವೆ. ಅವಳು ಈ ಸ್ಥಿತಿಯನ್ನು ಹೊಂದಿ ವರ್ಷಗಳು ಉರುಳಿವೆ. ಈಗ ಅವಳು ನಡು ವಯಸ್ಸಿನವಳು. ಮದುವೆಯಾದಾಗ ಅವಳಿಗೆ ಹದಿನೈದೂ ಹದಿನಾರೊ ಆಗಿದ್ದರೆ ಅದೇ ಹೆಚ್ಚು. ಗಂಡನೊಡನೆ ಬಾಳುವೆ

ನಡೆಸಿದ್ದು ನಾಲ್ಕೈದು ವರ್ಷಗಳಿರಬಹುದು. ಯಾವುದೋ ಕಾಯಿಲೆಯಿಂದ ಗಂಡ ತೀರಿಕೊಂಡ. ಮದುವೆಗೆ ಮೊದಲೇ ಆಗಾಗ ಕಾಯಿಲೆ ಬೀಳುತ್ತಿದ್ದ. ಇದು ತಿಳಿದಿದ್ದು ಮದುವೆಯಾದ ಮೇಲೆ. ಒಟ್ಟಿನಲ್ಲಿ ಅವಳ ಗಂಡ ಬೇಗನೆ ಸತ್ತ. ಗಂಡನೊಡನೆ ಬದುಕು ನಡೆಸಿದ ನಾಲ್ಕೈದು ವರ್ಷಗಳಲ್ಲಿ ಮಕ್ಕಳು ಆಗಲಿಲ್ಲ. ಬೋರಮ್ಮನ ತಂದೆ ಪುಟ್ಟೇಗೌಡ ಮಗಳಿಗೆ ಇನ್ನೊಂದು ಮದುವೆ ಮಾಡಬಹುದಿತು. ಆದರೆ ಮನೆತನದ ಮರ್ಯಾದೆಯನ್ನು ಲೆಕ್ಕಕೆ ತೆಗೆದುಕೊಳ್ಳದೆ ಮಗಳಿಗೆ ಎರಡನೇ ಮದುವೆ ಮಾಡಿದರೆ ಜನ ಆಡಿಕೊಳ್ಳುವುರೆಂದು ಹಿಂಜರಿದ. ಮಗಳ ವಿಚಾರದಲ್ಲಿ ಅವನಿಗೆ ಕಂಡಿದ್ದು ಒಂದೇ ದಾರಿ. ತನ್ನ ಕೈಕಾಲು ಗಟ್ಟಿಯಾಗಿರುವಾಗಲೆ ಸತ್ತ ಗಂಡನ ಪಾಲಿಗೆ ಬರಬೇಕಾಗಿದ್ದ ಆಸ್ತಿಯನ್ನು ಅವಳಿಗೆ ಬರುವಂತೆ ಮಾಡಿ ಒಂದು ನೆಲೆ ಮಾಡುವುದು ಅವನ ಉದ್ದೇಶವಾಗಿತ್ತು.

ಬೋರಮ್ಮನಿಗೆ ಒಂದು ಎಕರೆ ಹೊಲ, ಕಾಲುವೆ ಕೆಳಗಿನ ಹತ್ತು ಕುಂಟೆ ಗದ್ದೆಯನ್ನು ಗಂಡನ ಆಸ್ತಿಯೆಂದು ಪಡೆದುಕೊಂಡಿದ್ದಳು. ಒಬ್ಬರಿಂದ ಒಂದು ಮಾತು ಕೇಳದಂತೆ ಬಾಳುವೆ ನಡೆಸಿಕೊಂಡು ಬಂದಿದ್ದಾಳೆ ಬೋರಮ್ಮ ಇರುವಷ್ಟು ಜಮೀನಿನಲ್ಲಿ ಅಚ್ಚುಕಟ್ಟಾಗಿ ಬೇಸಾಯ ಮಾಡಿಸುವುದು; ಸಮಯ ಬಿದ್ದಾಗ ಕೂಲಿ ಗೇಯುವುದು; ಬಂದದ್ದರಲ್ಲಿ ಹೇಗೊ ಹಾಗೆ ಹಬ್ಬವೋ ಹರಿದಿನವೊ, ಹುಣ್ಣಿಮೆಯೋ ಅಮಾವಾಸ್ಯೆಯೊ, ನಾಲ್ಕು ಜನರಂತೆ ಜೀವನ ಸಾಗಿಸುವುದು; ಒಂದು ಎಮ್ಮೆಯೋ ಕುರಿಯೊ ಸಾಕಿಕೊಂಡು ಕಷ್ಟಕಾಲಕ್ಕೆಂದು ನಾಲ್ಕು ಕಾಸು ಗಂಟುಹಾಕಿಕೊಳ್ಳುವುದು ಇಷ್ಟನ್ನ ನಡೆಸಿಕೊಂಡು ಬಂದಿದ್ದಾಳೆ. ಮಗಳ ಬಾಳುವೆಯನ್ನು ನೋಡಿ ಪುಟ್ಟೇಗೌಡನಲ್ಲಿಯೂ ನೆಮ್ಮದಿ ಮೂಡತೊಡಗಿತು. ತನ್ನ ಗಂಡುಮಕ್ಕಳಿಗಿಲ್ಲದ ಬದುಕುವ ಹಟ ಈ ಹೆಣ್ಣು ಮಗಳಲ್ಲಿದ್ದುದನ್ನು ಕಂಡು ಖುಷಿಯಾಯಿತು. ಈಗ ತನ್ನ ನೆಲದಲ್ಲಿ ತಾನು ನಿಂತು ಬಾಳುವ ಬದುಕಿನ ರುಚಿಯನ್ನು ಅವಳು ನೋಡಿದ್ದಳು. ಇನ್ನೊಬ್ಬರ ಹಂಗಿನಲ್ಲಿ ಬದುಕುವುದು ಬೇಡವಾಗಿತ್ತು.

ಬೋರಮ್ಮನ ಮಲತಾಯಿ ಹೆರದಮಗಳಿಗೆ ಓಡಾಡಿಕೊಂಡು ಮದುವೆ ಮಾಡಿದವಳು ತನ್ನ ಹೆತ್ತ ಮಗಳಿಗೆ ಮದುವೆ ಮಾಡುವ ತನಕ ಉಳಿಯಲಿಲ್ಲ. ಕಣ್ಣು ಮುಚ್ಚಿಕೊಳ್ಳುವುದಕ್ಕೆ ಮೊದಲು ಮಲಮಗಳನ್ನು ಕರೆಸಿಕೊಂಡು "ಮಗಾ, ಈ ಮಗ್ಳು ನಾನ್ ಹೆತ್ಮಗ್ಳಲ್ಲಕನವ್ವ; ನೀನ್ ಹೆತ್ಮಗ್ಳು. ಅಂಗಂತ ತಿಳ್ಕಂಡು ನೋಡ್ಕೊ ನನ್ಕಂದ"(ಬೋರೇಗೌಡ ಚಿಕ್ಕಮರಳಿ, ಗೋಡೆಗಳ ನಡುವೆ, ೨೦೦೩, ಪುಟ-೩೩)ಎಂದು ಕೈಹಿಡಿದು ಕೊಟ್ಟಳು. ಈ ವೇಳೆಗೆ ಬೋರಮ್ಮ ಗಂಡನನ್ನು ಕಳೆದುಕೊಂಡು ಬೇರೆಯಾಗ

ತೊಡಗಿ ನಾಲ್ಕಾರು ವರ್ಷಗಳು ಕಳೆದಿದ್ದವು. ತನ್ನ ಬದುಕಿನಲ್ಲಿಯೇ ಅವಳಿಗೆ ಆಗ ಭರವಸೆ ಮೂಡಿರಲಿಲ್ಲ, ಧೈರ್ಯ ಕಂಡಿರಲಿಲ್ಲ. ಆದರೂ ಅವ್ವನ ಸಮಾಧಾನಕ್ಕಾಗಿ ಹೇಳಿದಳು, "ಆಗ್ಲಿಕನವ್ವ, ನಾನ್ ನೋಡ್ಕತ್ತೀನಿ ನೀನ್ ಸುಮ್ನಿರು"(ಬೋರೇಗೌಡ ಚಿಕ್ಕಮರಳಿ, ಗೋಡೆಗಳ ನಡುವೆ, ೨೦೦೭, ಪುಟ-೩೩)ಅಂತ. ಹೆಣ್ಣು ಅಂದ್ರೆ ಅವ್ಳುಕನ್ಲ. ಬಡ್ಡೀಮಗುನ್ ಜನ್ಮ ಗಂಡಾಗ್ ಹುಟ್ಬೇಕಾಗಿತ್ತು. ಅಪ್ಪಿ ತಪ್ಪಿ ಹೆಣ್ಣಾಗ್ ಹುಟ್ಬುಡ್ತು ಅಂದರೇ ಹೊರತು ತನ್ನ ಬಗೆಗೆ ಯಾರೂ ಒಂದು ಚಕಾರ ಎತ್ತಲಿಲ್ಲ. ಈಚೀಚೆಗೆ, ವಯಸ್ಸಾದಂತೆಲ್ಲಾ, ಮನೆಯಲ್ಲಿ ಕೂತು ಬೇಸರವಾದಾಗ ಹೆರವರ ಮನೆಯ ಬಾಗಿಲು ದಾಟುತ್ತಾಳೆ. ಅವರ ಕಷ್ಟ ಸುಖ ವಿಚಾರಿಸುತ್ತಾಳೆ. ಸಮಯವೆಂದು ಬಂದವರಿಗೆ ಸಾಲವೊ ಸಹಾಯವೊ, ತನ್ನ ಕೈಲಾದಷ್ಟು ಕೊಡುತ್ತಾಳೆ. ಬಂದಷ್ಟನ್ನು ವಾಪಸ್ಸು ಪಡೆಯುತ್ತಾಳೆ. ಕಣ್ಣಿಗೆ ಕಂಡ ಮಕ್ಕಳನ್ನು ಅವರಿವರೆನ್ನದೆ ಬಾಯಿತುಂಬಾ ಮಾತಾಡಿಸಿ ಗಲ್ಲ ಸವರಿ ಮುತ್ತಿಕ್ಕಿಕೊಳ್ಳುತ್ತಾಳೆ. ಹಾಗಾಗಿ ಬೋರಮ್ಮ ಊರವರ ಬಾಯಲ್ಲಿ ಬೋರಿ ಆದದ್ದು ಹೆಚ್ಚಾಗಿ ಬೆಳಕಿಗೆ ಬರತೊಡಗಿತು. ತಮ್ಮ ಹೊಲದಲ್ಲಿ ನಾಟಿ ಮಾಡಿಸಬೇಕು, ಗದ್ದೆಯಲ್ಲಿ ಕಳೆ ಕೀಳಿಸಬೇಕು, ಕಣದಲ್ಲಿ ಒಕ್ಕಣೆ ಮಾಡಿಸಬೇಕು: 'ಸಟ್ಟಳ್ಳಿ ಬೋರೀಗೇಳ್ರಿ' ಅನ್ನುತ್ತಾರೆ. ಮನೆಯಲ್ಲಿ ಹೆಣ್ಣು ಮಕ್ಕಳಿಗೆ ಹೆರಿಗೆ ನೋವು ಕಾಣಿಸಿಕೊಂಡರು, ಬಾಣಂತನ ಮಾಡಬೇಕು, ಹೆಂಗಸರಿಗೆ ಕಾಯಿಲೆಯಾಗಿ ಉಪಚಾರ ಮಾಡಬೇಕು: 'ಸಟ್ಟಳ್ಳಿ ಬೋರೀನ್ ಕರೀರಿ' ಅನ್ನುತ್ತಾರೆ. ಈ ರೀತಿ ಹಳ್ಳಿಯಲ್ಲಿ ಎಲ್ಲರಿಗೂ ಬೇಕಾದ ವ್ಯಕ್ತಿಯಾಗಿರುತ್ತಾಳೆ.

ಬೋರಮ್ಮನಿಗೆ ತನ್ನ ಅಪ್ಪನ ಬಗ್ಗೆ ಅವಳಿಗೆ ಮನಸ್ಸಿನ ಯಾವುದೋ ಮೂಲೆಯಲ್ಲಿ ಅಸಮಾಧಾನವಿತ್ತು. ತಾಯಿ ಸತ್ತಾಕ್ಷಣ ತಂದೆ ಮತ್ತೊಂದು ಮದುವೆಯಾದ ಹಾಗೇ ನನಗೂ ಗಂಡ ಸತ್ತ ತಕ್ಷಣ ಮತ್ತೊಂದು ಮದುವೆ ಅಥವಾ ಕೂಡಿಕೆ ಮಾಡಬಹುದಾಗಿತ್ತಲ್ಲಾ. ಗಂಡನ ಆಸ್ತಿಯನ್ನು ನನ್ನೆಸರಿಗೆ ಬರುವಂತೆ ಮಾಡುವ ಬದಲು ನನಗೆ ಮತ್ತೊಂದು ಮದುವೆ ಮಾಡಿದರೆ ಕಷ್ಟಕ್ಕೆ ಒಬ್ಬ ಮಗನಾದರೂ ಇರುತ್ತಿದ್ದ ಎಂಬ ಆಕೆಯ ಆಲೋಚನೆಗಳು ಸಹಜವಾದ ಚಿಂತನೆಯಾಗಿದೆ. ಇದು ಹೆಣ್ಣು ಮಗಳೊಬ್ಬಳು ನಾಚಿಕೆ ಬಿಟ್ಟು ಹೇಳಿಕೊಳ್ಳುವಂತ ಮಾತುಗಳಲ್ಲ, ಆದರೂ ಮನಸ್ಸಿನಲ್ಲಿರುವ ಆಸೆಯಾಗಿದೆ. ಕಥೆಗಾರರು ಹೆಣ್ಣಿನ ಮನಸ್ಸಿನ ಅಂತರಾಳವನ್ನು ಗುರುತಿಸುವ ಮೂಲಕ ವಿಧವೆಯರ ಪುನರ್ ವಿವಾಹಕ್ಕೆ ಒತ್ತುಕೊಟ್ಟಿದ್ದಾರೆ.

ಬೋರೇಗೌಡ ಚಿಕ್ಕಮರಳಿ ಇನ್ನೊಂದು ಕಥೆ **'ಕೆಂಪಾಚಾರಿಯ ಕುಲುಮೆ'** ಕಥೆಯಲ್ಲಿ ಸಾಂಸಾರಿಕ ಬದುಕಿನ ಜಂಜಾಟದ ಜೊತೆಗೆ ಮಂಡ್ಯ ಜಿಲ್ಲೆಯ ಪ್ರಾದೇಶಿಕತೆಯಲ್ಲಿ ಕಾವೇರಿ ಅಣೆಕಟ್ಟೆ ಆಗುವ ಮೊದಲು ಇದ್ದ ಗ್ರಾಮ್ಯ ಜೀವನವನ್ನು ಮತ್ತು ಕಾವೇರಿ ನೀರು ಹರಿದ ಮೇಲೆ ಆದ ಬದಲಾವಣೆಯ ಸ್ಥಿತಿಗಳನ್ನು ಬಹಳ ಅಚ್ಚುಕಟ್ಟಾಗಿ ಕಥೆಗಾರರು ನಿರೂಪಿಸಿದ್ದಾರೆ.

'ಕೆಂಪಾಚಾರಿಯ ಕುಲುಮೆ' ಶೀರ್ಷಿಕೆಯ ಹೆಸರಿನಂತೆ ಅಂದರೆ ವೃತ್ತಿ ಜಾತಿಯಿಂದ ಆಚಾರರ ಕೌಟುಂಬಿಕ ವಿವರಣೆ ಕೊಡುತ್ತಾ ಪಾಂಡವಪುರ ತಾಲ್ಲೂಕಿನ ಮರಡಿಹಳ್ಳಿ ಸುತ್ತಣ ಬದುಕನ್ನು ಕಟ್ಟಿಕೊಡುತ್ತಾರೆ. ಕೆಂಪಾಚಾರಿಯ ತಂದೆ ಶಿವರುದ್ರಾಚಾರಿ ಉದ್ಯೋಗ ಹುಡುಕಿಕೊಂಡು ಮರಡಿಹಳ್ಳಿಗೆ ಅಪ್ಪನೊಂದಿಗೆ ಬಂದಾಗ ಇನ್ನೂ ಚಿಕ್ಕ ಹುಡುಗ, ಊರಿಗೊಬ್ಬ ಕುಲುಮೆ ಕೆಲಸದವನು ಬೇಕು ಅಂತ ಊರೊಟ್ಟಿನ ಜಾಗ ಕೊಟ್ಟು ಊರವರೆಲ್ಲಾ ಸೇರಿ ದೊಡ್ಡ ಗುಡಿಸಲು ಕಟ್ಟಿಕೊಟ್ಟು ಮನೆಯ ಮಕ್ಕಳಂತೆ ನೋಡಿಕೊಂಡರು. ಊರಿಗೊಂದೆ ಆಚಾರಕುಳ. ಆದರೂ ಯಾವತ್ತೂ ಪರಕೀಯರಂತೆ ನಡೆಸಿಕೊಡಲಿಲ್ಲ. ಎಲ್ಲರನ್ನೂ ಅಪ್ಪ ಅವ್ವ ಅಣ್ಣ ಅನ್ನುತ್ತಲೇ ಬೆಳೆದ ಶಿವರುದ್ರಾಚಾರಿ. ನೇಗಿಲು ಇಕ್ಕುವುದು, ನೊಗ ಕೆತ್ತುವುದು, ಗಾಡಿಯ ಚಕ್ರಗಳಿಗೆ ಬಳೆಕಟ್ಟುವುದು, ಮುರಿದ ಗಾಡಿಯ ಭಾಗಗಳನ್ನು ಸರಿಪಡಿಸುವುದು, ಇಲ್ಲವೇ ಹೊಸ ಭಾಗಗಳನ್ನು ಸೇರಿಸುವುದು. ಗುದ್ದಲಿ ಗುಳ, ಕುಡಿಲು, ಕೊಡಲಿ, ಹಾರೆ, ಪಿಕಾಸಿಗಳನ್ನು ತಟ್ಟುವುದು.

ಪ್ರಾದೇಶಿಕ ಸ್ಥಿತಿಗತಿಯನ್ನು ಕಥೆಗಾರರು ಅಚ್ಚುಕಟ್ಟಾಗಿ ವಿವರಿಸಿದ್ದಾರೆ. ಕಾವೇರಿ ನದಿಗೆ ಅಣೆಕಟ್ಟು ಕಟ್ಟಿರಲಿಲ್ಲ. ಕಾಲುವೆ ತೆಗೆದು ಬಯಲಿಗೆ ನೀರು ಹಾಯಿಸಿರಲಿಲ್ಲ. ಊರ ಸುತ್ತಲಿನ ಬಯಲಿನಲ್ಲಿ ಬೆಳೆಯುತ್ತಿದ್ದ ರಾಗಿ, ಜೋಳ, ಅವರೆ, ತೊಗರಿ, ತಗಣಿ, ಎಳ್ಳು, ಹುಚ್ಚೆಳ್ಳು, ಹರಳು, ನವಣೆ, ಸೆಜ್ಜೆ ಎಂದು ನಾನಾ ಬಗೆ. ಬೆಳೆದದ್ದರಲ್ಲಿ ಊರವರೆಲ್ಲಾ ಅಷ್ಟಷ್ಟು ಕೊಟ್ಟರೂ ವರ್ಷವೆಲ್ಲಾ ಊಟ ಮಾಡಿ ಮಿಗುತ್ತಿತ್ತು. ಅಪ್ಪ ಸಾಯುವ ಹೊತ್ತಿಗೆ ಮದುವೆಯಾಗಿ ಇಬ್ಬರು ಗಂಡು ಮಕ್ಕಳನ್ನೂ, ಒಬ್ಬಳು ಮಗಳನ್ನು ಪಡೆದಿದ್ದ. ಗ್ರಾಮೀಣ ಬದುಕು ಕಷ್ಟಕರವಾಗಿರಲಿಲ್ಲ ಎನ್ನುವುದಕ್ಕೆ ಮೇಲಿನ ಉದಾಹರಣೆಯೆ ಸಾಕು. ಸ್ವಾರ್ಥವಿಲ್ಲದ ಬದುಕು ಎಲ್ಲರನ್ನೂ ಒಟ್ಟುಗೂಡಿಸಿಕೊಂಡು ನಡೆಯುತ್ತಿತ್ತು. ಕಾವೇರಿ ನೀರು ಕಾಲುವೆ ಮೂಲಕ ಹರಿದಾಗ ಬಯಲೆಲ್ಲಾ ಗದ್ದೆಗಳಾಗಿ ಜೀವನದಲ್ಲಿ ಸಾಕಷ್ಟು ಬದಲಾಣೆಗಳಾಗಿದ್ದವು. ಗದ್ದೆಗಳಲ್ಲಿ ಈಗ ಬೆಳೆಯುವುದು ಬತ್ತ, ಕಬ್ಬು ಮಾತ್ರ.

ಬೇಸಿಗೆಯಲ್ಲಿ ಕಾಳು ಕಡ್ಡಿ ಒಂದಿಷ್ಟು ಹೊಲ ಇರುವವರು ಮನೆಗೆ ಅಂತ ರಾಗಿ, ಎಳ್ಳು ಬೆಳೆಯುತ್ತಿದ್ದರು.

ಶಿವರುದ್ರಾಚಾರಿ ಹಿರಿಯ ಮಗ ಕೆಂಪಾಚಾರಿ ಅಪ್ಪನ ಕುಲುಮೆ ಕೆಲಸ ಕಲಿತರೆ, ಕಿರಿಯ ಮಗ ಮನೆ ಕಟ್ಟುವ ಮರಗೆಲಸದವನು ಕಲಿತು ಅಪ್ಪ ಕಟ್ಟಿದ ಹುಲ್ಲಿನ ಮಾಡನ್ನು ತೆಗೆದು ನಾಡು ಹೆಂಚಿನ ಮನೆ ಕಟ್ಟಿದ. ನೀರು ಬಂದು ಹಣ ಓಡಾಡಲು ತೊಡಗಿದ ಮೇಲೆ ಜೀವನದ ರೀತಿ ಬದಲಾಯಿತು. ಮೊದಲಿದ್ದ ನಿಸ್ವಾರ್ಥ ಬದುಕು ಕಾಣದಾಯಿತು. ಟ್ರಾಕ್ಟು, ಟಿಲ್ಲರು ಗಾಣಗಳು ಒಂದೊಂದಾಗಿ ಬಂದು ಹಳೆಯ ಕಾಲದ ವ್ಯವಸಾಯದ ಸಲಕರಣೆಗಳು ಮೂಲೆ ಗುಂಪಾದವು. 'ಹೋಗ್ಲ ಸಿವ್‌ರುದ್ರ ನಿನ್ ಕುಲ್ಮೆಯ ಕೇಳೋರ್‍ಯಾರು ಇಸತಿ' ಅಂತ ನನಗೇ ಅಂದ ಮೇಲೆ ಇನ್ನು ನನ್ನ ಮಕ್ಕಳ ಗತಿಯೇನು ಅಂತ ಹೊಸ ಯೋಚನೆ ಹುಟ್ಟಿತು.

ಅಪ್ಪ ಸಾಯುವುದನ್ನೇ ಕಾದು ಕುಂತಿದ್ದವರಂತೆ ಅಣ್ಣತಮ್ಮಂದಿರು ಪಾಲಿಗೆ ಸಿದ್ಧವಾದರು. ಹೆಸರಿಗಷ್ಟೇ ಪುಟ್ಟತಾಯಿಯಾಗಿದ್ದ ವಾರಗಿತ್ತಿ ದೊಡ್ಡಬಾಯಿ ತೆಗೆದು ಜಗಳಕ್ಕೆ ನಿಂತರೆ ತಲೆತಗ್ಗಿಸಿಕೊಂಡು ಕಣ್ಣೀರು ಸುರಿಸುವುದರ ಹೊರತು ಬೇರೆ ಉಪಾಯ ಕಾಣದ ಸಾಚಾತನದ ಗೌರಿಗೆ ಕಷ್ಟಗಳೇ ಎದುರಾದವು. ಹಲವು ಕಾರಣಗಳಿಗೆ ತಮ್ಮನೊಂದಿಗೆ ಜಗಳವಾಗಿ ಇದ್ದವೊಂದು ಮನೆಯಲ್ಲಿ ವಾಸ ಮಾಡಲು ಕಷ್ಟವಾಗಿ ಮನೆಬಿಟ್ಟು ಬಂದ ಕೆಂಪಾಚಾರಿ ಹೆಂಡತಿಯೊಂದಿಗೆ ಪಾಂಡವಪುರದ ಟೌನಿನ ಮೈಸೂರು-ತುಮಕೂರು ರಸ್ತೆ ಬದಿಯಲ್ಲಿ ಕುಲುಮೆ ಅಂಗಡಿ ಇಟ್ಟುಕೊಂಡು ಬದುಕು ನಡೆಸುತ್ತಾನೆ.

ಕುಲುಮೆಯ ಮುಂದೆ ಕೂತು ಗೇಮೆ ಮಾಡುವುದನ್ನು ಬಿಟ್ಟರೆ ಬೇರೆಯಾವುದಕ್ಕೂ ತಲೆ ಕೆಡಿಸಿಕೊಳ್ಳದೆ ಇರುತ್ತಾನೆ. ಕ್ರಮೇಣ ಕೆಂಪಾಚಾರಿ ದುಡಿದ ಹಣವನ್ನು ಹೆಂಡದಂಗಡಿಗೆ ಹೋಗಿ ಕಂಠಪೂರ್ತಿ ಸಾರಾಯಿ ಕುಡಿದು ಬರುವುದು-ಕುಲುಮೆ ಮುಂದೆ ರಂಪಾಟ ಮಾಡುವುದಾಗಿತ್ತು. ಇದನ್ನೆಲ್ಲಾ ನೋಡಿದ ಹೆಂಡತಿ ಗೌರಿಗೆ ಜೀವನ ಸಾಕಾಗಿದೆ. ಸಮೀಪದಲ್ಲಿದ್ದ ದೊಡ್ಡ ಕಾಲುವೆಗೆ ಬಿದ್ದು ಆತ್ಮಹತ್ಯೆ ಮಾಡಿಕೊಳ್ಳಲು ಹೋದ ಗೌರಿ ಧೈರ್ಯ ಮಾಡಿ ಹಿಂತಿರುಗಿರುತ್ತಾಳೆ. ಇಲ್ಲಿ ಗೌರಿಯ ಪಾತ್ರ ಕಷ್ಟದಲ್ಲಿಯೂ ಬದುಕು ಪೂರೈಸುವ ಛಲದಿಂದ ಹಿಂದಿರುಗುತ್ತಾಳೆ.

ವೀರಭದ್ರಾಚಾರಿ ಎನ್ನುವರು ಮುನಿಸಿಪಾಲಿಟಿ ಮೆಂಬರಾಗಿದ್ದ ದಿನಗಳಲ್ಲಿ ವೀರಭದ್ರಾಚಾರಿಯ ಹೆಂಡತಿ ಕಡೆಯಿಂದ ಗೌರಿ ಗರೀಬಿ ಸೈಟುಗಳಿಸಿರುತ್ತಾಳೆ. 'ನಿನ್ನ ಹೆಸರಿಗೇ ಬರೆಸ್ಕೋ ಹಾಳಾದವ್ನು ಕುಡ್ದು ತಿಂದು ಹಾಳ್ಮಾಡ್ಕಬುಡ್ತನೆ'ಎಂದು

ಅಕ್ಕ ಹೇಳಿದ ಮಾತನ್ನು ಕೇಳದೆ ಗಂಡ ಬದುಕಿದ್ದಾಗಲೇ ಸಾಯಿಸಿಬಿಡುವುದು ಎಂತದೆಂದು ಗಂಡನ ಹೆಸರಿಗೇ ಹಕ್ಕು ಪತ್ರ ಮಾಡಿಸುತ್ತಾಳೆ. ಇದು ನಮ್ಮ ಗ್ರಾಮೀಣ ಪ್ರದೇಶದ ಮುಗ್ಧ ಹೆಣ್ಣು ಮಕ್ಕಳ ಪತಿ ಭಕ್ತಿ ಎಂದರೆ ಉತ್ಪ್ರೇಕ್ಷೆಯಲ್ಲ. ಗೌರಿಯ ಈ ನಡವಳಿಕೆ ಪಾರಂಪರಿಕವಾಗಿ ಹೆಣ್ಣು ಮಕ್ಕಳಲ್ಲಿರುವ ಹೃದಯವಂತಿಕೆಯ ಗುಣವನ್ನು ತಿಳಿಸುತ್ತದೆ.

ನಂತರದಲ್ಲಿ ವೀರಭದ್ರಾಚಾರಿಯಿಂದ ಪಡೆದ ಗರೀಬಿಸೈಟು ಕೈಬಿಟ್ಟು ಹೋಗುತ್ತಿರುವುದನ್ನು ಅರಿತ ಗೌರಿ ಯಾರನ್ನು ನಂಬುವುದು ಎಂಬ ಚಿಂತೆಗೆ ಒಳಗಾಗುತ್ತಾಳೆ. ಹೀಗೆ ಇದ್ದರೆ ತನ್ನ ಬದುಕು ದುಸ್ಥಿತಿ ಎಂದು ಎಚ್ಚೆತ್ತ ಗೌರಿ ತಮ್ಮ ಕುಲುಮೆಯಲ್ಲಿ ಕಬ್ಬಿಣದ ಗೇಟುಗಳನ್ನು ಮಾಡಲು ಸೇಟು ಒಬ್ಬ ೧೫೦ಕ್ಕೆ ಮಾತಾನಾಡಿರುತ್ತಾನೆ. ಆದರೆ ಗೌರಿ ಅದರ ದುಡಿಮೆಯ ಬೆಲೆಯನ್ನು ಅರಿತು ಮುನ್ನೂರು ಆಗುತ್ತದೆ ತೆಗೆದುಕೊಂಡು ಹೋಗಿ ಇಲ್ಲವಾದರೆ ಅಲ್ಲೇ ಇರಲಿ ಎಂದು ಉತ್ತರ ಕೊಡುತ್ತಾಳೆ. ಗಂಡನಿಗೆ ಎಲ್ಲೂ ಹೊರಗೆ ಹೋಗಬಾರದೆಂದು ತಾಕೀತು ಮಾಡಿರುತ್ತಾಳೆ. ಅವಳ ಮಾತಿಗೆ ಅಂಜಿದ ಗಂಡ ಕೂಡ ಏನು ಮಾತನಾಡದೇ ಕೆಲಸದಲ್ಲಿ ನಿರತನಾಗುತ್ತಾನೆ. ಮುಂದೆ ಗಂಡನನ್ನು ಅದೇ ರೀತಿ ಅದ್‌ಬಸ್ತಿನಲ್ಲಿ ಇಟ್ಟುಕೊಂಡು ಒಂದು ಮಗುವನ್ನು ದತ್ತು ತೆಗೆದುಕೊಂಡು ಸಾಕಿ ಬದುಕನ್ನು ರೂಪಿಸಿಕೊಳ್ಳುವ ತನ್ನ ಆಸೆಯನ್ನು ನೆರವೇರಿಸಿಕೊಳ್ಳತ್ತಾ ಹೆಜ್ಜೆ ಹಾಕುತ್ತಾಳೆ. ಎಚ್ಚೆತ್ತ ಗೌರಿಯ ಪ್ರಜ್ಞೆ ತನ್ನ ಬದುಕನ್ನು ಕಟ್ಟಿಕೊಳ್ಳುವ ಪ್ರಗತಿಪರ ಧೋರಣೆಯನ್ನು ಕಥೆಗಾರರು ಅಭಿವ್ಯಕ್ತಪಡಿಸಿದ್ದಾರೆ.

ಬೋರೇಗೌಡ ಚಿಕ್ಕಮರಳಿ ಅವರ **'ಏಕಾಂಗಿ'** ಕಥೆಯಲ್ಲಿ ಕಥಾನಾಯಕನ ಹೆಸರಿಲ್ಲ. ಜೀವನದ ಅಂತಿಮ ಘಟ್ಟಕ್ಕೆ ತಲುಪಿದಾಗ ತನ್ನ ಕೌಟುಂಬಿಕ ಸಂಘರ್ಷಗಳನ್ನು ನೆನೆದು ದುಃಖಿತನಾಗುವ ಒಬ್ಬ ವಯೋವೃದ್ಧನ ಚಿತ್ರಣ ಕಾಣುತ್ತದೆ. ಈ ಕಥೆಯಲ್ಲಿ ಘಟನೆಯ ವಿವರಣೆಗಳಿವೆ. ಆದರೆ ಪಾತ್ರ ಪರಿಚಯದಲ್ಲಿ ಯಾರೊಬ್ಬರ ಹೆಸರು ಇಲ್ಲದಿರುವುದು ಅಚ್ಚರಿ ಮೂಡಿಸುತ್ತದೆ.

ಮುದುಕ ತಾನೊಬ್ಬ 'ಏಕಾಂಗಿ' ಎಂದುಕೊಂಡು ರಾತ್ರೋರಾತ್ರಿ ಊರು ಬಿಟ್ಟು ಕಾಡಿನ ಕಣಿವೆಗಳಲ್ಲಿ ನಡೆಯುತ್ತಾ ತನ್ನ ಜೀವನದ ಬಂಡಿಯನ್ನು ನೆನೆಯುತ್ತಾನೆ. ಕಥಾ ನಾಯಕ ಮದುವೆಯಾದ ವರ್ಷವೆ ತಂದೆ ಕಳೆದುಕೊಂಡ. ತಾಯಿಯ ನೆನಪು ಇಲ್ಲವೇ ಇಲ್ಲ. ಅಪ್ಪನೆ ಮೆಚ್ಚಿ ಮದುವೆ ಮಾಡಿದ. ಅಪ್ಪ ಮಾಡಿದ ಆಸ್ತಿಯಲ್ಲಿ ಕೂತು ತಿನ್ನುವ ಹಾಗಿರಲಿಲ್ಲ. ಮೈಮೂಳೆ ಮುರಿದು

ದುಡಿಯಬೇಕಿತ್ತು. ಬಡವನೆಂದು ಕೀಳಾಗಿ ಕಾಣುತ್ತಿದ್ದ ಸರೀಕರಿಗೆ ಎದುರು ಚೆನ್ನಾಗಿ ಬದುಕುಬೇಕೆಂಬ ಹಠದಿಂದ ಶಕ್ತಿ ಮೀರಿ ದುಡಿದು ಹಣ ಸಂಪಾದಿಸಿದನು. ಹೆಂಡತಿ ಗಂಡಿನಂತೆ ಗಂಡನಷ್ಟೇ ಸಮವಾಗಿ ದುಡಿದಳು.

ಕೀಳಾಗಿ ಕಾಣುತ್ತಿದ್ದ ಜನ ಗೌರವ ಕೊಡಲು ಮುಂದಾದರು. ದುಡಿದು ಸಂಪಾದಿಸಿದ ಆಸ್ತಿಯೆಲ್ಲ ಯಾರಿಗಾಗಿಯೆಂದು ಐದು ಗಂಡು ಮಕ್ಕಳನ್ನು ಪಡೆದರು. ಯಾರಿಗೂ-ಯಾವುದಕ್ಕೂ ಕಡಿಮೆ ಇಲ್ಲದಂತೆ ಚೆನ್ನಾಗಿ ಸಾಕಿದರು. ಜನ ಅಸೂಯೆ ಪಟ್ಟುಕೊಳ್ಳುವಷ್ಟು ನೆಮ್ಮದಿಯ ಜೀವನ. ಐದು ಮಕ್ಕಳಿಗೆ ಒಳ್ಳೆಯ ಮನೆತನದಿಂದ ಹೆಣ್ಣು ತಂದು ಮದುವೆಯಾಯಿತು. ಸಂಸಾರ ಎನ್ನುವುದು ಚಕ್ರವಿದ್ದಂತೆ. ಮಕ್ಕಳು ತಾನು ಸತ್ತ ಮೇಲೆ ಆಸ್ತಿಗಾಗಿ ಜಗಳವಾಗಬಾರದೆಂದು ಎಲ್ಲವನ್ನು ಐದು ಭಾಗ ಮಾಡಿ ಸಮನಾಗಿ ಹಂಚಿದನು. ತನಗೆ ಮತ್ತು ಹೆಂಡತಿಗೆ ಆಸರೆಯಾಗಿ ಏನನ್ನು ಇಟ್ಟುಕೊಳ್ಳಲಿಲ್ಲ. ಕಾರಣ ಮಕ್ಕಳು ನಮಗೆ ಸಾಯುವವರೆಗೆ ತುತ್ತು ಅನ್ನ ಹಾಕುತ್ತಾರೆಂಬ ನಂಬಿಕೆ.

ಮಕ್ಕಳ ಮೇಲಿನ ಅಪಾರ ನಂಬಿಕೆಯೇ ತಂದೆ-ತಾಯಿಗಳು ಹೊಟ್ಟೆಗಿಲ್ಲದೆ ಬೀದಿ ಪಾಲಾಗುತ್ತಾರೆ ಎನ್ನುವುದಕ್ಕೆ ಈ ಕಥೆ ಸಾಕ್ಷಿಯಾಗಿದೆ. ಐದು ಮಕ್ಕಳಿಗೂ ಆಸ್ತಿ ಹಂಚಿಕೊಂಡ ಮೇಲು ನೆಮ್ಮದಿ ಬದುಕು ಕಾಣಲಿಲ್ಲ. 'ಲಾ' ಓದಿದ್ದವನು ಎಲ್ಲವನ್ನು ಮಾರಿದ. ಎರಡನೆಯವನು ವ್ಯಾಪಾರ ಮಾಡುವುದಾಗಿ ಹೇಳಿ ಆಸ್ತಿಯನ್ನು ಮಾರಿ ಹೆಂಡತಿಯೊಂದಿಗೆ ಊರು ಬಿಟ್ಟುಹೋದ. ನಾಲ್ಕನೆಯವನು ಎಲ್ಲವನ್ನು ಮಾರಿ ಹೆಂಡತಿಯನ್ನು ಬಿಟ್ಟು ಹೊರಟು ಹೋಗುತ್ತಾನೆ. ಇವನ ಹೆಂಡತಿ ಕೆಟ್ಟ ಚಾಳಿಗೆ ಇಳಿದು ಆತ್ಮಹತ್ಯೆ ಮಾಡಿಕೊಂಡು ಸತ್ತಳು. ಉಳಿದ ಐದನೆಯವನು ಪುಂಡರ ಸಹವಾಸ ಮಾಡಿ ಹೆಂಡತಿಗೆ ಹಿಂಸೆಕೊಟ್ಟು ತೌವರಿಗೆ ಓಡಿಸಿಬಿಟ್ಟ. ತಾನು ಜೂಜು ಕಲಿತು ಹಾಳಾದ. ಮೊದಲ ಮಗ ಕಳ್ಳನಾದರೂ ಆಸ್ತಿ ಮಾರಿ ಅಳಿದುಳಿದುದ್ದನ್ನು ಉಳಿಸಿಕೊಂಡು ಊರಿನಲ್ಲಿದ್ದಾನೆ.

ಕಥಾನಾಯಕ ಮಕ್ಕಳಿಗಾಗಿ ಶಕ್ತಿ ಮೀರಿ ದುಡಿದು ಸಂಪಾದಿಸಿ ಅದು ಹಾಳಾಗದಂತೆ ಕಾಪಾಡಿ ಮಕ್ಕಳ ಕೈಗೆ ಕೊಟ್ಟನು. ಮಕ್ಕಳು ಹಿಂದೆ-ಮುಂದೆ ಯೋಚನೆ ಮಾಡದೆ ಹೆಂಡತಿಯರ ಮಾತನ್ನು ಕೇಳಿ ಹಾಳಾದರು. ಇದರಿಂದ ತಾಯಿ ಚಿಂತೆಗೊಳಗಾಗಿ ಚಿತೆ ಏರಿದಳು. 'ಏಕಾಂಗಿ'ಯಾಗಿ ಉಳಿದ ವಯೋವೃದ್ಧನ ಪಾಲಿಗೆ ಇದ್ದುದ್ದು ಕಂಬಳಿ. ತನಗಾಗಿ ಸವೆಸುತ್ತಿರುವ ಕಂಬಳಿ ಬಗ್ಗೆ ಮನಸ್ಸಿನಲ್ಲಿ ಇದು ಯಾವಾಗ ತನ್ನಿಂದ ದೂರವಾಗುತ್ತೆ ಎಂಬ ಆತಂಕ ಅವನಲ್ಲಿತ್ತು. ಅವನ

ನೆನಪಿನ ಗುಂಗಿನಲ್ಲಿ ದಾರಿ ಮಧ್ಯದಲ್ಲಿ ಕಂಬಳಿಯು ಕಳಚಿತು. ಇಲ್ಲಿ ಜೊತೆಗಿದ್ದ ಕಂಬಳಿಯೂ ಕಳೆದುದ್ದು ಸಂಕೇತ 'ಏಕಾಂಗಿತನ'ದ ಸಂಕೇತ.

"ಮಕ್ಳು ಮಕ್ಳು ಅಂತ ದುಡ್ಡು ಸಂಪಾದಿಸಿ, ನೋಡ್ದ ಈಗ ಮಕ್ಳು ಕೊಟ್ಟಿದ್ದ ತುತ್ತುಹಿಟ್ಟಿಗೆ ಅಂದಂಗ್ ಅನ್ನಿಸ್ಕಂಡು ಬಿದ್ದರ್ಬೇಕಾಯ್ತು, ಮಕ್ಳು ಸಾಕುದ್ದೆ ಏನಾಪ್ಪಾ ಬತ್ತು ಸಾರ್ಥ್ಕ"(ಬೋರೇಗೌಡ ಚಿಕ್ಕಮರಳಿ, ಏಳು ಸುತ್ತಿನಕೋಟೆ, ೧೯೮೮, ಪುಟ-೧೩). ಜನರ ಈ ಮಾತುಗಳಿಂದ ಬೇಸರವಾಗಿದ್ದ ವಯೋವೃದ್ಧ ಹಿರಿ ಮಗನ ಮೇಲೆ ಬೇಸರ ವ್ಯಕ್ತಪಡಿಸಿದನು. ಆದರೆ ಸೊಸೆ ತನ್ನ ಗಂಡನ ಮೇಲೆ ಮಾವ ಹೇಳುವ ಬುದ್ಧಿವಾದಕ್ಕೆ ಸಹಿಸಿಕೊಳ್ಳಲಾರದೆ, "ಬಿಟ್ಟಿ ಅನ್ನ ತಿನ್ಕಂಡು ಮೂಲೇಲ್ ಕೂತಿದ್ದೀಯಲ್ಲ ಅದಕ್ ಹಂಗಾಡ್ತಾ ಇದ್ದೇಯಾ?"(ಬೋರೇಗೌಡ ಚಿಕ್ಕಮರಳಿ, ಏಳು ಸುತ್ತಿನಕೋಟೆ, ೧೯೮೮, ಪುಟ-೧೩)ಸೊಸೆಯ ಈ ಮಾತುಗಳನ್ನು ಕೇಳಲಾರದೆ ಮನೆ ಬಿಟ್ಟು ಹೊರಟ ಕಥಾನಾಯಕ ಏಕಾಂಗಿಯಾಗಿ ಕತ್ತಲೆಯ ಕಾಡಿನಲ್ಲಿ ನಡೆಯುತ್ತಾನೆ.

ಈ ಸನ್ನಿವೇಶ ಸಾರ್ವಕಾಲಿಕವಾಗಿ ಎಲ್ಲ ಕಾಲಘಟ್ಟಗಳಲ್ಲಿಯೂ ನಡೆಯುತ್ತಿದೆ. ತಂದೆ-ತಾಯಿಗಳು ಮಕ್ಕಳನ್ನು ಹೆತ್ತು ಸಾಕಿ, ಅವರಿಗೊಂದು ದಾರಿ ಮಾಡಿಕೊಡುತ್ತಾರೆ. ಮದುವೆಯಾದ ಮಕ್ಕಳು ತುತ್ತು ನೀಡಿದ ತಾಯಿಯನ್ನು, ರಕ್ಷಣೆಕೊಟ್ಟ ತಂದೆಯನ್ನು ಕಾಲು ಕಸವಾಗಿ ಕಾಣುತ್ತಿರುವುದು ಇತ್ತೀಚಿನ ದಿನಗಳಲ್ಲಿ ಹೆಚ್ಚಾಗುತ್ತಿದೆ. ೨೧ನೇ ಶತಮಾನದ ಜಾಗತಿಕ ಸಂದರ್ಭದಲ್ಲಿ ವೃದ್ಧಾಶ್ರಮಗಳು ಹೆಚ್ಚಾಗುತ್ತಿರುವುದು ಮೂಕ ಸಾಕ್ಷಿಯಾಗಿದೆ. ಕಥೆಗಾರರು ತಾವು ಕಂಡ ಸಾಂಸಾರಿಕ ಕುಟುಂಬದ ಒಳ-ಹೊರಗುಗಳನ್ನು ಕಥಾ ರೂಪದಲ್ಲಿ ನಿರೂಪಿಸಿರುವುದು ತಂದೆ-ತಾಯಿಗಳಿಗೆ ಮುನ್ನೆಚರಿಕೆ ಕೊಟ್ಟಂತಾಗಿದೆ. ಮಕ್ಕಳನ್ನು ಸಾಕಿ ದೊಡ್ಡವರನ್ನಾಗಿ ಮಾಡಬೇಕು. ಆದರೆ ಪೂರ್ಣವಾಗಿ ಅವರನ್ನು ನಂಬಿ ಅವಲಂಬನೆಯಾಗಬಾರದು. ತಮ್ಮ ಬದುಕಿನ ಆಶ್ರಯಕ್ಕಾಗಿ ಕೊನೆಯವರೆಗೂ ಸಂಪಾದಿಸಿದ ಹಣವನ್ನು ಕಾಯ್ದಿರಿಸಿಕೊಳ್ಳಬೇಕೆಂಬ ಸಂದೇಶ ಕಥೆಗಾರರಿಂದ ರವಾನೆಯಾಗುತ್ತದೆ.

ಬೋರೇಗೌಡ ಚಿಕ್ಕಮರಳಿ ಅವರ **'ಪಲಾಯನ'** ಕಥೆಯಲ್ಲಿ ಪುರುಷ ಪ್ರಧಾನ ವ್ಯವಸ್ಥೆಯೊಳಗೆ ಹೆಣ್ಣಿನ ಬದುಕಿನ ಅರ್ಥಹೀನತೆಯನ್ನು ತೋರುತ್ತದೆ. ಸಾಮಾನ್ಯವಾಗಿ ಕುಟುಂಬದಲ್ಲಿ ಹಿರಿಯರು ಅಂದರೆ ತಂದೆ, ಅಣ್ಣಂದಿರ ಅಣತಿಯಂತೆ ನಡೆದು ಕೊಳ್ಳಬೇಕಾದ ಹೆಣ್ಣು ಮಕ್ಕಳ ಬದುಕು ಏನಾಗಬಹುದೆಂಬ

ಸೂಕ್ಷ್ಮತೆಯನ್ನು ಈ ಕಥೆಯಲ್ಲಿ ಕಥೆಗಾರರು ತಮ್ಮದೇ ಆದ ರೀತಿಯಲ್ಲಿ ನಿರೂಪಿಸಿದ್ದಾರೆ. ಕಥೆಯ ಶೀರ್ಷಿಕೆ ಕಥಾವಸ್ತುವಿಗೆ ಸಂಬಂಧಿಸಿದ 'ಪಲಾಯನ'.

ಕಥೆಯ ಮುಖ್ಯ ಪಾತ್ರಧಾರಿ ಕಮಲ. ಕಮಲ ತನ್ನ ಸೋದರತ್ತೆಯ ಮಗ ಮುರುಳಿಯನ್ನು ಮದುವೆಯಾಗುವ ಆಸೆಯಂತೆ ತಂದೆ ಬಸವೇಗೌಡ-ತಾಯಿ ಪಾಪಮ್ಮ ಕೂಡ ಒಪ್ಪಿದರು. ಮುರುಳಿಯ ತಂದೆ ತಿಮ್ಮೇಗೌಡನಿಗೆ ಕಾಯಿಲೆ ಉಲ್ಬಣಗೊಂಡು ಸಾಯುವ ಸ್ಥಿತಿ ತಲುಪಿದ. ಸಾಲ ಕೊಟ್ಟವರು ಮಗನಿಗೆ ಮತ್ತು ಬೀಗರಾಗುವ ಬಸವೇಗೌಡನಿಗೆ ಮುಂಚಿತವಾಗಿ ತಿಳಿಸಿದರು. ಇದರಿಂದ ಬಸವೇಗೌಡ ಮುರುಳಿಯಿಂದ ದೂರವಿರುವಂತೆ ಕಮಲಳಿಗೆ ಸೂಚನೆ ಕೊಡುವನು. ತಂದೆಗೆ ಕಾಯಿಲೆ ಹೆಚ್ಚಾದ ಮೇಲೆ ಮುರುಳಿ ಕಮಲಿಯನ್ನು ನೋಡಲು ಬರುವುದು ಕಡಿಮೆಯಾಗಿತ್ತು. ಮುರುಳಿ ಅಪ್ಪನ ಸಾಲದ ಬಗ್ಗೆ ಭಯಗೊಂಡಿದ್ದ.

ಮಾದಳ್ಳಿಯ ಮುದ್ದೇಗೌಡ ಊರಿಗೆ ಸ್ಥಿತಿವಂತ. ತಳಕು ಮೋಸದಲ್ಲಿ ಎತ್ತಿದಕೈ. ಮುದ್ದೇಗೌಡ ಸಂಪಾದಿಸಿದ ಹಣವನ್ನು ಹೇರಳವಾಗಿ ಖರ್ಚು ಮಾಡುತ್ತಿದ್ದವನು ಕಿರಿಯ ಮಗ ಶಂಕರ. ತಾನು ಕಲಿತ ಕೆಟ್ಟ ಚಟಗಳನ್ನು ಇತರ ಹುಡುಗರಿಗೂ ಕಲಿಸುತ್ತಿದ್ದ. ಪೋಲಿ ಅನ್ನಿಸಿಕೊಂಡ ಮಗನನ್ನು ದಾರಿಗೆ ತರಲು ಮುದ್ದೇಗೌಡನಿಗೆ ಹೊಳೆದ ಉಪಾಯ ಮದುವೆ ಮಾಡುವುದು. ಬಸವೇಗೌಡನ ಮಗಳು ಕಮಲಳನ್ನು ಶಂಕರನಿಗೆ ಮದುವೆ ಮಾಡುವುದರ ಮೂಲಕ ಅವನ ಆಸ್ತಿಯನ್ನು ಕಬಳಿಸುವ ಹೊಂಚು ಮುದ್ದೇಗೌಡನದು. ತನ್ನ ದಾಯಾದಿ ತಿಮ್ಮೇಗೌಡನ ಮಗ ಮುರಳಿಗೆ ಕಮಲನೊಂದಿಗೆ ಮದುವೆಯಾಗಿ ಆಸ್ತಿ ಕೈಬಿಡುವುದೆಂಬ ದುರಾಲೋಚನೆ ಕೂಡ ಮುದ್ದೇಗೌಡನಿಗೆ ಇತ್ತು.

ತಿಮ್ಮೇಗೌಡ ಸತ್ತ ಮೇಲೆ ಬಸವೇಗೌಡನ ವರ್ತನೆಯೆ ಬದಲಾಗುತ್ತದೆ. ಮಗಳನ್ನು ಪೋಲಿ ಶಂಕರನಿಗೆ ಕೊಟ್ಟು ಮದುವೆ ಮಾಡಲು ನಿಶ್ಚಯಿಸಿರುತ್ತಾನೆ. ಇದನ್ನು ತಿಳಿದ ಕಮಲನ ತಾಯಿ ಪಾಪಮ್ಮ ವಿರೋಧಿಸುತ್ತಾಳೆ. ಆದರೆ ಬಸವೇಗೌಡ ಯಾರ ಮಾತನ್ನು ಕೇಳದೆ ಕಮಲನ ಮದುವೆಯನ್ನು ಶಂಕರನೊಂದಿಗೆ ಮಾಡೆ ಬಿಡುತ್ತಾನೆ. ತನಗಿಷ್ಟವಿಲ್ಲದ ಮದುವೆಯಾದರು ತಂದೆಯ ಮಾತಿಗೆ ಎದುರಾಡದೆ ತಲೆಕೊಡುವಳು ಕಮಲ. ಮುರುಳಿಯ ತಾಯಿ ಗೌರಮ್ಮ ಅಣ್ಣನ(ಬಸವೇಗೌಡನ ತಂಗಿ) ಜೊತೆ ಮದುವೆ ವಿಚಾರಕ್ಕೆ ಮನಸ್ತಾಪ ಬಂದು ಮದುವೆಗೆ ಹೋಗುವುದಿಲ್ಲ. ಮುರುಳಿ ಕಮಲಿಗೆ ಅಕ್ಷತೆ ಹಾಕಿ ಊಟ ಮಾಡದೆ

ಬರುತ್ತಾನೆ. ಕಮಲಿಯನ್ನು ತನಗೆ ಯಾಕೆ ಕೊಟ್ಟು ಮದುವೆ ಮಾಡಲಿಲ್ಲ ಎಂಬುದನ್ನು ತಿಳಿದ ಮುರುಳಿ ಹಠದಿಂದ ದುಡಿಮೆಯನ್ನು ಮಾಡಲು ಶುರು ಮಾಡುತ್ತಾನೆ. ಅಪ್ಪನ ಸಾಲ ತೀರಿಸಿ ನೆಮ್ಮದಿಯ ಬದುಕು ಕಾಣುವ ಆತುರ ಮುರುಳಿಗೆ. ಗಂಡನ ದಾರಿಯಲ್ಲೇ ಸಾಗುವ ಗೌರಮ್ಮನಿಗೆ ಮಗನನ್ನು ಅನಾಥವಾಗಿ ಬಿಟ್ಟು ಹೋಗಲು ಮನಸ್ಸಾಗಲಿಲ್ಲ.

ಕಮಲಳ ಮದುವೆಯಾಗಿ ವರ್ಷ ಉರುಳಿತು. ಮೂರು ತಿಂಗಳ ಬಸುರಿ. ಬಸವೇಗೌಡನಾಗಲಿ, ಮುದ್ದೇಗೌಡನಾಗಲಿ ಅಂದುಕೊಂಡಂತೆ ಶಂಕರನಲ್ಲಿ ಯಾವ ಬದಲಾವಣೆಯು ಆಗಲಿಲ್ಲ. ಶಂಕ್ರ ಯಾರು ಇಲ್ಲದ ವೇಳೆಯಲ್ಲಿ ಹೆಂಡತಿಗೆ ಬಡಿದು ಮೈಮೇಲಿನ ಒಡವೆಗಳನ್ನು ಕಿತ್ತುಕೊಂಡು ಕುಡಿತ ಮತ್ತು ಇಸ್ಪೀಟ್ನಲ್ಲಿ ಕಳೆಯುತ್ತಾನೆ. ಇದೇ ಮುಂದುವರಿದು ಆಸ್ತಿಯಲ್ಲಿ ಪಾಲುಕೇಳುತ್ತಾನೆ. ತಂದೆ ಮತ್ತು ಅಣ್ಣಂದಿರು ಶಂಕರನಿಗೆ ಹೊಡೆದು ಬುದ್ಧಿ ಹೇಳುತ್ತಾರೆ. ಮನೆ ಬಿಟ್ಟ ಶಂಕರ ಎಲ್ಲಿಗೆ ಹೋದನೊ ಮತ್ತೆ ಬರಲಿಲ್ಲ. ತನ್ನ ಹೊಟ್ಟೆಯಲ್ಲಿರುವ ಮಗುವಿನೊಂದಿಗೆ ಕಮಲ ಚಿಂತೆಯಲ್ಲಿ ಮುಳುಗುತ್ತಾಳೆ. ಒಂದು ದಿನವು ಪ್ರೀತಿಯಿಂದ ಹೆಂಡತಿಯೆಂಬ ಆಸೆಯೇ ಇಲ್ಲದ ಇವನು ನನ್ನನ್ನು ಮತ್ತು ಮಗುವನ್ನು ನೋಡಲು ಬರುತ್ತಾನೆಂಬ ನಂಬಿಕೆ ಕಮಲಿಗೆ ಇಲ್ಲ. ಮಗ ಸರಿಹೋಗಲಿ ಎಂದು ಮುಗ್ಧ ಹೆಣ್ಣನ್ನು ತಂದು ಮದುವೆ ಮಾಡಿ ಅವಳ ಬಾಳನ್ನು ನರಕ ಮಾಡುವವರು ನಮ್ಮ ಸಮಾಜದಲ್ಲಿ ಬಹಳಷ್ಟು ಮಂದಿ ಇದ್ದಾರೆ. 'ಹುಟ್ಟು ಗುಣ ಸುಟ್ಟರು ಹೋಗಲ್ಲ' ಎಂಬಂತೆ ಶಂಕರ ತನ್ನ ಕೆಟ್ಟ ಚಾಳಿಯನ್ನು ಬಿಡಲಿಲ್ಲ. ಕಮಲಾ ಪಾಲಿಗೆ ಕಣ್ಣೀರಿನ ದು:ಖವೇ ಬದುಕು.

ಸಿರಿವಂತಿಕೆಗೆ ಮಾರು ಹೋಗಿ ಶಂಕರನಿಗೆ ಮದುವೆ ಮಾಡಿದ ತನ್ನ ತಂದೆಯ ಬಗ್ಗೆ ಕಮಲಗೆ ಕೋಪವಿದ್ದರು ಅದನ್ನು ವ್ಯಕ್ತಪಡಿಸುವಾಗಿಲ್ಲ. ಇದು ನಮ್ಮ ಸಮಾಜದಲ್ಲಿರುವ ಶಿಷ್ಟಾಚಾರ. ಹೆಣ್ಣಿಗೆ ತನ್ನ ಬದುಕಿನ ದಾರಿ ಹಿಡಿಯಲು ಯಾವ ಸ್ವತಂತ್ರವು ಅವಳಿಗಿಲ್ಲ. ತನ್ನ ಮಗಳ ಸ್ಥಿತಿಯನ್ನು ಕಂಡು ಪಾಪಮ್ಮ ಒಂದೆರಡು ಮಾತು ಗಂಡನಿಗೆ ಹೇಳಿದರೆ ಅವನು ಸುಮ್ಮನಿರುತ್ತಿರಲಿಲ್ಲ. ಹೆಂಡತಿ ಮೇಲೆ ದಬ್ಬಾಳಿಕೆ ನಡೆಸುತ್ತಿದ್ದ. ಇಲ್ಲಿ ಪುರುಷ ವ್ಯವಸ್ಥೆಯಲ್ಲಿ ನಲುಗುವ ಹೆಣ್ಣು ಮಕ್ಕಳ ಸ್ಥಿತಿ ಚಿಂತಾಜನಕವಾದುದು, ಜಮಿನ್ದಾರಿ ಮನೆತನಗಳು ಕೆಳ ಜಾತಿಯವರನ್ನಷ್ಟೇ ಅಲ್ಲ ತಮ್ಮ ಕುಟುಂಬದ ಸ್ತ್ರೀಯರನ್ನು ಶೋಷಿಸುತ್ತಿದ್ದುದು ವಿಷಾದದ ಸಂಗತಿ.

ಕಮಲಳಿಗೆ ಒಂದು ಹೆಣ್ಣು ಮಗುವಾಗಿ ಐದು-ಆರು ತಿಂಗಳಾಗಿದೆ. ಕದ್ದು ಹೋಗಿದ್ದವನು ಬದುಕಿಗೆ ಯಾವ ಮಾರ್ಗವು ದೊರೆಯದೆ ಹಿಂತಿರುಗಿದ. ಹೆಂಡತಿಗಾಗಿ ಅಲ್ಲ. ಬರುವಾಗ ಕುಲಗೋತ್ರ ಗೊತ್ತಿಲ್ಲದ ಮತ್ತೊಂದು ಹೆಣ್ಣಿನೊಂದಿಗೆ ಊರಿಗೆ ಬಂದಿದ್ದ. ಮನೆ ಮರ್ಯಾದೆಯನ್ನು ತೆಗೆದ ಶಂಕರನನ್ನು ಪುಟ್ಟೇಗೌಡ ಮನೆಗೆ ಸೇರಿಸುವುದಿಲ್ಲ. ಊರಿನ ಹೊರ ಭಾಗದಲ್ಲಿ ಕಾಫಿ-ಟೀ ಅಂಗಡಿ ಇಟ್ಟುಕೊಂಡು ಗುಡಿಸಲೊಂದನ್ನು ಕಟ್ಟಿಕೊಂಡು ಜೀವನ ಪ್ರಾರಂಭಿಸಿದ ಶಂಕರ. ಶಂಕರನೊಂದಿಗೆ ಬಂದ ಹೆಂಗಸು ತನ್ನ ಮೈಮಾಟದಿಂದ ಗದ್ದೆಗೆ ಹೋಗುವವರನ್ನು, ಬರುವವರನ್ನು ಸೆಳೆದು ಕಾಫಿ-ಟೀ ಕುಡಿದು ಹೋಗುವಂತೆ ಮಾಡಿ ಹಣ ಸಂಪಾದನೆಗೆ ಇಳಿದಳು. ಇದರಿಂದ ಶಂಕರನಿಗೆ ಊರ ಕೆಲವರ ಬೆಂಬಲವು ದೊರೆಯಿತು.

ಕಾಫಿ-ಟೀ ಮಾಡುವುದರ ಜೊತೆಗೆ ತಿಂಡಿ ಮಾಡಿದರೆ ಮತ್ತಷ್ಟು ಲಾಭಗಳಿಸುವ ಆಸೆಯಿಂದ ಶಂಕರನಿಗೆ ಮೊದಲನೇ ಹೆಂಡತಿ ಕಮಲಳನ್ನು ಕರೆದುಕೊಂಡು ಬರುವಂತೆ ಒತ್ತಾಯ ಮಾಡುವಳು. ಶಂಕರನು ಅವಳ ಒತ್ತಡ ತಾಳಲಾರದೆ ಮಾವ ಬಸವೇಗೌಡರ ಮನೆಗೆ ಹೋಗಿ ಹೆಂಡತಿಯನ್ನು ಕಳುಹಿಸಬೇಕೆಂದು ಕೇಳುತ್ತಾನೆ. ಪ್ರಾರಂಭದಲ್ಲಿ ಒಪ್ಪಲಿಲ್ಲ ಬಸವೇಗೌಡ. ಶಂಕರ ಊರಿನ ಮುಖಂಡರನ್ನು ಕರೆಸಿ ಪಂಚಾಯಿತಿ ಸೇರಿಸಿ ಕಳುಹಿಸುವಂತೆ ತಾಕೀತು ಮಾಡುತ್ತಾನೆ. ಇದಕ್ಕೆ ಒಪ್ಪಿದ ಬಸವೇಗೌಡ ಕಮಲಳಿಗೆ ಗಂಡನೊಂದಿಗೆ ಹೋಗುವಂತೆ ಸೂಚನೆ ನೀಡುತ್ತಾನೆ. ಇದರಿಂದ ಆತಂಕಗೊಂಡ ಕಮಲ ಕೆರೆ-ಬಾವಿಗೆ ಬಿದ್ದರು ಸರಿ ಇನ್ನೊಂದು ಹೆಂಗಸಿನೊಂದಿಗೆ ಬಾಳುತ್ತಿರುವ ಗಂಡನ ಜೊತೆ ಹೋಗಲು ನಿರಾಕರಿಸುವಳು. ತಾಯಿ ಪಾಪಮ್ಮ "ಹೀಗಂದ್ಕಂಡೇ ನನ್ ಮಗೀನ್ ಬಾಳ್ನ ಹಾಳ್ಮಾಡ್ಬುಟ್ಟೆ ನೀನು, ಕಳ್ಸಕಾಗಿಲ್ಲ ಅಂತ ಹೇಳ್ಬೇಕಾಗಿತ್ತು. ನಿನ್ಕೈಲಿ ಹೇಳಕಾಗ್ದೆ ಇದ್ರೆ ನಾನೇ ಹೇಳ್ತಿನಿ ನಡಿ, ಹೆಣ್ಣೆತ್ತೋರ್ ಹೊಟ್ಟೆ ಉರಿ ಅವರ್ಗೇನ್ ಗೊತ್ತು?"(ಬೋರೇಗೌಡ ಚಿಕ್ಕಮರಳಿ, ಏಳು ಸುತ್ತಿನಕೋಟೆ,೧೯೮೮, ಪುಟ-೩೩) ಎಂದು ಮಗಳ ಪರವಾಗಿ ಮಾತನಾಡಿದ ಪಾಪಮ್ಮನಿಗೆ, ಕಮಲಾಳ ಬದುಕು ಹಾಳಾಗುವುದಕ್ಕೆ ಇಷ್ಟವಿರಲಿಲ್ಲ. ಹೆಂಡತಿ ಮಾತುಗಳಿಂದ ಕುಪಿತನಾದ ಬಸವೇಗೌಡ 'ಸುಮ್ನೆ ಕೂತ್ಗೊ, ಹೆಚ್ಚಾಗ್ ಮಾತಾಡುದ್ರೆ ನಾಲ್ಗೆ ಸೀಳ್ಬುಟ್ಟೇನು?' ಎಂದು ಹೆಂಡತಿಗೆ ತಿರುಗಿಬಿದ್ದ. ಇಲ್ಲಿ ಹೆಣ್ಣಿನ ಮಾತಿಗೆ ಸೂಕ್ತ ಮಾನ್ಯತೆ ಕಾಣುವುದಿಲ್ಲ. ಕಥೆಯಲ್ಲಿ ಮಾತ್ರವಷ್ಟೆ ಅಲ್ಲ ವಾಸ್ತವವಾಗಿ ಕೌಟುಂಬಿಕ ಪರಿಧಿಯಲ್ಲಿ ಹೆಣ್ಣಿನ ಮಾತಿಗೆ ಹಾಗೂ

ಹೆಣ್ಣಿಗೆ ಸ್ವತಂತ್ರವಿಲ್ಲವೆಂಬುದನ್ನು ಅರಿಯಬೇಕಾಗಿದೆ. ತನ್ನ ಸ್ವಾರ್ಥಕ್ಕೆ ಸ್ತ್ರೀಯರನ್ನು ಬಲಿ ಕೊಡುವುದು ಗಂಡಿಗೆ ಎಷ್ಟು ಸುಲಭವೆನ್ನುವುದು ಕಥೆಯಲ್ಲಿ ಕಂಡುಬರುವ ಸಂಗತಿಯಾಗಿದೆ.

ದಿಕ್ಕು ಕಾಣದ ಕಮಲ ಗಂಡನ ಬಳಿ ಹೋದರೆ ಅದು ಸೆರೆ ಮನೆಯ ನರಕ. ಮೇಲಾಗಿ ಆ ಮನೆಯಲ್ಲಿರುವ ನಡತೆ ಕೆಟ್ಟ ಸವತಿ ಮಾತ್ಸರ್ಯಕ್ಕೆ ಬಲಿಯಾಗಿ ನರಳುವುದಕ್ಕಿಂತ ಆತ್ಮಹತ್ಯೆಯೆ ಸರಿ ಎಂದು ತೀರ್ಮಾನಿಸುವಳು. ಪ್ರೀತಿಯಿಂದ ಸಾಕಿದ ತಾಯಿ ಐದು ತಿಂಗಳ ಹೆಣ್ಣು ಮಗುವನ್ನು ಬಿಟ್ಟು ಒಬ್ಬಳೇ ಸಾಯಲು ತೀರ್ಮಾನಿಸಿ, ಮತ್ತೆ 'ಹೆಣ್ಣಿನ ಬಾಳೆಂದರೆ ಇಷ್ಟೇ ಅಲ್ಲವೆ' ಎಂದು ತೊಟ್ಟಿಲಿನ ಮಗುವನ್ನು ಎತ್ತಿಕೊಂಡು ತನ್ನ ಪ್ರಾಣ ತೆತ್ತಲು ಊರ ಕಾಲುವೆಗೆ ಹೋದಳು.

ಕೊನೆಗೂ ಕಮಲಳ ಬದುಕು ಸಾವಿನಲ್ಲಿ ಅಂತ್ಯವಾಗುವುದನ್ನು ಕಾಣಬಹುದು. ಇವಳ ಸ್ಥಿತಿ ನಮ್ಮ ಸುತ್ತಲಿನ ಸಮಾಜದಲ್ಲಿ ಕಂಡುಬರುವ ವಾಸ್ತವಾಂಶವಾಗಿದೆ. 'ಸ್ತ್ರೀ ಸಬಲೀಕರಣ' ಇನ್ನು ಪತ್ರಿಕೆ-ಭಾಷಣಗಳಲ್ಲಿ ಇದೆಯೇ ಹೊರತು ಕಾರ್ಯಗತವಾಗಿಲ್ಲ. ಇನ್ನೊಬ್ಬರ ಮನೆಯ ಹೆಣ್ಣು ಮಕ್ಕಳನ್ನು ಮದುವೆಯಾಗಿ ಕಷ್ಟಗೀಡು ಮಾಡುವುದು ಮನುಕುಲಕ್ಕೆ ನಾಚಿಕೆಗೇಡು.

ಇದೇ ಕಥೆಗಾರರ **'ಗಂಡೈದ ಹೆಂಡತಿ ತಲೆ ಮೇಲೆ ಕಾಫಿ ಸುರಿದದ್ದು'** ಕಥೆಯಲ್ಲಿ ಇರುವಂತೆ ಗ್ರಾಮೀಣ ಪ್ರದೇಶದ ಕುಡುಕ ಗಂಡನಿಂದ ಹಿಂಸೆಗೊಳಗಾದ ಹೆಣ್ಣಿನ ಸ್ಥಿತಿಯನ್ನು ಕಥೆಗಾರರು ಸೂಕ್ಷ್ಮವಾಗಿ ನಿರೂಪಿಸಿದ್ದಾರೆ. ಕುಡುಕ ಗಂಡನ ಹೆಸರು 'ಗಂಡೈದ', ಇವನು ಸಾಧಾರಣ ವ್ಯಕ್ತಿ. ಹೇಳಿಕೊಳ್ಳುವಾಗ ಅನೂಕೂಲಸ್ಥನಲ್ಲ. ಕೂಲಿ ಮಾಡಿ ಜೀವನ ಸಾಗಿಸಬೇಕು. ಹೆಂಡತಿಯನ್ನು ಕಟ್ಟಾಳಾಬೇಕು ಎಂಬ ಛಲ. ಮನೆಗೆ ಕುಡಿದು ಬಂದಾಗ ಹೆಂಡತಿ ಮಕ್ಕಳನ್ನು ಬಡಿಯುವ ಜೂರತ್ತು ಇವನಿಗೆ. ಊರಿನ ಸಾಹುಕಾರ, ಮೆಲ್ವರ್ಗದ ಪುರೋಹಿತ 'ಲೇ, ಶೂದ್ರ ಮುಂಡೇದೆ' ಎಂದು ಕರೆದಾಗ ಗಂಡೈದ ಬೆನ್ನು ಬಾಗಿಸಿ ಅವರ ಮುಂದೆ ನಿಂತಾಗ ಹೆಂಡತಿ ಮುಂದೆ ತೋರುವ ಜೂರತ್ತು ಇರುವುದಿಲ್ಲ.

ಹೆಂಡದ ಅಂಗಡಿಯಿಂದ ಕುಡಿದ ಮತ್ತಿನಲ್ಲಿ ಬಂದಾಗ ಮನೆಯ ಒಳಾಗಣ ದೀಪದ ಬೆಳಕು ಗೋಡೆಯ ಮೇಲೆ ಕಾಣುತ್ತಿರುತ್ತದೆ. ಇದನ್ನು ತಮ್ಮ ಊರಿನ ಸಾಹುಕಾರ ಎಂದು ತಿಳಿದು ಹೆಂಡತಿಯ ಮೇಲೆ ಅನುಮಾನ ಪಡುತ್ತಾನೆ. ಕುಡಿದ ಅಮಲಿನಲ್ಲಿ ಬಿಳಿ ಬಟ್ಟೆ ಹಾಕಿದ ಸಾಹುಕಾರನಿಗೆ ಹೊದಿಯಬೇಕೆಂದು, ಬೆಳಕು ಕಾಣುವ ಗೋಡೆಗೆ ಹೊದ್ದು ಪೆಟ್ಟು ಮಾಡಿಕೊಂಡು ಬೀಳುತ್ತಾನೆ. ಊರಿನಲ್ಲಿ

ಬಡವಳಾದರು ಗೌರವದಿಂದ ಬದುಕುತ್ತಿರುವಳು ಗಂಡ್ಯೆದನ ಹೆಂಡತಿ ಸೀತೆ. ಗಂಡನ ಮಾತುಗಳನ್ನು ಕೇಳಿದ ಸೀತೆ ಇಲ್ಲದ ವಿಚಾರವನ್ನು ಮಾತಾನಾಡಿ ಮರ್ಯಾದೆ ಕಳೆಯುತ್ತಾನಲ್ಲ ಎಂದು ಅವನ ಬಾಯಿ ಮುಚ್ಚಿ ಮನೆಯೊಳಗೆ ಎಳೆದುಕೊಳ್ಳುತ್ತಾಳೆ.

ಗಂಡ್ಯೆದ ಬೆಳಗ್ಗೆ ಎದ್ದವನು "ಇವಳೆಂಥ ಗರತಿ, ಏಳುವ ಹೊತ್ತಿಗೆ ಸರಿಯಾಗಿ ಕಾಫಿ ತಂದು ಇಡಬೇಡವೆ? ಲೇ ಅವ್ಳ್ಯಾರ್ನೆ ನಿಮ್ಮವುನ್ ಇನ್ನು ಕಾಫಿ ಆಗಿಲ್ವ" (ಬೋರೇಗೌಡ ಚಿಕ್ಕಮರಳಿ, ಏಳು ಸುತ್ತಿನಕೋಟೆ, ೧೯೮೮, ಪುಟ-೩೧). ಈ ಕೀಳು ಮಾತನ್ನು ಕೇಳಿದ ಹೆಂಡತಿ ಬೆಚ್ಚಿ ಬಿದ್ದಳು. ಮದುವೆ ಆಗಿ ಗಂಡನ ಮನೆಗೆ ಬಂದಾಗಿನಿಂದ ಗಂಡಾಗಿ ದುಡಿಯುವ ಅವಳಿಗೆ ಇಂಥ ಮಾತುಗಳು ಲೆಕ್ಕವಿಲ್ಲದಷ್ಟು. ಇಂಥ ಸ್ಥಿತಿಗೆ ಗಂಡ ಯಾಕೆಬೇಕೆಂದು ನಿಟ್ಟುಸಿರು ಬಿಡುತ್ತಿದ್ದಳು. ತನ್ನ ದುಡಿಮೆಯಿಂದ ಸೀತೆ ಸಂಸಾರ ನೀಗಿಸುತ್ತಿದ್ದಳು. ಗಂಡ ಎನ್ನುವ ಭಾವನೆ ಅವಳಲ್ಲೂ ಇರಲಿಲ್ಲ. ಬೈಗುಳಕ್ಕೆ ಪ್ರತಿ ಬೈಗುಳ, ಶಾಪಕ್ಕೆ ಪ್ರತಿ ಶಾಪ ಅವಳಲ್ಲಿ ಹುಟ್ಟುತ್ತಿತ್ತು. ಗಂಡನಿಂದ ಮನೆಗೆ ಆದಾಯವಿಲ್ಲದಿದ್ದರು. ಗಂಡನ ಹೊಟ್ಟೆ ಪಾಡನ್ನು ನಡೆಸುತ್ತಿದ್ದಳು. ಕೋಪದಿಂದಲೆ ಸೀತೆ ಕುದಿಯುವ ಕಾಫಿಯನ್ನು ಗಂಡನ ಮುಂದಿಟ್ಟಳು. ಗಂಡ್ಯೆದ ಮತ್ತೆ "ಆ ಸಾವ್ಕಾರನಾತ್ರೆ ಯಾಕ್ಣೆ ಬಂದಿದ್ದ?" ಎಂದು ಹೆಂಡತಿಗೆ ಪ್ರಶ್ನೆ ಮಾಡಿದ. ರಾತ್ರಿ ಗೋಡೆ ಮೇಲಿನ ಬೆಳಕನ್ನು ಕುಡಿದ ಮತ್ತಿನಲ್ಲಿ ಸಾಹುಕಾರನೆಂದು ತಿಳಿದ ವಿಚಾರ ಸೀತೆಗೆ ತಿಳಿದಿತ್ತು. ಪ್ರಸಂಗವನ್ನು ಬೆಳೆಯ ಬಿಟ್ಟರೆ ಕೇಳಿಸಿಕೊಂಡ ಜನ ನಿಜವೆಂದು ನಂಬಿ ಇಲ್ಲದ ಕಥೆ ಕಟ್ಟುತ್ತಾರೆಂದು ಬಾಯಿ ಮುಚ್ಚಿ ಎಳೆದು ತಂದು ಮಲಗಿಸಿದಳು. ನನ್ನ ಭಾಗ್ಯಕ್ಕೆ ಇದೊಂದು ಕಡಿಮೆಯಾಗಿತ್ತೆಂದು ಗಂಡನ ಬಗೆಗೆ ತಾತ್ಸರ, ಅಸಹ್ಯ ಅವಳಲ್ಲಿ ಹುಟ್ಟಿತು. ಗಂಡ್ಯೆದ ಮತ್ತೆ ಕೇಳಿದಾಗ ಸೀತೆ ಈ ರೀತಿಯಲ್ಲಿ ಮಾತಾನಾಡುವ ಬದಲು ಸಾವು ಬಂದರೆ ಕುಂಕುಮ ಬಳೆ ತೆಗೆದು ನಿನ್ನ ಎದೆಯ ಮೇಲೆ ಹಾಕಿ ನೆಮ್ಮದಿಯಿಂದ ಇರುತ್ತೇನೆ ಎನ್ನುವಳು. ಅವಳು ಅಷ್ಟು ರೋಸಿಹೋಗಿದ್ದಳು.

ಶೋಷಿಸುವ ಗಂಡ ಇರುವುದಕ್ಕಿಂತ ಸತ್ತರೆ ಮೇಲು ಎಂಬದು ಸೀತೆಯ ಚಿಂತನೆ ಶೋಷಣೆಯಿಂದ ಮುಕ್ತಿ ಪಡೆಯುವ ಆಶಯ ವ್ಯಕ್ತವಾಗಿದೆ. ಸಂಪ್ರದಾಯ ಚೌಕಟ್ಟಿನಲ್ಲಿ ಪತಿಯೆ ಪರದ್ಯೆವವೆಂಬ ನುಡಿಗೆ ವಿರುದ್ಧವಾಗಿ ಚಿಂತಿಸಿದ್ದಾಳೆ. ಗಂಡ ಏನು ಮಾಡಿದರು ಹೆಂಡತಿ ಸಹಿಸಿಕೊಳ್ಳಬೇಕೆಂಬ ಚೌಕಟ್ಟನ್ನು ಕಥೆಗಾರರು ಕಥೆಯಲ್ಲಿ ನೀಡಿದ್ದಾರೆ. ಸೀತೆಯ ಮಾತುಗಳನ್ನು ಕೇಳಿ

ಗಂಡೈದ 'ನಿಲ್ಲಸ್ನೆ ನಿನ್ ಬೋಗ್ಯಾವ ಬೋಸುಡಿ' ಎಂದವನೇ ಕಾಫಿಯ ಪಾತ್ರೆಯನ್ನು ತೆಗೆದು ಸೀತೆಯ ತಲೆ ಮೇಲೆ ಸುರಿದ. ಈ ಮೂಲಕ ತನ್ನ ಆಕ್ರೋಶವನ್ನು ವ್ಯಕ್ತಪಡಿಸಿದ್ದಾನೆ. ಕೊನೆಗೆ ಸೀತೆ ಎಷ್ಟೇ ದಿಟ್ಟತನ ತೋರಿದರು ಗಂಡನ ಶೋಷಣೆಯಿಂದ ಮುಕ್ತವಾಗಲು ಸಾಧ್ಯವಾಗಲಿಲ್ಲ. ಸೀತೆಯು ತನ್ನ ಮೇಲಿನ ಶೋಷಣೆಯನ್ನು ಎದುರಿಸಿ ನಿಲ್ಲುವ ಪ್ರಯತ್ನ ಮಾಡಿದರು ಅವಳಿಗೆ ಅದು ಸಾಧ್ಯವಾಗಲಿಲ್ಲ.

ಶಿವಳ್ಳಿ ಕೆಂಪೇಗೌಡ ಅವರ 'ಕ್ರೌರ್ಯ' ಸ್ತ್ರೀ ಶೋಷಣೆ ಎನ್ನುವುದು ನಿರಂತರವಾಗಿ ಕಾಲಾನುತೀತವಾಗಿ ನಡೆಯುತ್ತಾ ಬಂದಿದೆ. ಮಳೆ ಬಂದರೆ ಬೆಳೆ-ಬೆಳೆಯುವ ಜೀವನ ಎಂದು ರೈತನ ಸ್ಥಿತಿ. ಮುದ್ದಪ್ಪ ಮಗಳ ಮದುವೆಗೆಂದು ಮೂರು ಸಾವಿರ ಸಾಲವನ್ನು ಪಡೆದಿರುತ್ತಾರೆ. ಈಗಾಗಲೇ ಮೂರು ವರ್ಷಗಳು ತುಂಬಿದರು ಸಾಲ ತೀರಿಸಲು ಆಗಿಲ್ಲ. ಕಾರಣ ಮುದ್ದೇಗೌಡನಿಗೆ ಕಷ್ಟದ ಮೇಲೆ ಕಷ್ಟ. ಅಳಿಯ ಮಗಳನ್ನು ಹೊಡೆದು ಹಣಕ್ಕಾಗಿ ಆಗಾಗ ಕಳಿಸುತ್ತಿದ್ದ. ಮುದ್ದಪ್ಪನಿಗೆ ಖಾಯಿಲೆ, ಹೀಗಾಗಿ ಮದುವೆಗೆ ಮಾಡಿದ್ದ ಸಾಲಕ್ಕೆ ಬಡ್ಡಿ ಬೆಳೆದು ನಿಂತಿದೆ.

ಮಗಳು ಮಂಜುಳ ತಂದೆ ಕಷ್ಟದಲ್ಲಿದ್ದಾನೆಂದು ಸಂಕಟಪಟ್ಟುಕೊಂಡಳು. ಇಂಥ ಸ್ಥಿತಿಯಲ್ಲಿಯೂ ಅಪ್ಪನಿಂದ ಹಣ ತರುವಂತೆ ಗಂಡ ಹೆಂಡತಿಗೆ ಕಟ್ಟಪ್ಪಣೆ ಮಾಡಿದನು. ಏತಕ್ಕಾಗಿ ಎಂಬುದನ್ನು ಮಗಳು ಅಪ್ಪನಿಗೆ ಹೇಳಲೇಬೇಕಾಯಿತು. "ಅಪ್ಪಾ ಅವ್ರು ಕಡೇ ಹೊಲ್ಕೆ ಪಂಪ್ಸೆಟ್ಟು ಹಾಕ್ಸಾರಂತೆ. ಎರಡ್ಸಾವ್ರ ರೂಪಾಯಿ ಕೊಡ್ಬೇಕಂತೆ ಹಾಗಂತ ಕೇಳು ಅಂದ್ರು" ಎಂದಾಗ ಮುದ್ದಪ್ಪನಿಗೆ ಸಹಿಸಿಕೊಳ್ಳಲಾಗದ ಸಿಟ್ಟು ಬಂದರು ತಡೆದುಕೊಂಡ. "ಹದಿನೈದು ದಿನದ ಹಿಂದೆ ಐವತ್ತು ಸಾವಿರ ರೂಪಾಯಿ ಮೇಗ್ಳಟ್ಟಿ ಮರಿಯಪ್ಪನತ್ರ ಈಸ್ಕೊಟ್ಟೆ" ಎಂದ ಮುದ್ದಪ್ಪ. ಆಗ ಅಳಿಯ ಕಾಳಪ್ಪ ಮಾವನ ಮೇಲೆ ತಿರುಗಿ ಬಿದ್ದ. ಹೆಂಡತಿ ಮಂಜುಳ, "ಅವರ ಕಷ್ಟವೆ ಹೆಚ್ಚಿದೆ, ಬೇಡವೆಂದರೆ ದನಿಗೆ ಕೆಚ್ಚುವಂಗೆ ಕೆಚ್ಚುತ್ತಿರಿ, ಇಷ್ಟು ಹಿಂಸೆ ಕೊಡುವ ಬದಲು ಒಂದಿ ಏಟಿಗೆ ಸಾಯಿಸಿಬಿಡಿ ಎಂದು ಕೊರಗಿದಳು. ಮಾವನಿಂದ ಯಾವ ಹಣವು ಬರದೆ ಇದ್ದುದರಿಂದ ತನ್ನ ಆಕ್ರೋಶವನ್ನು ಹೆಂಡತಿಯ ಮೇಲೆ ತೋರುತ್ತಾನೆ. ಇದು ಶೋಷಣೆಯ ಒಂದು ಭಾಗ. ಈಗಲೂ ವರದಕ್ಷಿಣಿಗಾಗಿ ಹೆಣ್ಣು ಮಕ್ಕಳನ್ನು ಜೀವಂತ ಸುಡುವ ರೀತಿ ದಾನವ ಪ್ರವೃತ್ತಿಯಾಗಿದೆ.

ಮಂಜುಳ ಅತ್ತೆ ಬೋರಕ್ಕ ಸಿಟ್ಟಿನಿಂದಲೆ ಸೊಸೆಯನ್ನು ಕರೆದುಕೊಂಡು ಹೊರಟಳು. ಅತ್ತೆ ಮನೆ ಮಂಜುಳನಿಗೆ ನರಕವಾಗಿ ಪರಿಣಮಿಸಿತು. ಕುಂತರು

ತಪ್ಪು, ನಿಂತರು ತಪ್ಪು. ಮನೆಗೆಲಸ ಮಾಡುವಾಗ ನಿಧಾನವಾದರೆ ಬೈದು ಒಡೆಯುತ್ತಿದ್ದಳು. ಬಟ್ಟೆ ಹೊಗೆಯುವುದರಲ್ಲಿಯೂ ತಪ್ಪು ಕಂಡು ಹಿಡಿಯುತ್ತಿದ್ದಳು. ಅತ್ತೆಯ ಕಾಟ ಒಂದು ಕಡೆಯಾದರೆ, ಗಂಡನಿಂದ ಮತ್ತೊಂದು ರೀತಿ. ಸಾರಿಗೆ ಉಪ್ಪು ಜಾಸ್ತಿ, ಹೀಗೆ ನಾನಾ ಕಾರಣಗಳನ್ನು ತೆಗೆದು ಚಿತ್ರ ಹಿಂಸೆ ಕೊಡಲು ಶುರು ಮಾಡಿದರು.

ಊರಿನ ಮಾಯಿಗೌಡ ಮುದ್ದಪ್ಪನನ್ನು ಕರೆಸಿ, "ನಿನ್ನ ಮಗಳನ್ನು ಕೂಲಿಗೆ ಕಳುಹಿಸುತ್ತಿದ್ದಾರೆ ಮನೆಗೆ ಕರೆದುಕೊಂಡು ಹೋಗು" ಎಂದು ಹೇಳಿದಾಗ ಮುದ್ದಪ್ಪನಿಗೆ ಆದ ಸಂಕಟ ಅಸಾಧ್ಯವಾದುದು. ಅತ್ತೆ-ಗಂಡ ಇಬ್ಬರು ಒಂದಲ್ಲ ಒಂದು ರೀತಿ ಅವಳಿಗೆ ಹಿಂಸೆಕೊಡುವುದಾಗಿತ್ತು. ಅಳಿಯ ಕೇಳಿದಾಗ ಹಣ ಕೊಡಲಿಲ್ಲವೆಂಬ ಕಾರಣಕ್ಕೆ ತನ್ನ ಮಗಳಿಗೆ ಕಷ್ಟಗಳನ್ನು ಕೊಡುತ್ತಿದ್ದಾರೆ ಎಂಬುದು ಅವನ ಅರಿವಿಗೆ ಬಂತು. ಆದರೆ ಮಾಡುವುದಾದರು ಏನನ್ನು, ಮಾಡಿರುವ ಸಾಲವೇ ತೀರಿಲ್ಲ. ಹೊಸ ಸಾಲ ಕೊಡುವವರು ಇಲ್ಲ.

ಮುದ್ದಪ್ಪ ಬೆಟ್ಟಳ್ಳಿಗೆ ಮಗಳ ಮನೆಗೆ ಬಂದು ಕೂಲಿಗೆ ಯಾಕೆ ಕಳುಹಿಸುವಿರಿ, ಶಿವ ಕೊಟ್ಟಂಗೆ ಬೇಕಾದಷ್ಟು ಆಸ್ತಿ ಇದೆ. ಮನೆ ಸೊಸೇನ ಕೂಲಿಗೆ ಕಳುಹಿಸಿ ಬದುಕ ಬೇಕಾ? ಎಂದು ಹೇಳುವನು. ಮನೆಗೆ ಬಂದ ಮಾವನನ್ನು ಅಳಿಯ ಕಾಳ ಮಾತನಾಡಿಸಲಿಲ್ಲ. ಬೀಗತಿ ಬೋರಮ್ಮ ಪ್ರತಿ ಉತ್ತರ ಕೊಟ್ಟು 'ಕೂಲಿಗೂ ಕಳಿಸುತ್ತೀವಿ, ಕಳೇಗು ಕಳಿಸುತ್ತೀವಿ' ಎಂಬ ಮಾತಿಗೆ ಮರು ಮಾತಾಡಲಿಲ್ಲ ಮುದ್ದಪ್ಪ. ಮಗಳಿಗೆ "ಕಷ್ಟವೋ ಸುಖವೋ ನೀನ್ಮಾತ್ರ ಮನೆ ಹೊಸಿಲ್ದಾಟಿ ಬೀದಿಗೆ ಬರಬೇಡ ಕನವ್ವ. ಕೊಟ್ಟ ಮನೇಗೆ ತಂದೆ ಮನೇಗೆ ಒಳ್ಳೆ ಹೆಸ್ರು ಕೊಡವ್ವ"(ಶಂಬೂನಹಳ್ಳಿ ಕೃಷ್ಣೇಗೌಡ(ಸಂ), ಮಂಡ್ಯದ ಮಣ್ಣಿನ ಕಥೆಗಳು, ೨೦೦೬, ಪುಟ-೧೧೦). ಮುದ್ದಪ್ಪನ ಈ ಮಾತುಗಳು ಹೆಣ್ಣು ಹೆತ್ತವರ ಒಡಲಾಳವಾಗಿತ್ತು. ಕಷ್ಟ ಎಷ್ಟೆ ಬಂದರು ಮನೆತನ ಮರ್ಯಾದೆಗಾಗಿ ಸಹಿಸಿಕೊಳ್ಳುವಂತೆ ಪುರುಷ ಸಮಾಜವೇ ಪ್ರೇರಣೆ ನೀಡಿದಂತಿದೆ. ಗಂಡನನ್ನು ದಿಕ್ಕರಿಸಿ ಬಂದು ಸ್ವತಂತ್ರವಾಗಿ ಬದುಕುವ ಹಕ್ಕು ಅವಳಿಗಿಲ್ಲ ಎಂಬ ಚಿಂತನೆ ಇಲ್ಲದೆ. ಮಂಜುಳ ತನ್ನ ಗಂಡ, ಅತ್ತೆ ಹಿಂಸೆಗೆ ಬೇಸತ್ತು ಆತ್ಮಹತ್ಯೆಯ ಯೋಚನೆ ಪ್ರಯತ್ನ ಮಾಡಿದರೂ ಸಹ ತಂದೆ-ತಾಯಿಗೆ ಕೆಟ್ಟ ಹೆಸರು ತರಬಾರದೆಂಬ ನಂಬಿಕೆಯಿಂದ ಬೈಗುಳ ಹೊಡೆತಗಳಿಂದ ನರಳುತ್ತಾಳೆ.

ಬೆಟ್ಟಳ್ಳಿ ಪಟೇಲನ ಮಗಳು ಪಾರ್ವತಿ ಇತ್ತೀಚೆಗೆ ಮನೆಗೆ ಬರುವುದು ಹೆಚ್ಚಾಗಿತು. ಮನೆಯಲ್ಲಿ ಹೆಚ್ಚುಗಾರಿಕೆ ಮಾಡಿದಾಗ ಪಾರ್ವತಿಗೆ ಆಹ್ವಾನವಿರುತ್ತಿತ್ತು. ಮಂಜುಳಾ ಅತ್ತೆ ಬೋರಮ್ಮ ಪಾರ್ವತಿಯೊಡನೆ ಅನ್ಯೋನ್ಯವಾಗಿದ್ದಳು. ಗಂಡ ಕಾಳ ಕೂಡ ಅವಳೊಡನೆ ಸಂಬಂಧ ಬೆಳೆಸಿದ. ಇದೆಲ್ಲಾ ಗೊತ್ತಾಗಿ ಮಂಜುಳ ಕೇಳಿದರೆ, ಅದೆಲ್ಲಾ ನಿನಗೆ ಯಾಕೆ, ಮತ್ತೆ ಕೇಳಿದರೆ ಮನೆಯಿಂದ ಹೊರಹಾಕುವೆ ಎಂದು ಗದರುತ್ತಿದ್ದ. ಮಂಜುಳನಿಗೆ ಮಕ್ಕಳ್ಳಿಲ್ಲದ ಕಾರಣ ಗೊಡ್ಡು ಎಂಬ ಹಿಯಾಳಿಕೆ ಮಾತು ಅತ್ತೆಯಿಂದ ಬರುತ್ತಿತ್ತು. ಪಟೇಲನ ಮಗಳು ಪಾರ್ವತಿಯನ್ನು ಕಾಳಣ್ಣನಿಗೆ ಮದುವೆ ಮಾಡಲು ಅತ್ತೆ-ಗಂಡ ಸೇರಿ ಬಟ್ಟೆ ಹೊಗೆಯಲು ಹೋದ ಮಂಜುಳನನ್ನು ಕಾಲುವೆಗೆ ತಳ್ಳಿ ಕೊಂದರು. ಕೊನೆಗೆ ಅವಳೇ ಜಾರಿ ಬಿದ್ದಳೆಂದು ಕತೆ ಕಟ್ಟಿದರು. ಇದರಿಂದ ಅವರು ತಪಿತಸ್ಥರಾಗಲಿಲ್ಲ. ಯಾವ ಶಿಕ್ಷೆಯು ಇಲ್ಲ. ಮಂಜುಳ ಸ್ಥಿತಿ ಬದುಕಿರುವವರೆಗೂ ನರಕದ ಜೀವನ ಅನುಭವಿಸಿದಳು. ಈ ಸಂದರ್ಭವು ಗ್ರಾಮೀಣ ಪ್ರದೇಶದ ಹೆಣ್ಣು ಮಕ್ಕಳ ಮೇಲೆ ನಡೆಯುತ್ತಿರುವ ವರದಕ್ಷಿಣೆ ಕಿರುಕುಳವನ್ನು ಪ್ರತಿಬಿಂಬಿಸಿದೆ.

ಜಾಗತಿಕ ಸಂದರ್ಭದಲ್ಲಿ ಬದುಕುತ್ತಿರುವ ನಾವು ಪ್ರತಿನಿತ್ಯ ಹೆಣ್ಣಿನ ಶೋಷಣೆ ಇವತ್ತಿಗೂ ನಡೆಯುತ್ತಿರುವುದು ವಿಷಾದನೀಯ. ಶಿಕ್ಷಣ ಕಲಿತ ಹೆಣ್ಣು ಮಗಳು-ಕಲಿಯದ ಹೆಣ್ಣು ಮಗಳು ಯಾವ ಬೇಧವಿಲ್ಲದೆ ಅವಳ ಮೇಲೆ ದೌರ್ಜನ್ಯಗಳು ನಡೆಯುತ್ತಲೆ ಇವೆ.

ನಾಗತಿಹಳ್ಳಿ ಚಂದ್ರಶೇಖರ ಅವರ **'ಬನ್ನೇರಿ'** ಕಥೆಯಲ್ಲಿ ತೀರ ವಾಸ್ತವಿಕ ವಿವರಗಳೊಂದಿಗೆ ಕಥೆ ನಿರೂಪಿತವಾಗಿದೆ. ಗಂಡ ಸಿದ್ರಾಮ, ಹೆಂಡತಿ ಬನ್ನೇರಿ ಮತ್ತು ಆಳಾಗಿ ಬಂದ ರಂಗಣ್ಣನ ಪಾತ್ರಗಳು ಸ್ಪುಟವಾಗಿ ನಿಂತಿವೆ. ರಂಗಣ್ಣ ಬೆಳಗಾಗಿ ಹೊತ್ತಾದರು ಏಳದ ಸೋಮಾರಿ. ಗಂಡನ ಗುಣ ಗೊತ್ತಿದ್ದ ಬನ್ನೇರಿ ತನ್ನ ನೂರಾರು ಕೆಲಸದಲ್ಲಿ ಮುಳಗುವಳು. ಎರಡು ಸಾರಿ ಕುತ್ತಿಗೆ ಉಳುಕೋ ಹಾಗೆ ಕಸ ಹೊತ್ತುಕೊಂಡು ಹೋಗಿ ಬರೋದು, ಸೊಪ್ಪು ತಂದು ಕೊಟ್ಗೆಗೆ ಹಾಕುವುದು, ದನ ಕರಾ ನೋಡುವುದು. ಸೀಗೆಕಾಯಿ, ಹೊಂಗೆಕಾಯಿ ಆಯ್ದು ಒಣಗಿಸುವುದು, ಮೊಮೊಮೊ ಗಿಡಕ್ಕೆ ನೀರು ಹಾಕುವುದು, ಬೆಳೆದ ಸೊಪ್ಪು, ತರಕಾರಿಯನ್ನು ಸಂತೆಗೆ ಮಾರಲು ಹೋಗುವುದು ಹೀಗೆ ಬಿಡುವಿಲ್ಲದ ಕೆಲಸ ಬನ್ನೇರಿಗೆ.

ಸಿದ್ರಾಮನಿಗೆ ತಿಥಿ, ಮದುವೆ, ಸೋಬ್ನ, ನಾಟಕ, ರಾಜಕೀಯ ಅಂಥ ಅಲೆಮಾರಿ ಜೀವನ ಬನ್ನೇರಿಗೆ ಒಬ್ಬಳೆ ದುಡಿದು ಸಾಕಾಗಿದೆ. ಒಬ್ಬ ಆಳು ಮಗನ್ನ

ಹುಡುಕುತ್ತಿದ್ದಳು. ಸಂತೆಯಲ್ಲಿ ತಲೆ ಸುತ್ತು ಬಿದ್ದಿದ ರಂಗಣ್ಣನಿಗೆ ಹಾರೈಕೆ ಮಾಡಿ ಯಾರು ಇಲ್ಲದ ಪರದೇಸಿಯೆಂದು ಗೊತ್ತಾಗಿ ಆಳು ಮಗನ್ನಾಗಿ ಇರುವಂತೆ ಬನ್ನೇರಿ ಕರೆ ತರುತ್ತಾಳೆ. ರಂಗಣ್ಣ ಮನೆಯ ಮಗನಾಗಿ ಪ್ರಮಾಣಿಕತೆಯಿಂದ ದುಡಿದು ಬನ್ನೇರಿಗೆ ನಿಯತ್ತಾಗಿ ಇರುತ್ತಾನೆ. ಬನ್ನೇರಿಯ ಕಷ್ಟಗಳೆಲ್ಲಾ ರಂಗಣ್ಣ ಬಂದಾಗಿನಿಂದ ಒಂದೊಂದಾಗಿ ಕಳೆದಿರುತ್ತದೆ.

ಸಿದ್ರಾಮ ರಾಜಕೀಯ ಹುಚ್ಚಿನಿಂದ ಮನೆ-ಮಠ-ಆಸ್ತಿಗಳನ್ನು ಕಳೆಯುತ್ತಾನೆ. ಬನ್ನೇರಿ ಇದರಿಂದ ಆಘಾತಗೊಂಡು ಗಂಡನೊಂದಿಗೆ ಮಾತು ಕಡಿಮೆ ಮಾಡಿರುತ್ತಾಳೆ. ರಂಗಣ್ಣನೊಂದಿಗೆ ಉಳಿದ ಸ್ವಲ್ಪ ಜಮೀನಿನಲ್ಲಿ ಬಾವಿ ತೋಡಲು ಬನ್ನೇರಿ ಪಣತೊಡುತ್ತಾಳೆ. ಆದರೆ ಅದು ಅರ್ಧಕ್ಕೆ ನಿಲ್ಲುತ್ತದೆ. ಸಿದ್ರಾಮ ಎಲ್ಲವನ್ನು ಕಳೆದವನಾದ್ದರಿಂದ ಊರಿನವರಿಂದ ಮತ್ತು ಹೆಂಡತಿಯಿಂದ ಬೆಲೆ ಕಳೆದುಕೊಳ್ಳುತ್ತಾನೆ. ಎಲ್ಲರೂ ತನ್ನ ಮೇಲೆ ಅಸಡ್ಡೆಯಾಗಿ ವರ್ತಿಸುತ್ತಿದ್ದಾರೆ ಎಂದುಕೊಳ್ಳುತ್ತಾನೆ. ತನ್ನ ಕೋಪವನ್ನು ರಂಗಣ್ಣನ ಮೇಲೆ ತೀರಿಸಿಕೊಳ್ಳುತ್ತಾನೆ. ರಂಗಣ್ಣನಿಗೆ ಮನೆಬಿಟ್ಟು ಹೋಗುವಂತೆ ಒತ್ತಾಯ ಮಾಡುತ್ತಾನೆ. ಮಧ್ಯರಾತ್ರಿ ರಂಗಣ್ಣ ಹೋಗುವಾಗ ಆಶ್ರಯ ನೀಡಿದ್ದ ಬನ್ನೇರಿ ಕಾಲುಗಳಿಗೆ ನಮಸ್ಕರಿಸಿ ಹೋಗುವುದು ಉದಾತ್ತವಾಗಿದೆ.

ಬನ್ನೇರಿ ಮದುವೆಯಾಗಿ ಗಂಡನಿಂದ ನೆಮ್ಮದಿಯ ಸುಖ ಕಂಡಿದ್ದು ಇಲ್ಲವೇ ಇಲ್ಲ. ಗಂಡಾಗಿ ದುಡಿದು ತನ್ನ ಸ್ವಾವಲಂಬನೆ ಜೀವನ ಮಾಡಿ ತೋರಿದ್ದಾಳೆ. ಹೆಣ್ಣು ಮಗಳು ಪರಾವಲಂಬಿ ಎನ್ನುವುದನ್ನು ಸುಳ್ಳು ಮಾಡಿ, ಸ್ವಾವಲಂಬಿ ಎನ್ನುವುದನ್ನು ತೋರಿಸಿಕೊಟ್ಟಿದ್ದಾಳೆ.

ಹಿಂದೆ ಅವಿಭಕ್ತ ಕುಟುಂಬಗಳಿದ್ದಾಗ ಸಾಮರಸ್ಯ ಹೊಂದಾಣಿಕೆಯ ಪಾಠ ಕುಟುಂಬದಿಂದಲೇ ಪ್ರಾರಂಭವಾಗುತ್ತಿತ್ತು. ಹಿರಿಯರು, ತಾಯಂದಿರು ಅದರ ಜವಾಬ್ದಾರಿ ತೆಗೆದುಕೊಳ್ಳುತ್ತಿದ್ದರು. ಇಂದು ವಿಭಕ್ತ ಕುಟುಂಬಗಳು ಅನುಭವೀ ಹಿರಿಯರ ಮಾರ್ಗದರ್ಶನವಿಲ್ಲದೆ ಹುಟ್ಟುವ, ಆಟವಾಡುವ ಮಕ್ಕಳೂ ಅನಾಥ ಪ್ರಜ್ಞೆ ಬೆಳೆಸಿಕೊಂಡು ಸಂಬಂಧ ಎನಿಸುವ ಯಾವ ಪ್ರತಿಸ್ಪಂದನವೂ ಇಲ್ಲದೆ ಬೆಳೆಯುತ್ತಿರುವುದು ಕುಟುಂಬಕ್ಕೆಷ್ಟೋ, ಸಮಾಜಕ್ಕೂ ಮತ್ತು ರಾಷ್ಟ್ರಕ್ಕೂ ಆತಂಕಕಾರಿ ಸಂಗತಿಯಾಗಿದೆ.

ಭಾರತದಲ್ಲಿ ಬ್ರಿಟಿಷ್ ಆಡಳಿತ ನಡೆಯುತ್ತಿದ್ದಾಗ ೧೯೩೭ರಲ್ಲಿ ಅಂಗೀಕರಿಸಲಾದ ಶೈಕ್ಷಣಿಕ ಲಾಭಗಳ ಕಾಯ್ದೆಯ ಪರಿಣಾಮವಾಗಿ ಅವಿಭಕ್ತ

ಕುಟುಂಬದ ಸಮುದಾಯದ ಬಾಳುವೆಯ ತಳಹದಿ ದುರ್ಬಲವಾಯಿತಲ್ಲದೆ ಸ್ವಯಂಸಂಪಾದನೆಯ ವ್ಯಾಪ್ತಿಯು ವಿಶಾಲಗೊಂಡಿತು. ವಾರಸುದಾರಿಕೆ ಮತ್ತು ಮಹಿಳೆಯರ ವಿವಾಹ ಹಕ್ಕುಗಳ ಸಂಬಂಧದ ಕಾನೂನು ಕ್ರಮಗಳು ಅವಿಭಕ್ತ ಕುಟುಂಬದ ಮೇಲೆ ಭಾರಿ ಪರಿಣಾಮ ಬೀರಿದವು. ಇದರ ಪರಿಣಾಮ ಎಷ್ಟಾಯಿತೆಂದರೆ ಸಾಮಾಜಿಕ ಅಡೆತಡೆಗಳು ಕೊಚ್ಚಿಕೊಂಡು ಹೋದವು. ಇದ್ದುದ್ದರಲ್ಲಿ ಸ್ವಂತ ಮಗನ ಸಂಬಂಧ ಭಾವನೆ ಕುಗ್ಗದೇ ಇದ್ದರೂ, ದಾಯಾದಿ ಹಾಗೂ ಇನ್ನಿತರ ಸಂಬಂಧಗಳ ಭಾವನೆ ಕುಗ್ಗಿತು. ಇತ್ತೀಚಿನ ಜಾಗತೀಕರಣ, ವ್ಯಾಪಾರೀಕರಣ, ಅಂತರ್ಜಾಲದ ಮಾಯಾಲೋಕದಲ್ಲಿ ಸಂಬಂಧಗಳ ಪ್ರಜ್ಞೆಗಳೇ ಕ್ಷೀಣಿಸತೊಡಗಿವೆ. ವಿವಾಹ ವಿಚ್ಛೇದನದಂತ ಕೌಟುಂಬಿಕ ಸಂಘರ್ಷಗಳೇ ಮೊದಲಾಗಿವೆ.

ಒಟ್ಟಾರೆ ಕೌಟುಂಬಿಕ ಸಂಘರ್ಷಗಳ ನೆಲೆಗಳಲ್ಲಿ ಮಂಡ್ಯ ಜಿಲ್ಲೆಯ ಲೇಖಕರ ಸಣ್ಣಕಥೆಗಳಲ್ಲಿ ಬರುವ ಪ್ರಾಸಂಗಿಕ ಸಂಘರ್ಷಗಳನ್ನು ಅವಲೋಕಿಸಿದಾಗ ಹೆಚ್ಚೂ ಕಮ್ಮಿ ಎಲ್ಲಾ ಲೇಖಕರ ವಸ್ತು, ಭಾಷೆ, ಸಂಘರ್ಷಗಳ ನಿರೂಪಣೆಯಲ್ಲಿ ಅಂಥ ವ್ಯತ್ಯಾಸಗಳು ಕಾಣಬರುವುದಿಲ್ಲ. ಇದು ಹೇಳಿ ಕೇಳಿ ಮಂಡ್ಯ ಮಣ್ಣಿನ ಪ್ರಾದೇಶಿಕ ಕಥಗಾರರ ಅನುಭವದ ಮೂಸೆಯಲ್ಲಿ ರಚನೆಗೊಂಡವು. ಎಲ್ಲಾ ಹಳ್ಳಿಗಾಡಿನ ಚಿತ್ರಣಗಳಿಂದ ಮೈದಾಳಿವೆ. ಪಾತ್ರಗಳೂ ಅಂತೆಯೇ ಬಡವ-ಬಲ್ಲಿದ, ಪಟೇಲ, ಶಾನುಭೋಗ, ಶೋಷಣೆ-ದಬ್ಬಾಳಿಕೆ, ಮಹಿಳೆಯ ಪ್ರಜ್ಞೆ-ಅನಾಥ ಪ್ರಜ್ಞೆ ಮುಂತಾದವು ಬಂದಿವೆ. ಇಂದಿನ ಆಧುನಿಕ ಜಾಗತೀಕರಣದ ವ್ಯವಸ್ಥೆಯಲ್ಲಿ ಇರಬಹುದಾದ ಕೌಟುಂಬಿಕ ಸಂಘರ್ಷದ ಹಿನ್ನೆಲೆಯ ಬದುಕಿಗೆ ಭಿನ್ನವಾದ ಸಂಘರ್ಷಗಳು ಹೆಚ್ಚು ದಟ್ಟವಾಗಿ ಚಿತ್ರಿತವಾಗಿದೆ. ಹಿಂದೆಯೇ ಸೂಚಿಸಿರುವಂತೆ ಮಂಡ್ಯ ಜಿಲ್ಲೆಯ ಬಹುತೇಕ ಕಥೆಗಾರರ ಕಥಾ ವಸ್ತು ಸ್ವಾತಂತ್ರ್ಯ ಭಾರತದ ಹಿಂದಣ-ಮುಂದಣಗಳಲ್ಲಿ ಕಂಡು-ಕೇಳಿದ ಕಥೆಗಳಾಗಿವೆ.

ಹಿರಿಯ ಲೇಖಕರಾದ ಎಚ್.ಎಲ್. ನಾಗೇಗೌಡರ 'ತಪ್ಪು ಯಾರದು?' 'ಏಡಿ ಕಚ್ಚಿದ ಕೈ', ಜೀ.ಶಂ. ಪರಮಶಿವಯ್ಯನವರ 'ಶನಿಯಕೋಪ' 'ಗಾಜು ಒಡೆಯಿತು' 'ಬುಡ ಕಡಿದ ಮೇಲೆ' 'ಮಮತೆಯ ಜೀವ', ಡಿ. ಲಿಂಗಯ್ಯನವರು 'ಕುಲದೀಪಕ' 'ಕೆಂಪುಹರಳಿನ ಓಲೆ' 'ಸಂಶಯ ಪಿಶಾಚಿ' 'ಕತ್ತಲು-ಬೆಳಕು' 'ಬಂಧನ', ಬೆಸಗರಹಳ್ಳಿ ರಾಮಣ್ಣನವರ 'ಸುಗ್ಗಿ' 'ಸೋಲು' 'ಮಹಾನವಮಿ' 'ಅವ್ವ' 'ಬೇಲ' 'ತಾಯಿ' 'ಮಗಳು' 'ಅಪ್ಪ', ಎಂ. ರಾಮಕೃಷ್ಣ ಅವರ 'ತೇರು ಬಂತು ತವರಿಗೆ'

‘ಕಾಮನಬಿಲ್ಲು’ ‘ಹಿಮಮಣಿ’, ಬೋರೇಗೌಡ ಚಿಕ್ಕಮರಳಿ ಅವರ ‘ಗೋಡೆಗಳ ನಡುವೆ’ ‘ಭೂತದ ಕುಣಿತ’ ‘ಕೆಂಪಾಚಾರಿಯ ಕುಲುಮೆ’ ‘ಏಕಾಂಗಿ’ ‘ಪಲಾಯನ’ ‘ಗಂಡೈದ ಹೆಂಡತಿ ತಲೆ ಮೇಲೆ ಕಾಫಿ ಸುರಿದಿದ್ದು’, ಶಿವಳ್ಳಿ ಕೆಂಪೇಗೌಡರ ‘ಕ್ರೌರ್ಯ’, ನಾಗತಿಹಳ್ಳಿ ಚಂದ್ರಶೇಖರ ಅವರ ‘ಬನ್ನೇರಿ’ ಕಥೆಗಳಲ್ಲಿ ಕೌಟುಂಬಿಕ ಸಂಘರ್ಷದ ನೆಲೆಗಳನ್ನು ಹೆಚ್ಚು ಕಾಣಬಹುದು. ಈ ಎಲ್ಲ ಕಥೆಗಾರರು ವಾಸ್ತವಿಕ ನೆಲೆಗಟ್ಟಿನಲ್ಲಿ ಕುಟುಂಬದ ಮತ್ತು ಕುಟುಂಬದಲ್ಲಿನ ಸದಸ್ಯರ ನಡುವಿನ ಬಾಂಧವ್ಯ ಮತ್ತು ಸಂಘರ್ಷಗಳು ಪರಿಣಾಮಕಾರಿಯಾಗಿರುವುದನ್ನು ಈ ಅಧ್ಯಯದಲ್ಲಿ ಕಂಡುಕೊಳ್ಳಲಾಗಿದೆ.

## ಸಾಂಪ್ರದಾಯಿಕ ನೆಲೆಗಳು

ಮಾನವ ಸಮುದಾಯ ಏನನ್ನು ಅನಂತ ಕಾಲದಿಂದ ಅನುಭವಿಸಿತೋ, ಕಲಿಯಿತೋ ಮತ್ತು ಆಚರಣೆಗೆ ತಂದು ಜನಪ್ರಿಯ ಹಾಗೂ ಸಾಂಪ್ರದಾಯಿಕ ಜ್ಞಾನವನ್ನಾಗಿ ಮಾಡಿತೋ ಅದು ವೈಜ್ಞಾನಿಕ ಜ್ಞಾನಕ್ಕಿಂತ ಭಿನ್ನವಾದುದು ಎಂಬ ಅಭಿಪ್ರಾಯವನ್ನು ವಿದ್ವಾಂಸರು ವ್ಯಕ್ತಪಡಿಸುತ್ತಾರೆ. ಇದು ಮಾನವನ ಮೂಲಭೂತ ಅನಿಸಿಕೆಗಳನ್ನು ಹೆಚ್ಚು ಹೆಚ್ಚಾಗಿ ಹೆಕ್ಕುವುದಕ್ಕೆ ಅವಕಾಶವಿರುತ್ತದೆ. ಮನುಷ್ಯನ ಹುಟ್ಟು, ಬಾಲ್ಯ, ಯೌವನ, ಮದುವೆ, ದುಡಿತ, ವೃದ್ಧಾಪ್ಯ, ಕಷ್ಟ-ಸುಖ, ಸಾವು ಇವುಗಳಲ್ಲೆಲ್ಲ ವ್ಯಕ್ತಿಯೊಬ್ಬನ ವೈಯಕ್ತಿಕ ಅನುಭವಗಳಾಗಿದ್ದು ಅವು ಅವನ ಹತ್ತಿರದ ಸಮಾಜದೊಂದಿಗೆ ತಮ್ಮ ನಿಕಟ ಸಂಬಂಧವನ್ನು ಹೊಂದಿರುತ್ತದೆ. ಹೀಗೆ ಸಮಾಜದ ಸಂಪ್ರದಾಯಗಳು ಪ್ರಾಚೀನ ಕಾಲದಿಂದಲೂ ಜನಜೀವನದ ಸತ್ವವನ್ನು ಒಳಗೊಂಡು ರೂಪಿತವಾಗಿರುತ್ತವೆ. ಜೊತೆಗೆ ತಮ್ಮದೇ ಆದ ಪ್ರಾದೇಶಿಕತೆಯ ಸೊಗಡನ್ನು ಸಹ ಪ್ರತಿನಿಧಿಸುತ್ತವೆ. ಮಾನವ ಸಂಸ್ಕೃತಿಯ ಆರಂಭದಿಂದಲೂ ಆತನ ಬದುಕಿನೊಂದಿಗೆ ಮಿಳಿತವಾಗಿ ಬೆಳೆಯುತ್ತಾ ಹೊಸಹೊಸ ಆಯಾಮವನ್ನು ಪಡೆದುಕೊಳ್ಳುತ್ತವೆ. ಇದೊಂದು ನಿರಂತರತೆಯ ಶಕ್ತಿಯನ್ನು ಹೊಂದಿದೆ. ಇದನ್ನು 'ಜನಪ್ರಿಯಜ್ಞಾನ' ಎಂದೂ ಸಹ ಹೆಸರಿಸುತ್ತಾರೆ.

ಬಯಲು ಪ್ರದೇಶದ ಸಂಪ್ರದಾಯಗಳನ್ನು ಒಳಗೊಂಡ ಸಮಾಜದ ಪರಿಚಯ ಮಂಡ್ಯ ಜಿಲ್ಲೆಯ ಕಥೆಗಾರರ ಕಥಾಸಾಹಿತ್ಯದಲ್ಲಿ ಬಹು ಅಚ್ಚುಕಟ್ಟಾಗಿ ವ್ಯಕ್ತವಾಗಿದೆ. ಜಿಲ್ಲೆಯಲ್ಲಿ ಪ್ರಮುಖವಾಗಿ ಹಾದುಹೋಗುವ ಕಾವೇರಿ ಮತ್ತು ಶಿಂಷಾ ತೀರದಲ್ಲಿ ವಿಶಿಷ್ಟ ಸಂಪ್ರದಾಯಗಳನ್ನು ಗುರುತಿಸಬಹುದು. ಜಿಲ್ಲೆಯ ಗಡಿ ಅಂಚಿನಲ್ಲಿ ಸಾಗಿಬರುವ ಹೇಮಾವತಿ ನದಿ ತೀರದ ಸಂಪ್ರದಾಯಗಳೂ ಸಹ ಗಮನಾರ್ಹವಾಗಿವೆ. ಇಲ್ಲಿನ ನಡವಳಿಕೆಗಳು ಹಾಗೂ ಸಂಪ್ರದಾಯಗಳು ಹಾಸನ ಜಿಲ್ಲೆಯ ಹೊಳೆನರಸೀಪುರ ಮತ್ತು ಚನ್ನರಾಯಪಟ್ಟಣ ಭಾಗದ ನಡವಳಿಕೆಗಳು ಹೊಂದಿಕೊಳ್ಳುತ್ತವೆ. ನುಡಿಯುವ ಸರಳ ಕನ್ನಡ ಭಾಷೆಯಲ್ಲಿ, ಆಚರಿಸುವ ಹಬ್ಬ ಹರಿದಿನಗಳಲ್ಲಿ, ಅಡುಗೆ, ಉಡುಗೆ, ತೊಡುಗೆಗಳಲ್ಲಿ ಭಾಷಾ ಉಚ್ಚಾರಣೆಯಲ್ಲಿ ವೈವಿಧ್ಯತೆಯನ್ನು ಕಾಣಬಹುದು. ಇನ್ನು ಜಿಲ್ಲೆಯಲ್ಲಿ ಕೇಳಿಬರುವ ಕಥೆ, ಗೀತೆ, ಒಗಟು, ಗಾದೆ, ಐತಿಹ್ಯ, ಪುರಾಣ, ನಂಬಿಕೆ, ಮಂತ್ರ ವಿದ್ಯೆ, ಕುಶಲಗಾರಿಕೆ,

ಸ್ಥಳನಾಮಗಳು, ಗ್ರಾಮದೇವತೆಗಳ ಪರಂಪರೆ, ಸಂಸ್ಕೃತಿ, ಸಂಪ್ರದಾಯಗಳು, ಆಚರಣೆಗಳು ಅಧ್ಯಯನಕ್ಕೆ ಆಕರವಾಗಿವೆ. ಒಟ್ಟಾರೆ ಹೇಳುವುದಾದರೆ ತಲೆಮಾರಿನಿಂದ ತಲೆಮಾರಿಗೆ ಸಾಂಪ್ರದಾಯಕವಾಗಿ ಉಳಿದು ಬಂದು ಅಥವಾ ಹುದುಗಿರುವ ಜೀವ ಸತ್ವಗಳು ಮಾನವ ಶಾಸ್ತ್ರವಾಗುತ್ತದೆ. ದ್ರಾವಿಡ ಸೀಮೆಯಲ್ಲಿ ಅತ್ಯಂತ ಪ್ರಾಚೀನ ಶಿಲ್ಪಗಳೆಂದು ಪರಿಗಣಿಸಬಹುದಾದ ಕಲ್ಲು, ಮಣ್ಣು, ಮರಗಳಲ್ಲಿ ಕಡೆದ ಮಾರಮ್ಮ, ಚಿಕ್ಕಮ್ಮ, ದೊಡ್ಡಮ್ಮ, ಬಿಸಿಲು ಮಾರಮ್ಮ, ಕಾಳಮ್ಮ, ದಂಡಿನಮ್ಮ ಮುಂತಾದ ಗ್ರಾಮ ಅಥವಾ ಮನೆ ದೇವತೆಗಳು ಗ್ರಾಮೀಣರ ಅತ್ಯಂತ ಪ್ರಾಚೀನ ಸಂಪ್ರದಾಯ ಮತ್ತು ನಂಬಿಕೆಗಳನ್ನು ಸೂಚಿಸುತ್ತವೆ. ಗಿಡಮೂಲಿಕೆಯ ಪಾರಂಪರಿಕ ಔಷಧಿ ವಿಚಾರಗಳೂ ಒಳಗೊಂಡಿವೆ. ಊರಿಗೆ ಬರುವ ನೆಂಟರನ್ನು ಬರಮಾಡಿಕೊಳ್ಳುವ ಹಾಗೂ ಆತ್ಮೀಯವಾಗಿ ಕಳುಹಿಸಿಕೊಡುತ್ತಿದ್ದ ಊರಾಚೆ ಇರುತ್ತಿದ್ದ 'ನೆಂಟ್ರ ಆಲದಮರ' ಸಂಪ್ರದಾಯ ಈಗ ನೆನಪಷ್ಟೆ ಉಳಿದಿದೆ. ಇಂಥ ಸಂಪ್ರದಾಯಗಳು ಇವತ್ತಿನ ನಗರೀಕರಣದಲ್ಲಿ, ಜಾಗತೀಕರಣದಲ್ಲಿ ಮಾಯವಾಗುತ್ತಿವೆ. ಸತ್ತವರ ತಿಥಿಯಲ್ಲಿ ಇರುತ್ತಿದ್ದ ಹರಿಕಥೆ, ಭಜನೆ, ಪುರಾಣ ಶ್ರವಣಗಳ ಜಾಗದಲ್ಲಿ ಸಿನಿಮಾ, ವೀಡಿಯೋ ಅಂಥ ಆಧುನಿಕ ಮಾಧ್ಯಮಗಳು ನುಸುಳಿಕೊಂಡಿವೆ. ಕಣದ ಪೂಜೆ, ಫಸಲು ಪೂಜೆ ನಡೆಯುತ್ತಿದ್ದ ಇತ್ಯಾದಿ ಪವಿತ್ರ ಸ್ಥಳಗಳು ಬೀದಿಯಲ್ಲಿ ನಡೆಯುವಂತಾಗಿದೆ.

ಜಿಲ್ಲೆಯ ಕಥೆಗಾರರ ಸಾಹಿತ್ಯದಲ್ಲಿಯೂ ಕಾಣಬರುವ ಗ್ರಾಮೀಣ ಬದುಕಿನ ನಿತ್ಯ ಜೀವನದ ಹಲವು ಬಳಕೆ ವಸ್ತುಗಳಾದ ಗಡಿಗೆ, ಕುಡಿಕೆ, ಕೊಡ, ಒನಕೆ, ಒರಳು, ಅಡ್ಡಣಿಗೆ, ಕೊಣವಿಗೆ, ಲಟ್ಟಣಿಗೆ, ಸಟ್ಟುಗ, ನೆಲವು(ಬೆಣ್ಣೆ, ಮೊಸರು, ಹಾಲನ್ನು ಜೋಪಾನವಾಗಿ ಇರಿಸುವ ಸಾಧನ) ಅರೆಯುವ ಕಲ್ಲಿನ ಸಾಧನಗಳ ಸ್ಥಾನದಲ್ಲಿ ಆಧುನಿಕ ತಂತ್ರಜ್ಞಾನದ ಯಂತ್ರಗಳು, ಪ್ಲಾಸ್ಟಿಕ್, ಸ್ಟೀಲ್ ಇತ್ಯಾದಿ ಬಳಕೆಯ ವಸ್ತುಗಳು ಆಕ್ರಮಿಸಿಕೊಂಡಿವೆ. ಹಟ್ಟಿ ಎಂಬ ಮನೆಯಲ್ಲಿ ಒಟ್ಟಿಗೆ ವಾಸಿಸುತ್ತಿದ್ದ ಜನ-ಜಾನುವಾರುಗಳ ಸಂಪ್ರದಾಯದಲ್ಲಿ ಬದಲಾವಣೆಗಳು ಕಂಡು ಬಂದಿವೆ. ಜಾನುವಾರುಗಳ ಜಾಗದಲ್ಲಿ ಕೃಷಿಯಂತ್ರಗಳು ಸ್ಥಾಪಿತವಾಗಿವೆ. ಕುಳಿತು ಉಣ್ಣುತ್ತಿದ್ದ 'ತೌಟಿಗೆ' ಜಾಗದಲ್ಲಿ ಟೇಬಲ್‌ಗಳು ಬಂದಿವೆ. ಹಬ್ಬಹರಿದಿನಗಳಲ್ಲಿ ಸಿನಿಮಾ ಹಾಡು, ಸಂಭಾಷಣೆಯ ಮುದ್ರಿಕೆಗಳು ಕಿವಿಗಷ್ಟೇ ಅಲ್ಲ ಊರಿಗೇ ಅಪ್ಪಳಿಸಿದರೂ ಒಂದು ಸಮಾಧಾನವೆಂದರೆ ಹಬ್ಬದ ಆಚರಣೆಯಲ್ಲಿ ಮೂಲಸಂಪ್ರದಾಯಗಳು ಆದಷ್ಟು ಉಳಿದುಕೊಂಡಿವೆ. ಇದ್ದುದ್ದರಲ್ಲಿ ಮಳೆ, ಬೆಳೆ,

ಹಬ್ಬಗಳ ನಿಟ್ಟಿನಲ್ಲಿ ಗ್ರಾಮೀಣರ ನಂಬುಗೆ ಹಾಗೆಯೇ ಉಳಿದುಬಂದಿದೆ. ಭಕ್ತಿ ಪ್ರಸಾರದ ಭಾಗವಂತಿಕೆ, ತತ್ವ ಪದಗಳು, ಶನಿಕಥೆ ಇನ್ನು ಹರಿದಾಡುತ್ತಿವೆ. ಗ್ರಾಮೀಣ ಹಬ್ಬದ ಹಿನ್ನೆಲೆಯಲ್ಲಿ ಬಳಕೆಯಲ್ಲಿರುವ ಕೊಂಬು, ಕಹಳೆ, ತಮಟೆ, ನಗಾರಿ, ಚಕ್ರಾದಿ ಬಳೆಗಳ ಸಂಪ್ರದಾಯ ಸದ್ದುಗಳು ಇನ್ನು ಮೊಳಗುತ್ತಿವೆ. ನಂದೀಧ್ವಜ, ರಂಗದ ಕುಣಿತ, ಸೋಮನ ಕುಣಿತ, ಪೂಜಾಕುಣಿತ, ವೀರಮಕ್ಕಳ ಕುಣಿತ, ಕರಗದ ಕುಣಿತ, ಗಾರುಡಿಮೇಳ, ಕಂಸಾಳೆ, ಕೋಲಾಟ ಮುಂತಾದ ಜನಪದ ಕಲಾ ಸಂಪ್ರದಾಯಗಳು ಉಳಿದುಕೊಂಡಿವೆ. ಹಬ್ಬಗಳಲ್ಲಿ ಮುಖ್ಯವಾಗಿ ಕೊಂಡಬಂಡಿ, ಸಿಡಿ, ಮಡೆ, ನಡೆಮುಡಿ, ಕಳಸ, ಕರಗ, ದೂಪಣಿಗೆ, ಬಾಯಿಬೀಗ, ಪಂಜಿನ ಸೇವೆ, ದೇವರ ಮೆರೆತ ಇತ್ಯಾದಿ ಸಂಪ್ರದಾಯಗಳು ಜರುಗುತ್ತಿವೆ, ಇವುಗಳಲ್ಲಿ ಇಡೀ ವಿಶ್ವಕ್ಷೇಮದ ಬಯಕೆ ತುಂಬಿದೆ.

ಮದುವೆ ಸಂಪ್ರದಾಯದಲ್ಲಿ ಹಿಂದೆಯಿದ್ದ ವಧು ಪರೀಕ್ಷೆ, ಅರಿಸಿನ, ಬಾಳೆ ಎಲೆ ಶಾಸ್ತ್ರ, ವೀಳ್ಯೆಶಾಸ್ತ್ರ, ಲಗ್ನ ಕಟ್ಟುವಿಕೆ, ನೀರು ಹಾಕುವ ಶಾಸ್ತ್ರ, ಗಂಡು ಕರೆಯುವ ಶಾಸ್ತ್ರ, ಮುಹೂರ್ತ ಕಂಬ ತರುವುದು, ಬಳೆ ಶಾಸ್ತ್ರ, ಪಟ್ಟ ಬಾಸಿಂಗ ಕಟ್ಟುವ ಶಾಸ್ತ್ರ, ಧಾರೆ, ಸೂರ್ಯನಮಸ್ಕಾರ, ಫಲಧಾನ್ಯ ತಿದ್ದಿಸುವ ಶಾಸ್ತ್ರ, ಭುವ್ವ ಇಕ್ಕಿಸುವುದು, ದೇವರು ಬಿಡುವುದು, ಮುಹೂರ್ತ ಕಂಬ ಬಿಚ್ಚುವುದು, ಸೋಗಲು ಹುಯ್ಯುವುದು ಇತ್ಯಾದಿ ಹಲವು ಶಾಸ್ತ್ರಗಳು ಮುಂದುವರಿದಿದ್ದರೂ ಸಾಮಾನ್ಯ ಬಡತನ ರೇಖೆಗಿಂತ ಮೇಲಿನವರೆಲ್ಲ ತಮ್ಮ ಹಳ್ಳಿ ಮನೆಗಳಲ್ಲಿ ಆಚರಿಸಿವುದನ್ನು ಬಿಟ್ಟು ಪಟ್ಟಣದ ಛತ್ರಗಳಿಗೆ ಶಿಫ್ಟ್ ಆಗಿದ್ದಾರೆ. ಬೀಗರ ಜರೆಯುವ ಪದಗಳು, ಸೋಬಾನೆ ಪದಗಳು ಸೋಬಾನೆಯವರ ಕಂಠದಲ್ಲಿ ಹಾಗೇ ಗುಪ್ತವಾಗಿ ಉಳಿದು ಹೋಗುತ್ತಿವೆ. ಇದ್ದುದ್ದರಲ್ಲಿ ಬೀಗರೂಟ ಭರ್ಜರಿಯಾಗಿ ನಡೆಯುತ್ತಿದೆ ದುಬಾರಿ ಖರ್ಚಿನಲ್ಲಿ ಹಿಂದೆಯಿದ್ದ ಮೂರು ದಿನಗಳ ಮದುವೆ ಸದ್ಯಕ್ಕೆ ಒಪ್ಪೊತ್ತಿಗೆ ಮುಗಿಸಿದರೆ ಸಾಕು ಎನ್ನುವ ಮಟ್ಟಿಗೆ ಆಗಿದೆ. ಸ್ಥಳೀಯ ಸವಲತ್ತು ದುರ್ಬಲವಾಗಿದೆ. ಹಿಂದಿದ್ದ ಕೀರೆಸೊಪ್ಪು, ಅವರೆಕಾಳು ಕೂಟು, ಮುದ್ದೆ ಊಟ ಹಾಕಿಸುವುದು ಇಷ್ಟವಿದ್ದರೂ ಮರ್ಯಾದೆಗೆ ಕುಂದು ಎನ್ನುವ ಭಾವನೆ ತಲೆದೋರಿದೆ. ಇಂಥ ಪೌಷ್ಠಿಕ ಆಹಾರವನ್ನು ಬಿಟ್ಟು ಕಲಬೆರಕೆ ಎಣ್ಣೆಯ ಬಾತುಗೀತು, ಜಾಂಗೀರು ಎನ್ನುವ ಬಾರಿ ಔತಣಗಳು ನಡೆಯುತ್ತಿವೆ. ಇನ್ನು ಆಶ್ಚರ್ಯವೆಂದರೆ ತಿಥಿ ಕಾರ್ಯದಲ್ಲಿ ಬಡಿಸುವ ಔತಣವೂ ಮದುವೆ ಊಟಕ್ಕೆ ಕಡಿಮೆಯಿಲ್ಲ ಎನ್ನುವ ಮಟ್ಟಿಗೆ ಹೋಗಿದೆ. ಆದರೆ ಒಂದು ಗಮನಾರ್ಹ ಸಂಗತಿಯೆಂದರೆ ತಿಥಿ ಸಂಪ್ರದಾಯದಲ್ಲಿ ಉತ್ತರಕ್ರಿಯೆ

ನಡೆಯುವ ಗುದ್ದದ ಮೇಲೆ ಮನುಷ್ಯ ರೇಖಾ ಚಿತ್ರ ಗೀಚುವ ಹಾಗೂ ತಿಂಡಿ ತಿನಿಸುಗಳಲ್ಲಿ ಕಜ್ಜಾಯ, ವಡೆ, ಚಿಕ್ಕಿನುಂಡೆ, ಚಕ್ಕುಲಿ, ಕೋಡುಬಳೆ ಇತ್ಯಾದಿ ತಿನಿಸುಗಳು ಹಕ್ಕಿ ಪಕ್ಷಿ ಪ್ರಾಣಿಗಳಿಗೆ ವಿನಿಯೋಗವಾಗುತ್ತಿವೆ. ಇದು ಪ್ರಕೃತಿಯೊಂದಿಗೆ ಪ್ರಾಚೀನದಿಂದಲೂ ನಮ್ಮ ಜನ ಇಟ್ಟುಕೊಂಡಿದ್ದ ಒಡನಾಟವನ್ನು ಸೂಚಿಸುತ್ತದೆ. ಇದರೊಂದಿಗೆ ತಿಂಗಳ ಬೆಳಕಲ್ಲಿ ಹಾಡುತ್ತಿದ್ದ ತಿಂಗಳ ಮಾಮನ ಹಾಡು, ಗಾದೆ, ಒಗಟು, ಒಯ್ಯಾರಗಳು ಎಲ್ಲಿ ಹೋದವೋ ಎಂಬುದಕ್ಕೆ ನಾವು ನಿರುತ್ತರರಾಗಿದ್ದೇವೆ.

**ರಾಗಿಯ ಸಂಸ್ಕೃತಿ:** ಮಂಡ್ಯ ಜಿಲ್ಲೆಯ ಸಂಪ್ರದಾಯ ಬೆಳೆಗಳಲ್ಲಿ 'ರಾಗಿ'ಯ ಬೆಳೆ ವ್ಯಾಪಕವಾಗಿದೆ. ಅಲ್ಲಲ್ಲಿ ಬತ್ತ, ಕಬ್ಬು, ತರಕಾರಿ, ಹೂವು, ಇಪ್ಪುನೇರಳೆ ಇತ್ಯಾದಿ ಬೆಳೆಗಳು ಕಂಡುಬಂದರೂ ರಾಗಿಯ ಬೆಳೆಯನ್ನು ಎಲ್ಲಾ ಕಡೆಯೂ ನೋಡಬಹುದಾಗಿದೆ. ಇಲ್ಲಿಯ ಜನರಲ್ಲಿ ರಾಗಿಯ ಹಿಟ್ಟು ಅಥವಾ ಮುದ್ದೆ ಇಲ್ಲದ ಊಟ ಊಟವೇ ಅಲ್ಲ ಎಂಬಷ್ಟು ಜನಪ್ರಿಯವಾಗಿದೆ. ರೊಟ್ಟಿ, ಹುಚ್ಚೆಳ್ಳು ಚಟ್ನಿ ಎಂದರೆ ಎಂಥವರ ಬಾಯಲ್ಲೂ ನೀರೂರುತ್ತದೆ. ಇವರ ದುಡಿಮೆಗೆ ಮುದ್ದೆ ಮತ್ತು ರೊಟ್ಟಿ ಇಂದಿಗೂ ಬಹು ಸಹಕಾರಿಯಾಗಿದೆ. ಹೀಗಾಗಿ ಮಂಡ್ಯ ಜಿಲ್ಲೆಯ ಸಂಸ್ಕೃತಿ ಮತ್ತು ಸಂಪ್ರದಾಯ ರಾಗಿಯ 'ಬನಿ'ಯಲ್ಲಿದೆ ಎಂದರೆ ಉತ್ಪ್ರೇಕ್ಷೆಯಾಗುವುದಿಲ್ಲ.

ಇಷ್ಟೆಲ್ಲ ಸಂಪ್ರದಾಯಗಳು ಜಿಲ್ಲೆಯ ಕಥಾ ಸಾಹಿತ್ಯದಲ್ಲಿ ಅವಲೋಕಿಸುವುದರ ಜೊತೆಗೆ ಹಿಂದೆ ಹಳ್ಳಿಗಳ ಪಂಚಾಯ್ತಿ ಕಟ್ಟೆ ಇಲ್ಲವೇ ಮಾರಿಗುಡಿ ಜಗುಲಿಯಲ್ಲಿ ತೀರ್ಮಾನವಾಗುವಂತಿದ್ದ ವ್ಯಾಜ್ಯಗಳಲ್ಲಿ ಇಂದು ಬಹುಪಾಲು ವ್ಯಾಜ್ಯಗಳು ಪಟ್ಟಣದ ಕೋರ್ಟು, ಕಚೇರಿಗಳಿಗೆ ಹೋಗುವಂತಾಗಿದೆ. ಹಿಂದೆ ಹಳ್ಳಿಯ ಮಾರಿ ಗುಡಿಜಗುಲಿಯೂ ಅತಿಮುಖ್ಯ ಸಂಪ್ರದಾಯಕ್ಕೆ ಸೇರುತ್ತಿತ್ತು. ಹಿಂದಿನ ಅಮಲ್ದಾರ, ಪಟೇಲ, ಶ್ಯಾನುಬೋಗರ ಆಡಳಿತದ ಜಾಗವೂ ಆಗಿತ್ತು. ಕೃಷಿಕರ ಭೂಸಂಬಂಧಿಸಿದ ಕೆಲಸಗಳು ಸ್ಥಳದಲ್ಲೇ ನಡೆದು ಹೋಗುತ್ತಿದ್ದವು. ಇಂದಿನಂತೆ ತಾಲ್ಲೂಕು, ಜಿಲ್ಲಾ ಕಛೇರಿಗಳಿಗೆ ಅಲೆಯುವಂತಿರಲಿಲ್ಲ. ಒಟ್ಟಾರೆ ಹಿಂದಿನ ಸಂಪ್ರದಾಯಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಅದರಲ್ಲಿ ವೈಜ್ಞಾನಿಕ ಸತ್ಯದೊಂದಿಗೆ ಹಿಂದಿನ ತಲೆಮಾರಿನ ಸರಳ ಹಾಗೂ ಸ್ವಚ್ಛ ಬದುಕಿನ ಹಾದಿಯಲ್ಲಿ ಇಂದಿನವರು ಎಡವಿ ಬಿದ್ದಂತಾಗಿದೆ. ಊರಿನ ಹಬ್ಬ ಬಂತೆಂದರೆ ಮಲಗುವ ತಲೆದಿಂಬಿನಿಂದ ಹಿಡಿದು ಮಾಡಿನ ಹೆಂಚುಗಳನ್ನು ಕೈಯಾಡಿಸಿ 'ಮಡಿ' ಮಾಡುವ

ತನಕ ಕೆಲಸ ನಡೆದು ಹೋಗುತ್ತಿತ್ತು. ಇದು ಹಳ್ಳಿಯನ್ನು 'ಆರೋಗ್ಯಧಾಮ'ವನ್ನಾಗಿ ಮಾಡುತ್ತಿತ್ತು. ಇಂದು ಬಹುತೇಕ ಹಳ್ಳಿಗಳಲ್ಲಿರುವ ಗುಂಪುಗಾರಿಕೆ, ಸಾರಾಯಿ ಅಂಗಡಿ, ಜೂಜು, ಪಟ್ಟಣದ ಮೋಹ ಇಡೀ ಹಳ್ಳಿಯ ಬದುಕನ್ನು ಏರುಪೇರು ಮಾಡುತ್ತಿವೆ. ಸ್ವಚ್ಛ ಮನರಂಜನೆ ಹಾಗೂ ಆಧ್ಯಾತ್ಮಿಕ ಭಾವನೆ ಕುಸಿದಂತಾಗಿದೆ.

ಒಟ್ಟಾರೆ ಗ್ರಾಮೀಣ ಬದುಕಿಗೆ ಜಾಗತೀಕರಣದ ಬರ ಬಡಿದು ಪರಿಸರಕ್ಕೆ ಹೊಂದಿಕೊಳ್ಳುವ ನಮ್ಮ ಸಂಪ್ರದಾಯದ ಕೃಷಿ ಪದ್ಧತಿಯೇ ಮರೆಯಾಗುತ್ತಿದೆ. ರೈತನ ಕೊಟ್ಟಿಗೆಯಲ್ಲಿ ಸಗಣಿ, ಗಂಜಲದ ವಾಸನೆಯ ಸೊಗಡು ಕ್ಷೀಣಿಸಿದೆ. ಸಾಂಪ್ರದಾಯಿಕ ಕೃಷಿ ಪದ್ಧತಿಗೆ ಬದಲಾಗಿ ರಾಸಾಯನಿಕ ಗೊಬ್ಬರ, ಕ್ರಿಮಿನಾಶಕ ವಿಷಯುಕ್ತ ಅನಿಲ, ಕುಲಾಂತರಿ ಬೀಜಗಳು, ದುಬಾರಿ ಯಂತ್ರೋಪಕರಣಗಳು, ಅಂತರ್ಜಲದ ಬಸಿತ ಆಕ್ರಮಿಸಿಕೊಂಡಿವೆ. ಒಟ್ಟು ಕುಟುಂಬದ ಜೀವನವೂ ಕ್ಷೀಣಿಸಿದೆ. ಸಾಮೂಹಿಕ ಬೇಸಾಯ, ಸಾಮೂಹಿಕ ಶ್ರಮದಾನ ದೃಶ್ಯಗಳೇ ಮಾಯವಾಗಿವೆ. ಇಲ್ಲವೇ ಮಾಯವಾಗುತ್ತಿವೆ. ನಮ್ಮ ಹಳ್ಳಿಗಳ ಸ್ಥಳನಾಮಗಳ ಅನ್ವೇಷಣೆಗೆ ನಿಂತಾಗ ನಮ್ಮ ಪೂರ್ವಿಕರ ಶ್ರಮ, ಅಲೆದಾಟ, ಪ್ರಕೃತಿಯೊಂದಿಗೆ ಒಡನಾಟ, ನಿಂತ ಸ್ಥಳಕ್ಕೆ ಅನ್ವಯಿಸುವಂತೆ ಹೆಸರಿಡುವುದು, ಒಟ್ಟಾಗಿ ಬದುಕುವ ಚಿಂತನೆ, ಸರಳ ಬದುಕು ಮುಂತಾದ ನೀತಿ ನಿಯಮಗಳು ನಮ್ಮ ವರ್ತಮಾನದ ಕಣ್ಣುಗಳ ಮುಂದೆ ಬಂದು ನಿಲ್ಲುತ್ತವೆ. ಪ್ರತಿ ಹಳ್ಳಿಯ ಜಾಣರು ಈ ಬಗ್ಗೆ ಒಲವು ತೋರ ಬೇಕು. "ಐತಿಹಾಸಿಕ ದಾಖಲೆಗಳು ಮೌನವಹಿಸಿದಾಗ ಸ್ಥಳನಾಮಗಳು ಮಾತ ನಾಡುತ್ತವೆ" ಎಂಬ ಪ್ರಸಿದ್ಧೋಕ್ತಿ ಇದೆ. ಕಾಲಗರ್ಭದಲ್ಲಿ ಅಡಗಿಹೋದ ಎಷ್ಟೋ ಅಪೂರ್ವ ಸಂಗತಿಗಳನ್ನು ಸ್ಥಳನಾಮಗಳು ಉಳಿಸಿಕೊಂಡಿರುತ್ತವೆ. ಇವುಗಳಲ್ಲಿ ಭಾಷಾ ವಿಜ್ಞಾನ, ಸಮಾಜ ವಿಜ್ಞಾನ, ಜಲವಿಜ್ಞಾನ, ಸಸ್ಯವಿಜ್ಞಾನ, ಶಿಲಾ ವಿಜ್ಞಾನ, ಪುರಾತತ್ವ ವಿಜ್ಞಾನ, ಇತಿಹಾಸ, ಜಾನಪದ, ಭೂಗೋಳ ಮೊದಲಾದ ವಿಷಯಗಳು ಅಡಕವಾಗಿರುತ್ತವೆ.

'ಹಳೇಬೇರಿನ, ಹೊಸ ಚಿಗುರಿನ' ನವಚೈತನ್ಯದ ವಾತಾವರಣ ಪುನಃ ನಿರ್ಮಾಣವಾಗಬೇಕಾಗಿದೆ. ಇದಕ್ಕೆ ಪೂರಕವಾಗಿ ಇಂದಿನ ಪೀಳಿಗೆಯವರಿಗೆ ನಮ್ಮ ಪೂರ್ವಿಕರ ಸಂಸ್ಕೃತಿಯ ಅರಿವನ್ನು ಮೂಡಿಸಬೇಕಾಗಿದೆ. ಮೇಲಾಗಿ ಅವು ನಮ್ಮ ಪೂರ್ವಿಕರ ಜೀವಪ್ರೀತಿಯ ಸಂಪ್ರದಾಯಗಳು ಎಂದರೂ ತಪ್ಪಾಗುವುದಿಲ್ಲ. ಉದಾಹರಣೆಗೆ 'ಅರಳೀಮರ ದೇವರ ಮರ' ಎನ್ನುವುದಕ್ಕೆ ಅದು ಬಿಡುವ ಅಪಾರ ಆಮ್ಲಜನಕ. ಕೆಳಗಿನ ಅರಳೀಕಟ್ಟೆಯಲ್ಲಿ ಕುಳಿತರೆ ಅದೊಂದು ಆಹ್ಲಾದ ಅನುಭವ.

ಅರಳೀಕಟ್ಟೆ ಎನ್ನುವುದು ಹಳ್ಳಿಗರ ಜೀವನದ ಪ್ರತೀಕ. ಆರುನೂರು ಅಲದ ಮರಗಳಿಗೆ ಒಂದು ಅರಳೀಮರ ಸಮ ಎನ್ನುವುದು ನಮ್ಮ ಪೂರ್ವಿಕರ ನಂಬಿಕೆ. ಇದು ವೈಜ್ಞಾನಿಕವಾಗಿಯೂ ಬಹು ಸಮೀಪದಲ್ಲಿದೆ 'ಕೂಡಿಬಾಳಿದರೆ ಸ್ವರ್ಗಸುಖ' ಎಂಬ ನಾಣ್ಣುಡಿಗೆ ಜೀವಂತ ಸಾಕ್ಷಿಯಾಗಿದೆ. ಇಡೀ ಹಳ್ಳಿಯ ಮಾತುಕತೆ, ಕಷ್ಟಸುಖ, ನ್ಯಾಯ, ತೀರ್ಮಾನಗಳು ಕಟ್ಟೆಯಲ್ಲಿ ನಡೆದು ಹೋಗುತ್ತಿದ್ದವು. ಉಗಾದಿ ಹೊತ್ತಿಗೆ ಹೊನ್ನೇರು ಕಟ್ಟಬೇಕು, ಭರಣಿ ಮಳೆ ಹೂದ್ರೆ ಧರಣಿಯೆಲ್ಲಾ ಸೌಖ್ಯ, ಆರಿದ್ರ ಮಳೆಗೆ ಅದ್ದೂರಿ ಬೆಳೆ, ಅಸ್ಲೆ ಮಳೆ ಹೂದು ಪಸಲು (ಸಣ್ಣ ಸಣ್ಣ ಮೀನುಗಳು) ಬೆಟ್ಟ ಹತ್ತಬೇಕು, ಮಕ್ಕೆ ಮಳೆಗೆ ಮಡಕೆ ಬಾಡು ಉಳೀಬೇಕು, ಉತ್ತರೆ ಮಳೆ ಹೂದು ಉತ್ತೆತ್ತು ನೀರಿಗೆ ಬೀಳಬೇಕು, ಹಸ್ತದ ಮಳೆ ಹೋದ್ರೆ ಹೆತ್ತವ್ವ ಹಿಟ್ಟು ಕೊಡೋಕಿಲ್ಲ ಇಂಥ ನಾಣ್ಣುಡಿಗಳು ಇಂದಿಗೂ ಹಳ್ಳಿಗಳಲ್ಲಿ ಜೀವಂತವಾಗಿವೆ. ಇಂಥ ಅಮೂಲ್ಯ ನಂಬಿಕೆ ಮತ್ತು ಸಂಪ್ರದಾಯಗಳನ್ನು ವೈಜ್ಞಾನಿಕವಾಗಿ ವಿಶ್ಲೇಷಣೆ ಮಾಡುವಂಥ ಕಥಾ ಸಾಹಿತ್ಯ ಇಂದು ರಚನೆಯಾಗಬೇಕಾಗಿದೆ.

ಇಂತಹ ಸಾಂಪ್ರದಾಯಿಕ ಹಬ್ಬ ಆಚರಣೆಗಳನ್ನು ಸಾಹಿತ್ಯದೊಳಗೆ ತಮ್ಮದೇ ಆದ ರೀತಿಯಲ್ಲಿ ಬಳಸಿಕೊಂಡು ಹಬ್ಬ ಆಚರಣೆಗಳ ಜೊತೆ ಪ್ರೇಮ, ಕಾಮ, ದುರಂತ, ಸಂತೋಷ ಇಂತಹ ಭಾವನೆಗಳು ಅವಿನಾಭಾವ ಸಂಬಂಧ ಹೊಂದಿರುದನ್ನು ಸಮಂಜಸವಾಗಿ ಚಿತ್ರಿಸಿರುವುದನ್ನು ಮಂಡ್ಯ ಜಿಲ್ಲೆಯ ಕಥೆಗಾರರ ಕಥೆಗಳನ್ನು ಅವಲೋಕಿಸಿದಾಗ ಗೋಚರವಾಗುತ್ತದೆ. ವೃತ್ತಿಯಿಂದ ವೈದ್ಯರಾದ ಬೆಸಗರಹಳ್ಳಿ ರಾಮಣ್ಣ ಅವರು ಸಾಹಿತ್ಯದ ಮೂಲಕ ಹಳ್ಳಿಗಾಡಿನ ಬದುಕನ್ನು ಚಿಕಿತ್ಸಕ ದೃಷ್ಟಿಕೋನದಿಂದ ನೋಡಿದವರು. ಹಾಗಾಗಿ ಅಲ್ಲಿ ಕಾಣಿಸಬಹುದಾದ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಅಸ್ವಸ್ಥತೆಯನ್ನು ತಮ್ಮ ಕಥೆಗಳಲ್ಲಿ ತೆರೆದಿಟ್ಟಿದ್ದಾರೆ. ಹಾಗಾಗಿಯೇ "ಗ್ರಾಮೀಣ ಬದುಕನ್ನು ಅನಾವರಣಗೊಳಿಸುವ ಕಥೆಗಾರರೆಂದೇ ಕರೆಸಿಕೊಳ್ಳುತ್ತಿರುವ ಬೆಸಗರಹಳ್ಳಿ ರಾಮಣ್ಣ ಅವರು ಯಾವತ್ತೂ ಸ್ಥಗಿತಗೊಂಡ ಸಂಸ್ಕೃತಿಯ ನೆಲೆಯಿಂದ ಹಳ್ಳಿಯನ್ನು ನೋಡಲಿಲ್ಲ. ಶವಾಗಾರಕ್ಕೆ ಸಾಗಬೇಕಾದ ಸಂಸ್ಕೃತಿಯ ಹುಸಿ ಮಾದರಿಗಳನ್ನು ಶೈತ್ಯಾಗಾರದಲ್ಲಿಟ್ಟು ಸಂರಕ್ಷಿಸಲು ಹೋಗಲಿಲ್ಲ. ಹಳ್ಳಿಯ ಸುಗ್ಗಿ ಸಂಕಟಗಳನ್ನು ಒಟ್ಟಿಗೆ ಕಟ್ಟಿ ಕೊಟ್ಟ, ಕಥೆಗಾರ ಅವರು. ಹಳ್ಳಿಯ ಆಚರಣೆಗಳನ್ನು ದಾಖಲಿಸುವಾಗಲೂ ಅದರಾಚೆ ತುಡಿಯುತ್ತ ಪರಿಶೀಲಿಸುತ್ತಾ ಸಾಮಾಜಿಕ ಕಾಳಜಿಯ ಆಯಾಮಕ್ಕೆ ಕೊಂಡೊಯ್ಯುವ ಕಥೆಗಾರಿಕೆ ಅವರದ್ದಾಗಿತು"(ಲೀಲಾಅಪ್ಪಾಜಿ(ಪ್ರ. ಸಂ.), ಡಾ. ಬೆಸಗರಹಳ್ಳಿ ,೨೦೧೫,

ಪುಟ-೧೦೩)ಎಂದು ಪ್ರೊ. ಬರಗೂರು ರಾಮಚಂದ್ರಪ್ಪ ಅಭಿಪ್ರಾಯಪಟ್ಟಿದ್ದಾರೆ. ರಾಮಣ್ಣನವರ **'ಸುಗ್ಗಿ'** ಎಂಬ ಕಥೆಯಲ್ಲಿ ಮಂಡ್ಯ ಜಿಲ್ಲೆಯ ಹಾಗೂ ಭಾರತದ ಪ್ರತಿಯೊಂದು ಹಳ್ಳಿಯಲ್ಲೂ ರೈತ ಕೃಷಿ ಮಾಡಿ ಅದರ ಪ್ರತಿಫಲವಾಗಿ ಫಸಲನ್ನು ಪಡೆದಾಗ ಅದಕ್ಕೆ ಪೂಜೆ ಸಲ್ಲುತ್ತದೆ. ರೈತರು ತಮ್ಮ ದುಡಿಮೆಯ ಫಲವನ್ನು ದೇವರು ಕೊಟ್ಟ ಪ್ರಸಾದವೆಂದು ಅದಕ್ಕೆ ಪೂಜೆ ಸಲ್ಲಿಸುತ್ತಾರೆ. ಅಂತಹದೊಂದು ಸಂದರ್ಭ ಈ ಕಥೆಯಲ್ಲಿ ಮೂಡಿಬಂದಿದೆ.

"ಭೂ ತಾಯಿ ಕೊಟ್ಟಳು ಬತ್ತವ
ಕಣಜದ ತುಂಬ ತುಂಬೇವು
ಹೊಸ ಬೆಳೆಯ ಅನ್ನಾವ ಮಾಡಿ
ಮನೆಯಲ್ಲಿ ಬಂದು ನಲದೇವು
ಸುಗ್ಗಿಯ ನೆನೆದೇವು, ನೆನೆದೇವು ಸುಗ್ಗಿಯ"
(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೩, ಪುಟ-೦೫)

ಎಂದು ಹೇಳುವ ಲೇಖಕರು ಗ್ರಾಮ್ಯ ಬದುಕಿನ ಪ್ರಮುಖ ಅಂಶವನ್ನು ಜಾನಪದ ಗೀತೆಯ ಮೂಲಕ ಹೇಳುವುದನ್ನು ಗಮನಿಸಬಹುದು.

ಬತ್ತದ ರಾಶಿಗೆ, ತೆಂಗಿನ ಕಾಯನ್ನು ಒಡೆದು, ಅದರ ಪವಿತ್ರ ನೀರನ್ನು ರಾಶಿಯ ಸುತ್ತ ಚಿಮುಕಿಸಿ, ಬಾಳೆ ಹಣ್ಣಿನ ತೊಟ್ಟು ಮುರಿದು ಗಂಧದ ಕಡ್ಡಿ ಮತ್ತು ಉಂಡೆ ಕರ್ಪೂರವನ್ನು ಹಚ್ಚಿದ ಬಳಿಕ ಕಾಯಿಯ ಹೋಳುಗಳನ್ನು ತಟ್ಟೆಯಲ್ಲಿಟ್ಟು ಭಕ್ತಿ ಸಮರ್ಪಣೆಯಿಂದ ಕರ್ಪೂರದಾರತಿಯನ್ನು ರಾಶಿಗೆ ಎತ್ತುವರು. ರಾಶಿಯ ಮುಟ್ಟಿ ಕಣ್ಣಿಗೊತ್ತಿಕೊಂಡು, ಅಳೆಯುವ ಸಾಧನ ಕೊಳಗವನ್ನು ತೆಗೆದುಕೊಂಡು ರಾಶಿಯಲ್ಲಿ ಮೀಟಿ ಎತ್ತಿ ಬೊಗಸೆ ಬೊಗಸೆಯಾಗಿ ತುಳುಕವಂತೆ ತುಂಬಿ 'ಹೆಚ್ಚಲಿ' ಎಂದು ಹೇಳುವ ಈ ಸಂದರ್ಭವನ್ನು ಗಮನಿಸಿದಾಗ 'ಸುಗ್ಗಿ' ಕಥೆಯಲ್ಲಿ ಕಥೆಗಾರರಾಗಿ ಬೆಸಗರಹಳ್ಳಿ ರಾಮಣ್ಣನವರು ತಾವು ಕಂಡು ಅನುಭವಿಸಿದ ರೈತ ಬದುಕಿನ ಚಟುವಟಿಕೆಗಳನ್ನು ಹಾಗೂ ತಮ್ಮ ಸುತ್ತಮುತ್ತಲ ಪ್ರಾದೇಶಿಕತೆಯ ಸಂಪ್ರದಾಯವನ್ನು ತಿಳಿಸುವ ಪ್ರಾಮಾಣಿಕ ಪ್ರಯತ್ನ ಮಾಡಿದ್ದಾರೆಂದು ಹೇಳಬಹುದು.

'ಸುಗ್ಗಿ' ಕಥೆಯಲ್ಲಿಯೂ ಗ್ರಾಮೀಣ ಪ್ರದೇಶದ ವಸ್ತುವನ್ನೇ ಕಥೆಗಾರರು ಮುಖ್ಯವಾಗಿ ಗುರುತಿಸಿದ್ದಾರೆ. ಕಥೆಯ ಹೆಸರೇ ಹೇಳುವಂತೆ ಸುಗ್ಗಿಯ ಸನ್ನಿವೇಶ ಬರುತ್ತದೆ. ಅಣ್ಣ ಶಿವರಾಮೇಗೌಡ ತಮ್ಮ ಪುಟ್ಟಸ್ವಾಮಣ್ಣನ ಒಡೆದ ಮನಸು ಸುಗ್ಗಿಯ ನೆಪದಲ್ಲಿ ಒಂದಾಗುತ್ತದೆ. ಸುಗ್ಗಿ ಅಥವಾ ಸುಗ್ಗಿ ಕಾಲ ಎಂದರೆ ಫಸಲು

ಬೆಳೆದು ಕೊಯ್ಯುವ ಕಾಲ. ಅದರ ಸಂಭ್ರಮವೆ ಸಂಭ್ರಮು ಬೆಳೆದ ಧಾನ್ಯವನ್ನು ಒಕ್ಕಣೆ ಮಾಡಿ ಕಣದಲ್ಲಿ ರಾಶಿ ಹಾಕಿ ಪೂಜೆ ಮಾಡುವುದು ರೈತರ ಸಂತೋಷಕ್ಕೆ ಪಾರವೇ ಇಲ್ಲ. ಕಥೆಯಲ್ಲಿ ಬರುವಂತೆ "ಬತ್ತದ ರಾಶಿಯ ಸುತ್ತಲೂ ಬೂದಿಯ ಗೆರೆಯನ್ನು ಬಿಟ್ಟು, ರಾಶಿಯ ತುದಿಗೆ ಕುಡಿಗೋಲೊಂದನ್ನು (ಅದರ ಹಿಡಿಯನ್ನು ಕೆಳಗೆ ಮಾಡಿ, ಅದರ ಬಾಯಿ ಮೂಡಲು ದಿಕ್ಕನ್ನು ನೋಡುವಂತೆ) ಸರಿಯಾಗಿ ಸಿಕ್ಕಿಸಿ, ಬೆರಳಿನಲ್ಲೆ ರಾಶಿಯ ಒಂದು ಮುಖಕ್ಕೆ ಸೂರ್ಯ, ಚಂದ್ರ, ತ್ರಿಶೂಲಗಳನ್ನು ರಚಿಸಿದಂತೆ ಬರೆಯುತ್ತಾರೆ"(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೭, ಪುಟ-೧೪). ಪೂಜೆಗೆ ಹಣ್ಣು, ಕಾಯಿ, ಕರ್ಪೂರ, ಗಂಧದಕಡ್ಡಿ, ಎಲೆ ಅಡಿಕೆ ಬೆಳ್ಳಿಯ ತಟ್ಟೆಯಲ್ಲಿದೆ. ದೊಡ್ಡ ಹೆಡಿಗೆಯಲ್ಲಿ ಬಿಸಿ ಕಡಲೆ ಪುರಿಯೂ ಸಿದ್ಧವಾಗಿತ್ತು. ಇದು ಪ್ರತಿಯೊಂದು ಗ್ರಾಮಗಳಲ್ಲಿ ಬೆಳೆಗಳನ್ನು ಬೆಳೆದ ರೈತ ಈ ರೀತಿ ಮಾಡುವುದು ಧಾನ್ಯಲಕ್ಷ್ಮಿಯೆಂದು ಪೂಜಿಸುವುದು ವಾಡಿಕೆಯಲ್ಲಿದೆ. ಈಗ ಕಣ ಮಾಡುವುದು ಎಂದರೆ ಟಾರು ರಸ್ತೆಯೇ ಕಣವಾಗಿ ಮಾರ್ಪಾಡಾಗಿರುವುದು ವಿಷಾಧದ ಸಂಗತಿ. ಹಿಂದೆ ದೈಹಿಕ ಶ್ರಮದಲ್ಲಿ ಧಾನ್ಯದ ಒಕ್ಕಣೆ ಮಾಡಿದರೆ ಇಂದೂ ಅನಿವಾರ್ಯವಾಗಿ ಯಂತ್ರಗಳಿಂದಾಗಿದೆ. ಆ ಹಿಂದಿನ ಒಟ್ಟಾರೆ ಸಂಭ್ರಮ ಮರೀಚಿಕೆಯಾಗಿದೆ.

ಭಾರತೀಯ ಪರಂಪರೆಯ ಹಬ್ಬಗಳಿಗೆ ವಿಶೇಷ ಸ್ಥಾನಮಾನಗಳಿರುವುದನ್ನು ನಾವು ಇಂದು ಗುರ್ತಿಸಬಹುದು ಕೆಲವು ಹಬ್ಬಗಳು ಮೌಢ್ಯಕ್ಕೆ ಅಂಧ ಸಂಸ್ಕೃತಿಗೆ ಕಾರಣವಾಗಿದ್ದಂತೆ ಹಲವು ಹಬ್ಬಗಳು ಗ್ರಾಮೀಣ ಜನರ ಬದುಕಿನ ಸಂತೋಷಕ್ಕೆ ಕಾರಣವಾಗಿದ್ದವು. ಹಬ್ಬಗಳ ಮೂಲಕ ಇಡೀ ಸಮುದಾಯ ತನ್ನ ಬಂಧು-ಭಾಂದವರನ್ನು ಒಟ್ಟುಗೂಡಿಸಿಕೊಂಡು ಸಂತೋಷದ ಬದುಕನ್ನು ಪಡೆಯುತ್ತಿದ್ದುದೂ ಕಾಣಬಹದು. ವರ್ಷವಿಡೀ ದುಡಿಯುವ ಶ್ರಮಿಕ ವರ್ಗ ಅಂದು ಹೊಸ ಬಟ್ಟೆಯುಟ್ಟು, ವಿಶೇಷವಾದ ಆಹಾರ ತಿಂಡಿತಿನಿಸುಗಳನ್ನು ಸೇವಿಸುವುದರ ಮೂಲಕ ಸಂತೋಷ ಪಡುತ್ತಿದ್ದರು, ಜೊತೆಗೆ ಹಬ್ಬಗಳು ಅಂಚಿ ತಿನ್ನುವ ಒಂದು ಸಮಾನತೆಯ ವ್ಯವಸ್ಥೆಯಾಗಿತ್ತು. ಬಡವಬಲ್ಲಿದರೆನ್ನದೆ ಅಂದು ಎಲ್ಲರೂ ಒಟ್ಟಾಗಿ ಸೇರುವ ಸಂದರ್ಭವೂ ಆಗಿತ್ತು. ತಾವು ಬೆಳೆದ ಫಸಲಿನಲ್ಲಿ ಸ್ವಲ್ಪವನ್ನಾದರೂ ಪ್ರಕೃತಿಯ ಪ್ರಾಣಿಪಕ್ಷಿಗಳಿಗೆ ಹಂಚುವ ವ್ಯವಸ್ಥೆ ಈ ಹಬ್ಬಗಳಲ್ಲಿ ಅಡಗಿತ್ತು. ವೈಜ್ಞಾನಿಕ ಮತ್ತು ಆಧ್ಯಾತ್ಮಿಕವಾಗಿ ಹಬ್ಬಗಳು ಮಾನವ ಬದುಕಿಗೆ ಅಗತ್ಯವಾದ ಆರೋಗ್ಯದ ಅಂಶಗಳಾಗಿದ್ದವು.

**'ಮಹಾನವಮಿ'** ಈ ಕಥೆಯು ಹೆಸರೇ ಸೂಚಿಸುವಂತೆ ಭಾರತದ ಎಲ್ಲಾ ಹಿಂದೂಗಳು ಆಶ್ವಯುಜ ಮಾಸದಲ್ಲಿ ಆಚರಿಸುವ ಹಬ್ಬವಾಗಿದೆ. ಪ್ರಾಚೀನದಿಂದಲೂ ಆಚರಿಸಿಕೊಂಡು ಬಂದಿರುವ ಹಬ್ಬವಾದ ಇದು ಸೆಪ್ಟಂಬರ್–ಅಕ್ಟೋಬರ್‌ನಲ್ಲಿ ಬರುತ್ತದೆ. ಮಹಾಲಯ ಅಮಾವಾಸೆಯ ದಿನದಂದು ದಿವಂಗತರಾಗಿರುವ ತಮ್ಮವರಿಗೆ ವಿಶೇಷವಾಗಿ ತಂದೆ–ತಾಯಿ ಹಿರಿಕರಿಗೆ ಎಡೆಯಿಟ್ಟು ಅವರು ಬಳಸುವ ವಸ್ತುಗಳನ್ನು–ತಿಂಡಿತಿನಿಸುಗಳನ್ನು ಇಟ್ಟು ಕೈಮುಗಿದು ಧೂಪ ಹಾಕುತ್ತಾರೆ. ಈ ಕಥೆಯಲ್ಲಿ ಬರುವ ಹಬ್ಬ ಇನ್ನೂ ಎಂಟು ದಿನಗಳಿದ್ದು ಚಿಕ್ಕಣ್ಣ ತನ್ನ ಮನೆಯಲ್ಲಿ ಹಬ್ಬದ ಯಾವ ಸಿದ್ಧತೆಯೂ ನಡೆದಿರುವುದಿಲ್ಲ. ಕಾರಣ, ಅವನ ಬಳಿ ಹಣದ ಕೊರತೆ ಇರುತ್ತದೆ. ಗ್ರಾಮೀಣ ಪ್ರದೇಶಗಳಲ್ಲಿ ಹಣಕಾಸಿನ ತೊಂದರೆ ಇದ್ದುದ್ದು ಸಹಜವೇ ಆಗಿದೆ. ಆದರೂ ತಾವು ರೂಢಿಸಿಕೊಂಡು ಬಂದಿರುವ ಹಬ್ಬ ಹರಿದಿನಗಳನ್ನು ಬಿಡುವುದಿಲ್ಲ. ಮನೆಯ ಹಿರಿಯವಳಾದ ನಿಂಗಕ್ಕನ ಸಂಭಾಷಣೆ ಗಮನಿಸಿದರೆ "ಮಾರ್ಲಮಿ ಹಬ್ಬಕ್ಕೆ ಇನ್ನೆಂಟು ದಿನ ಅದೆ. ಮನೆಗೆ ಸುಣ್ಣಬಣ್ಣ, ದುಂಬುಹೋಡಿವ ಅಂತ ಮಾತಾಗೂಯಿಲ್ಲ. ಬಟ್ಟೆಬರೆ ಸಾಮಾನು ಸರಂಜು ನೋಡುವ ಅನ್ನೋ ಅಳಕೂ ಗಂಡ್ಸು ಅನ್ನಿಸಿ ಕೊಂಡೋನ್ನೂಯಿಲ್ವಲ್ಲ! ಹುಟ್ಟಿಸಿದ ಅಪ್ಪನಿಗೆ 'ಯಡೆ' ಹಾಕಬೇಕು ಅನ್ನೋ ಗ್ಯಾನ ಬೇಡವೇ ಈ ಗ್ರಾಸ್ತನಿಗೆ! ನಾನು 'ಗೊಟ್ಟಕ್' ಅಂದ ಮೇಲೆ ಈ ಮನೆ ದೀಪ ನಿಲ್ಲೋದು ಕಾಣೆಕಣೆ ತಿಮ್ಮಿಯೋ ಎಂದು ಹುಲ್ಲಟ್ಟಿಯ ತಿಮ್ಮಕ್ಕನಿಗೆ ಒಪ್ಪಿಸುತ್ತಿದ್ದಳು"(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೭, ಪುಟ-೪೯). ಇಲ್ಲಿ ಹಿರಿಯವರು ಕಿರಿಯವರಿಗೆ ಹಬ್ಬದ ಮುನ್ನೆಚ್ಚರಿಕೆಯ ಮೂಲಕ ಸಿದ್ಧತೆಗೆ ತೊಡಗಿಸುವಂತಾಗಿದೆ.

ಸತ್ತ ವ್ಯಕ್ತಿಗಳು ವರ್ಷಕ್ಕೊಮ್ಮೆ ಬಂದು ತಮ್ಮ ಮನೆಗಳಲ್ಲಿ ಊಟ ಮಾಡುತ್ತಾರೆ. ಅವರ ಆತ್ಮ ಅದರಿಂದ ತೃಪ್ತವಾಗುತ್ತದೆ ಎಂಬುದು ಒಂದು ನಂಬಿಕೆ. ಅದಕ್ಕೋಸ್ಕರ ಆಚರಣೆ ಮಾಡುವರು ಯಾವುದಾದರು ಒಂದು ಹಬ್ಬವನ್ನು ತಮ್ಮ ಮನೆಯ ಪಕ್ಷವೆಂದು ಗುರುತಿಸಿಕೊಂಡಿದ್ದರು. ಇನ್ನು ಹಲವಾರು ಮಳೆ, ತಿಥಿ ಲೆಕ್ಕದಲ್ಲೂ ತಾವೇ ತೀರ್ಮಾನಿಸಿ ಪಕ್ಷವೆಂದು ತಮ್ಮ ಹಿರಿಯರಿಗೆ ಅನ್ನ ಅಥವಾ ಎಡೆ ಹಾಕುವ ಪದ್ಧತಿ ಇದೆ. ಇಷ್ಟಲ್ಲದೆ ಅವರಿಗೆ ಬಟ್ಟೆ, ಬಳಸುತ್ತಿದ ವಸ್ತುಗಳು, ತಿನ್ನುತ್ತಿದ್ದ ವಿಶೇಷ ಆಹಾರ ತಿನಿಸುಗಳು ತಯಾರಾಗಿ ಪೂಜೆಗೆ ಇಡಲ್ಪಡುತ್ತವೆ. ಇನ್ನು ವಿಶೇಷವೆಂದರೆ ಸತ್ತ ವ್ಯಕ್ತಿ ಉಪಯೋಗಿಸುತ್ತಿದ್ದ ಬೀಡಿ. ಸಿಗರೇಟು, ಚುಟ್ಟ,

ಬ್ರಾಂದಿ, ಸಾರಾಯಿ ಇಂತಹ ಧೂಮಪಾನಿಯಗಳನ್ನು ಅಂದು ಅವರಿಗಾಗಿ ಪೂಜೆಗೆ ಇಡುವ ಪದ್ಧತಿ ಮಂಡ್ಯ ಜಿಲ್ಲೆಯಲ್ಲಿ ಇಂದಿಗೂ ಚಾಲ್ತಿಯಲ್ಲಿದೆ.

ಭಾರತ ದೇಶವು ಗ್ರಾಮೀಣ ಪ್ರದೇಶಗಳಿಂದ ಕೂಡಿದ್ದು ಹಬ್ಬದ ತವರೂರು ಎಂದರೂ ತಪ್ಪಾಗಲಾರದು. ಸಂಕ್ರಾಂತಿ, ಯುಗಾದಿ, ದೀಪಾವಳಿ ಎಲ್ಲಕ್ಕಿಂತ ಹೆಚ್ಚಾಗಿ ಮಹಾನವಮಿ ಹಬ್ಬ ಹೆಚ್ಚು ಸಡಗರದಿಂದ ಮಾಡುವ ಮೂಲಕ ಈ ಭೂಮಿ ಮೇಲೆ ನಮ್ಮ ನಿಜ ಸ್ಥಿತಿಗೆ ಕಾರಣರಾದ ಪೂರ್ವಿಕರನ್ನು ಬಹಳ ಭಯ ಭಕ್ತಿಯಿಂದ ಪೂಜಿಸುವುದು ನಮ್ಮ ಸಂಸ್ಕೃತಿಯ ಪ್ರತಿಬಿಂಬವಾಗಿದೆ. ಇದು ಅಗೋಚರವಾಗಿ ಕೃಷಿ ಸಂಸ್ಕೃತಿಗೆ ಪೂರಕವಾಗಿದೆ. 'ಎಡೆ' ಇಡುವ ತಿಂಡಿತಿನಿಸುಗಳು ಅದರಲ್ಲಿಯೂ ಕಜ್ಜಾಯ, ಚಿಕ್ಕಿರುಂಡೆ, ಕೋಡುಬಳೆ, ಚಕ್ಕುಲಿ ಮುಂತಾದ ತಿನಿಸುಗಳು ಪೌಷ್ಠಿಕ ಆಹಾರಗಳಾಗಿದ್ದವು. ದುಡಿಮೆಗೆ ಶಕ್ತಿ ಕೊಡುತ್ತಿದ್ದವು. ಮುಂದಿನ ಚಳಿಗಾಲದ ಕೊಯ್ಲುಗಾಲದವರೆಗೂ ಕೆಡದಂತೆ ಮಡಕೆಗುಡಾಣ, ಇಲ್ಲವೆ ಜಾಯಿಕಾಯಿ ಪೆಟ್ಟಿಗೆಗಳಲ್ಲಿ ಇರಿಸಿ ಕೆಡದಂತೆ ನೋಡಿಕೊಳ್ಳುತ್ತಿದ್ದರು. ಈಗಿನಂತೆ ಕಲಬೆರಕೆ ಇರಲಿಲ್ಲ. ಆಗ ಎಲ್ಲವೂ ಸಾವಯವ ಕೃಷಿಯೇ ಆಗಿತ್ತು. ಎತ್ತಿನ ಗಾಣಗಳಿಂದ ಶುದ್ಧ ಎಣ್ಣೆ ತೆಗೆಯಲಾಗುತ್ತಿತ್ತು. ಇಂದು ಹಬ್ಬಗಳು ದುಬಾರಿ ಖರ್ಚಿನ ವ್ಯವಸ್ಥೆಗಳಾಗಿರುವುದನ್ನು ಕಾಣಬಹುದು. ಸಂಬಂಧಗಳು ಸಡಿಲಗೊಂಡು ವಿಭಕ್ತ ಕುಟುಂಬಗಳಾಗಿ ಹಬ್ಬಗಳು ಸರಳ ರೂಪ ಪಡೆದಿರುವುದನ್ನು ಕಾಣಬಹುದು.

ಜಿ.ವೆಂಕಟಯ್ಯ ಅವರ 'ಬಾಬಯ್ಯನ ಜಲ್ದಿ' ಒಂದು ಪ್ರಾದೇಶಿಕ ಹಿನ್ನೆಲೆಯಲ್ಲಿ ನಡೆಯುವ ಹಬ್ಬವಾಗಿದೆ. ಹೆಮ್ಮನಹಳ್ಳಿಯ ಜನಗಳು ಯಾವುದೇ ಭೇದಬಾವವಿಲ್ಲದೆ ಒಗ್ಗಟಿನಿಂದ ಈ ಹಬ್ಬವನ್ನು ಆಚರಿಸುವರು. ಈ ಕಥೆಯಲ್ಲಿ ಹೆಣ್ಣಿನ ಸಹಜ ಬಯಕೆಯಂತೆ ತಾಯಿ ಆಗದಿದ್ದಾಗ ಬಾಬಯ್ಯನ ಜಲ್ದಿ ಮಾಡಿದರೆ ಮಗುವಾಗುತ್ತದೆ ಎನ್ನುವ ಗ್ರಾಮೀಣರ ನಂಬಿಕೆಯನ್ನು ಚಿತ್ರಿಸಿದ್ದಾರೆ. ಆದರೂ ಆಧುನಿಕತೆಯ ವಿಜ್ಞಾನದಲ್ಲಿ ಈ ನಂಬಿಕೆಗಳು ನಿಲ್ಲುವುದಿಲ್ಲ.

ನಮ್ಮ ಹಳ್ಳಿಗಳಲ್ಲಿ ಗ್ರಾಮ ದೇವತೆಗಳ ಮತ್ತು ಇತರ ಹಬ್ಬಗಳಿಗೆ ತನ್ನದೇ ಆದ ಹಿನ್ನಲೆ ಇರುವುದನ್ನು ಕಾಣಬಹುದು. ಇವು ಚಾರಿತ್ರಿಕವಾದ, ಸಾಮಾಜಿಕ ಹಿನ್ನಲೆಯ ಹಬ್ಬಗಳಾಗಿರುತ್ತವೆ. ಬೆಸಗರಹಳ್ಳಿ ರಾಮಣ್ಣ ಅವರ '**ಶೂಲ**' ಕಥೆಯು ಒಂದು ಪ್ರೇಮ ಪ್ರಕರಣದಲ್ಲಿ ಪ್ರಾರಂಭವಾಗಿ ದುರುಂತದಲ್ಲಿ ಕೊನೆಗೊಳ್ಳುವುದನ್ನು ಕಾಣಬಹುದು.

ಊರಿನ ಕೋಟೆಯನ್ನು, ಕೆರೆಗಳನ್ನು ಕಟ್ಟುವಾಗ ಅವುಗಳ ರಕ್ಷಾಬಂಧನವಾಗಿ ಮನುಷ್ಯರನ್ನು ಬಲಿಕೊಟ್ಟ ಕಥಾರೂಪಗಳಿವೆ. ಅಂತಹ ಬಲಿಯ ಹಿನ್ನೆಲೆಯಲ್ಲಿ ರಾಮಣ್ಣ ಅವರ 'ಶೂಲ' ಕಥೆ ರಚನೆಯಾಗಿದೆ. ಈ ಕಥೆಯಲ್ಲಿ ನರಬಲಿಯ ನಿರಂತರತೆಯನ್ನು ಕಾಣಬಹುದು. ಪೂರ್ವಿಕರು ಊರನ್ನು ಕಟ್ಟುವಾಗ 'ನೆಲಶಾಂತಿ'ಗಾಗಿ ನಾಲ್ವರು ಗಂಗಾಮತಸ್ಥರು, ನಾಲ್ಕು ದಿಕ್ಕಿನಲ್ಲಿ ನಾಲ್ಕು ಅಡಿಕೆ ಮರಗಳನ್ನು ನೆಟ್ಟು, ಅವುಗಳ ಕೆಳಗೆ ದೊಡ್ಡ ತ್ರಿಶೂಲಗಳನ್ನು ನೆಟ್ಟು, ಮರಗಳನ್ನೇರಿ, ತ್ರಿಶೂಲಗಳ ಮೇಲೆ ಬಿದ್ದು, ತಮ್ಮ ಎದೆ ಗುಂಡಿಗೆ ರಕ್ತವನ್ನು ನೆಲಕ್ಕೆ ಚೆಲ್ಲಿ ಅಮರರಾದರಂತೆ. ಅವರ ನೆನಪಿಗಾಗಿ ಈ ಶೂಲದ ಹಬ್ಬ(ಇದನ್ನು ಶೂಲ ಬಲಿಯೆನ್ನುತ್ತಾರೆ)ವನ್ನು ಆಚರಿಸುತ್ತಾರೆ.

ಹಿಂದೆ ವರ್ಷಕ್ಕೆ ಒಂದು ಸಾರಿ ತಪ್ಪದೆ ನಡೆಯುತ್ತಿದ್ದ ಶೂಲದ ಹಬ್ಬ ಐದು ವರ್ಷ ಮತ್ತು ಅದಕ್ಕಿಂತ ಹೆಚ್ಚಿನ ವರ್ಷಗಳು ಕಳೆದ ನಂತರ ಸಿದ್ಧತೆ ನಡೆಯುತ್ತದೆ. ಕೆಲವೆಡೆ ಹನ್ನೆರಡು ವರ್ಷಕ್ಕೊಮ್ಮೆ ನಡೆಯುತ್ತದೆ. 'ಶೂಲದ ಹಬ್ಬ' ಬೇರೆ ಹಬ್ಬಗಳಂತೆ ಸುಲಭವಲ್ಲ, ಈ ಹಬ್ಬದ ಪ್ರಾಮುಖ್ಯತೆ ವರ್ಷಗಳು ಉರುಳಿದ್ದರೂ ಮೊದಲಿನಷ್ಟೇ ಶ್ರದ್ಧೆಯಿಂದ ನಡೆಸಲು ಎಲ್ಲ ಯತ್ನಗಳು ನಡೆಯುತ್ತವೆ. "ಹಬ್ಬ ಒಂದು ತಿಂಗಳು ಎನ್ನುವಂತೆ ಊರಿನಲ್ಲಿ ಮೆಣಸಿನಕಾಯಿ ಸುಡುವಂತಿಲ್ಲ. ಹುರುಳಿ ಉರಿಯುವಂತಿಲ್ಲ ಮರಿ ಕುಯ್ದು ಮಾಂಸ ಪಾಲು ಹಾಕುವಂತಿಲ್ಲ. ಅಳ್ಳು ಅಡಬ್ಯಾಡಿ, ಹುಳ್ಳಿ ಹುರಿಬ್ಯಾಡಿ, ಮೆಣಸಿನಕಾಯಿ ಸುಡಬ್ಯಾಡಿ, ಅಡವಿ ಯೊಳಗಿರುವ ಅಗ್ನಿ, ಗಿಡದೊಳಗಿನ ಪತ್ರೆ, ಸುಲಿದ ತೆಂಗಿನಕಾಯಿ, ಗೊನೆಬಾಳೆಹಣ್ಣು, ಕೊಂಬಿನ ಕುರಿ, ಕೊಳಗದೆಂಬಿಟ್ಟು, ಒಳ್ಳೆಯವರೊಳಗಿರಿ, ಕೆಟ್ಟವರೊಳಗಿರಿ"(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೭, ಪುಟ-೨೪೭)ಎಂದು ತಮಟೆ ಬಡಿಯುತ್ತ ಊರಿನ ತಳವಾರ ಹಬ್ಬಕ್ಕೆ ಮುಂಚೆ ಸಾರುತ್ತಾನೆ. ಈ ಕಥೆಯಲ್ಲಿ ನಿಗದಿತ ಶೂಲದ ಬೋರೆಯಲ್ಲಿ ಒಂದು ಆಳುದ್ದದ ನಾಲ್ಕು ಗುಂಡಿಗಳನ್ನು ಕೀಳುವರು ಮುಸಲ್ಮಾನರು. ಅರವತ್ತು ಅಡಿಗಳಷ್ಟು ಎತ್ತರವಿರುವ ನಾಲ್ಕು ಅಡಿಕೆ ಮರಗಳನ್ನು ಊರಿನ ನೂರಾರು ಬಲಿಷ್ಠ ಯುವಕರು ನೆಲಕ್ಕೆ ಬೀಳದಂತೆ ಕಡಿದು, ಹೊತ್ತು ಮಾರಮ್ಮನ ಗುಡಿಗೆ ತಂದು ಪೂಜಿಸಿ, ಎಲ್ಲಿಯೂ ನೆಲಕ್ಕೆ ತಾಕಿಸದೆ ಎಚ್ಚರಿಕೆಯಿಂದ ಶೂಲದ ಬೋರೆಗೆ ಸಾಗಿಸಿ ಮತ್ತೆ ಪೂಜೆ ಮಾಡಿ, ತುದಿಗೆ ಶೂಲ ಆಡುವವರು ನಿಂತುಕೊಳ್ಳಲು ಮಣೆ ಜೋಡಿಸಿ ನೆಟ್ಟಗೆ ನೆಡುತ್ತಾರೆ.

ಶೂಲದ ಹಬ್ಬದ ದಿನ ಅಲಂಕರಿಸಿದ ಮಾರಮ್ಮನ ತಳಿ ಪೂಜೆಯನ್ನು ಕೆರೆಯ ಬಳಿಗೆ ಹೊತ್ತೊಯ್ದು ಇಳುಕಿ ಗಂಗೆ ಪೂಜೆ ನಡೆಸಿ ನಂತರ ಶೂಲದ ಬೋರೆಗೆ ಹುಮ್ಮಸ್ಸಿನಿಂದ ತಮಟೆ, ನಗಾರಿ, ಕಹಳೆಗಳ ಸದ್ದಿನ ನಡುವೆ, ಭಕ್ತರ ಕಾಕು-ಕೇಕೆಗಳೊಡನೆ ತಂದು, ಅಲ್ಲಿಂದ ಮಾರಮ್ಮನ ಪೂಜೆ ಗುಡಿಗೆ ನಡೆದು ಅಲ್ಲಿ ಪೂಜೆ ನಡೆಯುತ್ತಿದ್ದಂತೆಯೇ ಶೂಲ ಆಡುವವರು, ಬಲಿ ಬೀಳುವವರು ಬರುತ್ತಾರೆ. ಬಲಿಬೀಳುವರು ಬಿದ್ದ ನಂತರ, ಶೂಲ ಆಡುವವರು ಮರಹತ್ತಿ ಆಡತೊಡಗುತ್ತಾರೆ. ಇದೊಂದು ಎಚ್ಚರಿಕೆಯ ಸಾಹಸದ ಚಮತ್ಕಾರದ ಆಟ. ಮರ ಮುರಿದರೂ ಅದರ ನಾರು ನಿಧಾನವಾಗಿ ಹರಿಯುವುದರಿಂದ ಆಗುವ ಆಪತ್ತನ್ನು ಕಾಪಾಡಬಲ್ಲದು. ಕೆಲವೊಮ್ಮೆ ಆಪತ್ತು ಸಂಭವಿಸಲೂಬಹುದು. ಹಬ್ಬ ಮುಗಿದ ಒಂದು ತಿಂಗಳ ನಂತರ ಮರಗಳನ್ನು ಯಥಾವತ್ತಾಗಿ ಪೂಜಿಸಿ ನಂತರ ಹರಿಜನರು ಶ್ರದ್ಧಾ ಭಕ್ತಿಯಿಂದ ಕೀಳುತ್ತಾರೆ. ಇದಿಷ್ಟು ಶೂಲ ಹಬ್ಬದ ಆಚರಣೆಯನ್ನು, ಜಯರಾಮನ ಮತ್ತು ಗೌರಿ ಪ್ರೇಮದ ಸುತ್ತ ಎಣೆದು ವಿವರಿಸಿದ್ದಾರೆ. ಗೌರಿಗೆ ಬೇರೆ ಯುವಕನೊಂದಿಗೆ ಮದುವೆ ನಿಶ್ಚಯವಾಗಿದ್ದರಿಂದ ಅದನ್ನು ಸಹಿಸಿಕೊಳ್ಳಲಾಗಿಲಲ್ಲ. ಈ ಜನ್ಮದಲ್ಲಿ ನಮ್ಮಿಬ್ಬರಿಗೂ ಮದುವೆ ಆಗಿದ್ದರೆ 'ಮಾಸ್ತಿ ಕಲ್ಲನ್ನು' ತೋರಿಸಿ ಜತೆಗೇರುತ್ತೇನೆ ಎಂದು ಗೌರಿ ಅಭಿಪ್ರಾಯಸಿದ್ದಳು. (ಗಂಡನ ಜೊತೆ ಹೆಂಡತಿ ಚಿತೆಗೆ ಬಿದ್ದು 'ಸತಿ'ಯಾಗುವ ಸಂಕೇತದ 'ಕೈ'ಗುರುತೆ ಮಾಸ್ತಿ ಕಲ್ಲು) ಗೌರಿಯ ಅಣ್ಣ ಪುಟ್ಟಸ್ವಾಮಿ ಕುಟುಂಬದ ಪ್ರತಿನಿಧಿಯಾಗಿ ಮೂಲೆ ಮರವನ್ನು ಹತ್ತಿ ಶೂಲ ಆಡಬೇಕಿತ್ತು. ಮರ ಏರಿದವನು ಕೆಳಗೆ ಕೂತಿದ್ದ ಬಲಿಯವನನ್ನು ಕಂಡು ಹೆದರಿ ಮರವನ್ನು ಬಿಗಿಯಾಗಿ ಹಿಡಿದು ಕಣ್ಣು ಮುಚ್ಚಿ ಕುಳಿತು ಬಿಟ್ಟ. ಸೇರಿದ್ದ ಜನವೆಲ್ಲ ಪುಟ್ಟಸ್ವಾಮಿ ಇನ್ನೇನು ಬಿದ್ದು ಸತ್ತಾನು, ಯಾರಾದರು ಶೂಲವನ್ನು ಏರಿ ಪುಟ್ಟಸ್ವಾಮಿಯನ್ನು ಕಾಪಾಡಿ ಎಂದು ಜನ ಕೂಗಿಕೊಂಡರು. ಯಾರೂ ಮುಂದೆ ಬರಲಿಲ್ಲ, ಬಂದವರು ಅರ್ಧ ಮರವನ್ನೇರಿ ಜಾರಿದಂತಾಗಿ ಹಿಂದಿರುಗಿದರು. ಅಲ್ಲೇ ಇದ್ದ ಗೌರಿಯ ಪ್ರಿಯಕರ, ಜಯರಾಮು ವೇಗವಾಗಿ ಸರಸರನೇ ಶೂಲವನ್ನು ಏರಿ, ತನ್ನನ್ನೇ ದ್ವೇಷಿಸುತ್ತಿದ್ದ ಪುಟ್ಟಸ್ವಾಮಿಗೆ "ಬಿಗಿಯಾಗಿ ಹಿಡಿದುಕೊ, ಕಣ್ಣುಬಿಡು, ಪ್ರಾಣ ಒತ್ತೆಯಿಟ್ಟಾದರು ನಿನ್ನನ್ನು ಕಾಪಾಡುತ್ತೇನೆ" ಎಂದು ಹೇಳಿದ ಮೇಲೆ ಪುಟ್ಟಸ್ವಾಮಿ ಕಣ್ಣು ಬಿಡುತ್ತಾನೆ. ಆತನನ್ನು ಕೆಳಗಿಳಿಸಿ ಜಯರಾಮು ರಕ್ಷಿಸುತ್ತಾನೆ. ಇದನ್ನು ಕಂಡ ಊರ ಜನ ಕೂಗಾಡುತ್ತಾರೆ. ಜಯರಾಮು ಉತ್ಸಾಹದಲ್ಲಿ ಮತ್ತೆ ಶೂಲವನ್ನು ಏರಿ ಬಾರೀ ರಭಸ ದಿಂದ ಅತ್ತಇತ್ತ ಮರವನ್ನು ಬಾಗಿಸುತ್ತಾ ಆಡ ತೊಡಗುತ್ತಾನೆ.

ಮೇಲಿನಿಂದ ನೋಡಿದಾಗ ತನಗೆ ಸೇರಬೇಕಾದ ಗೌರಿಯನ್ನು ಆಕೆಯೊಂದಿಗೆ ಮದುವೆ ನಿಶ್ಚಿತವಾದ ಶಂಕರ ನೋಡುತ್ತಿರುವುದನ್ನು ಕಂಡು ಜಯರಾಮು ಮತ್ತಷ್ಟು ರಭಸವಾಗಿ ಶೂಲವನ್ನು ಆಡುತ್ತಾನೆ. ಇದರಿಂದ ಶೂಲದ ಮರ ಮುರಿದು, ಕೆಳಗೆ ಬಿದ್ದು ಜಯರಾಮು ಸಾಯುತ್ತಾನೆ. ಅಲ್ಲೇ ಇದ್ದ ಜನಗಳ ಮಧ್ಯದಲ್ಲಿ ಬಂದು ರಕ್ತ ಸಿಕ್ತವಾದ ಜಯರಾಮುವಿನ ದೇಹದ ಮೇಲೆ ಬಿದ್ದು ಗೌರಿ ಪ್ರಾಣ ತ್ಯಜಿಸಿದಳು. ಹಿಂದೆಯೇ ತಿಳಿಸಿದ್ದಂತೆ ಅಡಕೆ ಮರದ ನಾರು ಪ್ರಾಣವನ್ನು ಕಾಪಾಡಬಲ್ಲದು. ಕೆಲವೊಮ್ಮೆ ದುರಂತವೂ ಆಗಬಹುದು. ಅದರೂ ಕಾಪಾಡುವುದೇ ಅಡಿಕೆ ಮರದ 'ಶೂಲ'ದ ಉದ್ದೇಶ. ಇಂಥ 'ಶೂಲ-ಬಲಿ' ಹಬ್ಬ ಶ್ರೀರಂಗಪಟ್ಟಣ ತಾಲ್ಲೂಕು ಅರಕೆರೆ ಗ್ರಾಮದಲ್ಲಿ ಹಲವು ವರ್ಷದಲ್ಲಿ ಹಲವುಗಳಿಗೊಮ್ಮೆ ಜರುಗುತ್ತದೆ. ಹಾಗೂ ಮದ್ದೂರು ತಾಲ್ಲೂಕಿನ ತೊರೆಶೆಟ್ಟಿಹಳ್ಳಿ ಮತ್ತು ಸಾದೊಳಲು ಗ್ರಾಮಗಳಲ್ಲಿ ಜರುಗಿದ್ದನ್ನು ಕಂಡುಂಡ ಹಿರಿಯರು ಹೇಳುತ್ತಾರೆ. ದುರಂತ ಪ್ರೇಮಕ್ಕೆ ಬಲಿಯಾಗುವ ಎಷ್ಟೋ ಮನಸ್ಸುಗಳನ್ನು ಕಥೆಯ ಎರಡು ಪಾತ್ರಗಳು ಪ್ರತಿನಿಧಿಸುತ್ತವೆ.

ರಾಮಣ್ಣನವರು ತಮ್ಮ ಕಣ್ಮುಂದೆ ನಡೆಯುವ ಅಥವಾ ತನ್ನ ಕಾಲದ ಆಗು ಹೋಗುಗಳಿಗೆ ಪ್ರತಿಸ್ಪಂದನೆ ನೀಡಿರುವುದನ್ನು ಇಲ್ಲಿ ಕಾಣಬಹದು. ಈ ಶೂಲ ಹಬ್ಬದ ಸಂಪ್ರದಾಯವನ್ನು ಕಟ್ಟಿಕೊಟ್ಟಿರುವುದು ಸಮಂಜಸವಾಗಿದೆ.

ಎಂ. ರಾಮಕೃಷ್ಣ ಅವರ **'ಸಂಕ್ರಾಂತಿ'** ಕಥೆಯಲ್ಲಿ ಗ್ರಾಮೀಣ ಪ್ರದೇಶದಲ್ಲಿ ಕಂಡು ಬರುವ ಸ್ವಾರ್ಥ ಅಸೂಯೆ ಈರ್ಷ್ಯೆಯನ್ನು ಕಾಣಬಹುದು. ಕಥೆಯ ಶೀರ್ಷಿಕೆಯಂತೆ ಸಂಕ್ರಾಂತಿ ಹಬ್ಬದಲ್ಲಿ ನಡೆಯುವ ದುರಂತದ ಕಥೆಯಾಗಿದೆ. ಕಥೆಗಾರರು ಗ್ರಾಮೀಣ ಪ್ರದೇಶದಲ್ಲಿ ನಡೆಯುವ ಹಬ್ಬ ಹರಿದಿನದ ಆಚರಣೆಯನ್ನು ಬಹಳ ಚನ್ನಾಗಿ ಕಥೆಯಲ್ಲಿ ಬಳಸಿಕೊಂಡಿದ್ದಾರೆ. ಒಂದು ಪ್ರದೇಶದ ಸಂಸ್ಕೃತಿಯನ್ನು ಅಲ್ಲಿ ಆಚರಿಸುವ ಸಂಪ್ರದಾಯ ಮತ್ತು ರೂಢಿಗಳಿಂದ ತಿಳಿಯುವುದಕ್ಕೆ ಈ ಕಥೆ ಸಹಕಾರಿಯಾಗಿದೆ.

ಮಾರ್ಗಶಿರದ ಪ್ರಾರಂಭದಲ್ಲಿಯೇ ಗುಡಿಯಲ್ಲಿ ಪೂಜೆ ಪ್ರಾರಂಭ. ಪ್ರತಿ ಮನೆಯವರು ಒಂದೊಂದು ದಿನ ಪೂಜೆಗೆ, ಹಾಗೂ ಪೊಂಗಲಿಗೆ ಬೇಕಾದ ಸಾಮಗ್ರಿ ಒದಗಿಸುವುದು ಪರಿಪಾಠ. ಹುಡುಗರಿಗಂತೂ ಅದೊಂದು ವರ್ಣನಾತೀತ ಮಹಾಸಂಭ್ರಮ. ಅದರ ಮುಂದೆ ಕರಗದ ಬೆರಗು ಏನೇನೂ ಅಲ್ಲ. ಮೊದಲ ಕೋಳಿ ಕೂಗುವ ಹೊತ್ತಿಗಾಗಲೇ ಎದ್ದು ಹಿರಿಯ ತಲೆಗಳು ಹೇಳಿದರೂ ಕೇಳದೆ,

ತೆಕ್ಕೆ ಹಿಡಿಸುವಷ್ಟು ಒಣ ಹುಲ್ಲನ್ನು ತೆಗೆದುಕೊಂಡು ಗುಡಿ ಸೇರಿದ ಹುಡುಗರ ಸೈನ್ಯ. ಸಂಕ್ರಾಂತಿಯ ದಿನ ಕಿಚ್ಚು ಹಾಯಿಸುವುದರೊಂದಿಗೆ ಮುಕ್ತಾಯವಾಗುತ್ತಿತ್ತು. ಅಲ್ಲಿಂದಾಚೆಗೆ ಜನರ ಜೀವನವಾಹಿನಿ ಯಾವ ಏಳುಬೀಳುಗಳಿಲ್ಲದೆ ಹರಿದು ನಡೆಯುತ್ತಿತ್ತು.

ಸಂಕ್ರಾಂತಿ ಬಂತು ಕಿಚ್ಚು ಹಾಯಿಸುವುದು ಒಂದು ವಾರವಿದೆ ಎನ್ನುವಾಗ ಈರಯ್ಯ ಮತ್ತು ಜವರಾಯಿ ಮನೆತನದ ನಡುವೆ ಯಾರು ಮೊದಲು ಕಿಚ್ಚು ಹಾಯಿಸಬೇಕು ಎಂಬ ವಿಷಯವಾಗಿ ಜಗಳ ಸಂಘರ್ಷವೇರ್ಪಡುತ್ತದೆ. "ನೀ ಏನಾರ ಹೇಳು ಸಾಕಿ. ನಾ ಮಾತ್ರ ಈ ಘಟ ಇರೂತನಕ ನಮ್ಮ ಎತ್ತುಗಳನ್ನೇ ಮೊದಲು ಕಿಚ್ಚಾಯಿಸಬೇಕು. ಈ ವರ್ಷ ಹೆದರಿಕಂಡು ಬುಟ್ಟುಬ್ರೆ ಅವಮಾನ ಆಯ್ತದೆ ನೋಡು. ಮಾನಕ್ಕಿಂತ ಪ್ರಾಣ ಹೆಚ್ಚೆ. ನಿನ್ನ ಮಕ್ಕಳ ತಲೆಗೆ ಹೆಂಗಾರ ಮಾಡ್ಕಳ್ಳಿ ಬೇಕಾದ್ರೆ. ಈಗ ಮಾತ್ರ ನಾ ಬುಡೂದಿಲ್ಲ. ತಲೆ ಉಳ್ಳಿದರೂ ಸೈ" (ಎಂ. ರಾಮಕೃಷ್ಣ, ತೇರು ಬಂತು ತವರಿಗೆ, ೧೯೭೦, ಪುಟ-೯೧). ಈ ಮಾತುಗಳು ಸ್ವಪ್ರತಿಷ್ಠೆಯ ಸಂಕೇತವಾಗಿದೆ. ಈರಯ್ಯನಿಗೆ ಸಂಕ್ರಾಂತಿ ಹಬ್ಬ ದಂದು ತನ್ನ ಎತ್ತುಗಳೇ ಮೊದಲು ಕಿಚ್ಚಾಯಿಸಬೇಕು ಎಂಬ ಹಠ. ಈ ರೀತಿಯ ಕಲಹಗಳು ಗ್ರಾಮೀಣ ಪ್ರದೇಶಗಳಲ್ಲಿ ಸಹಜವಾಗಿ ಕಂಡುಬರುತ್ತವೆ.

ಶಾಖವಿರದ ಕಿರಣಗಳು ಜನರ ಉತ್ಸಾಹಕ್ಕೆ ಪ್ರೋತ್ಸಾಹ ನೀಡಿದ್ದುವು. ಸಂಭ್ರಮವೋ ಸಂಭ್ರಮ. ಊರಿಗೇ ಊರೇ ಆತುರ ಕಾತರದಿಂದ ಕೂಡಿದೆ. ಮನೆ ಮನೆಯ ಮುಂದೆ ರಾಸುಗಳಿಗೆ ಆಲಂಕಾರ ನಡೆದಿದೆ. ಪಡಸಾಲೆಯ ಕಂಭವೊರಗಿದ ವೃದ್ಧರಿಗೆ ತಮ್ಮ ಮಕ್ಕಳ ಮೊಮ್ಮಕ್ಕಳ ಕಾರ್ಯಸ್ತುತ್ಯಾರ್ಹವೆನಿಸಿದರೂ ಟೀಕೆ ಮಾಡದೆ ಇರಬಲ್ಲರೆ. "ಬುಡು ಬುಡೋ ಸರಿಯಾಗಿ ಮೇವಿಲ್ಲ, ತಾವಿಲ್ಲ, ಬಣ್ಣದ ಕಾಜಗ ಅಂಟಿಸಿಬುಟ್ರೆ ಆಗೋಯ್ತು ನಾವು ಇಂತ ಕಾಲದೇಲಿ ಹೆಂಗೆ ತಯಾರು ಮಾಡ್ತಿದ್ದೊ ದನಗಳ್ನ. ಇವೂ ಅವೆ ಕಾಪಿ ಟೀ ನೆಕ್ಕಾರು ಕುಡ್ಕಂಡು ಎಂದೋ ಚಂದಾಯ್ತು ಬುಡು ನಮ್ಮಂಗೆ ಸಾಕಬೇಕಾದ್ರೆ ಈಗಿನ ಕಾಲದ ಹೈಕ್ಳು ಕನ್ನಂಬಾಡಿ ನೀರು ಕುಡೀಬೇಕುಕನ ಮೆಯಿಸೊಕೆ ಜಾಗ ಇಲ್ಲ. ಅಂಗೈ ಅಗಲ ಗೋಮಾಳ ಬುಟ್ಟಿದ್ದಾರೆ ಎಲ್ಲಾರ? ಎಲ್ಲಾನೂ ಉತ್ಕಂಡು ಉತ್ಕಂಡು ದುರಾಸೆ ಜನ. ಅದಕ್ಕೆ ಹಿಂಗಾದ್ದು ಮಳೆ ಹೋಗಿ ಬೆಟ್ಟ ಸೇರ್ಕತ್ತು"(ಎಂ. ರಾಮಕೃಷ್ಣ, ತೇರು ಬಂತು ತವರಿಗೆ, ೧೯೭೦, ಪುಟ-೯೭). ಅಂತೂ ಟೀಕೆಗಳಿಗೆ ಮನಕೊಡದೆ ಯುವಕರು ಅಲಂಕಾರ ಮಾಡುವುದರಲ್ಲೇ ಮಗ್ನರಾಗಿದ್ದರು. ಚಿಳ್ಳೆಪಿಳ್ಳೆಗಳಂತೂ ಎಲ್ಲೂ ಕೂರರು, ನಿಲ್ಲರು.

ಒಮ್ಮೆ ಗುಡಿ, ಇನ್ನೊಮ್ಮೆ ಮನೆ. ಮತ್ತೊಮ್ಮೆ ಕಿಚ್ಚು ಹಾಯಿಸುವ ಜಾಗ. ಎಲ್ಲಾ ಕಡೆಗೂ ಓಡಾಡುತ್ತ ಯಾವುದನ್ನೂ ಕಳೆದುಕೊಳ್ಳಲಾರದೆ, ಬರಬೇಕಾದ ಅದ್ಭುತ ವೈಭವ ಮಹಾದೃಶ್ಯ ಅನಿರ್ದಿಷ್ಟವಾಗಿ ತಡ ವಾಗುತ್ತಿದೆಯೆಂದು ಗೊಣಗುತ್ತ, ವೃದ್ಧರ ಕೈಲಿ ಅನ್ನಿಸಿಕೊಂಡು ಅಂಜದೆ ಲಾಳಿಯಾಡುತ್ತಿದ್ದರು.

ಹಬ್ಬ ಹರಿದಿನಗಳೆಂದರೆ ಈಗಿನ ಆಧುನಿಕ ಬದುಕಿನಲ್ಲಿ ಸಂಭ್ರಮ–ಆಚರಣೆ ಆಸಕ್ತಿಗಳು ಕಡಿಮೆ ಎನ್ನುವುದನ್ನು ಬಹಳ ಖಚಿತವಾಗಿ ಮತ್ತು ಸೂಕ್ಷ್ಮವಾಗಿ ಕಥೆಗಾರರು ವಿವರಿಸಿದ್ದಾರೆ. ಗೋಮಾಳಗಳ ಬಗ್ಗೆ ಪ್ರಸ್ತಾಪವಾಗಿರುವುದು ಪ್ರಸ್ತುತವಾಗಿದೆ. ಕಾರಣ ಗೋಮಾಳ ಮತ್ತು ಕೆರೆ ಒತ್ತುವರಿಗಳು ಸ್ವಾರ್ಥ ಮತ್ತು ಹಣದ ಆಸೆಯಿಂದ ಹೆಚ್ಚಾಗುತ್ತಿರುವುದು ವಾಸ್ತವಿಕ ಅಂಶವಾಗಿದೆ. ಕೃಷಿಯಲ್ಲಿ ಯಂತ್ರಗಳ ಬಳಕೆ ಬಂದು ರಾಸುಗಳು ತೀರ ಕಡಿಮೆಯಾಗಿವೆ. ಹಿಂದೆ ಗೋ ಸಾಕಾಣಿಕೆ ಸಮಸ್ಯೆಯೇ ಆಗಿರಲಿಲ್ಲ. ಹುಲ್ಲುಮೇದು, ನೀರು ಕುಡಿದು ಬದುಕಿ ಬೆಳೆಯುವ ಗೋಸಂಕುಲ ರೈತರಿಗೆ ಬೆನ್ನೆಲುಬಾಗಿತ್ತು. ಇವು ಕೃಷಿಕಾರ್ಯ, ಸಾಗಾಣಿಕೆ, ನೀರಾವರಿ, ಗಾಣ, ಉಳುಮೆ ಇತ್ಯಾದಿ ಕೆಲಸಗಳಿಗೆ ಹೆಗಲು ಕೊಟ್ಟವು. ಇವುಗಳ ಸಗಣಿ ಉತ್ಕೃಷ್ಟ ಗೊಬ್ಬರವಾಯಿತು. ಇವುಗಳ ಉಪಕರಣಕ್ಕೆ ಸಂಕ್ರಾಂತಿ ಹಬ್ಬದಂದು ಸಿಂಗರಿಸಿ ಊರ ಬೀದಿಗಳಲ್ಲಿ ಮೆರವಣಿಗೆ ಮಾಡಿ ಆರತಿ ಬೆಳಗುತ್ತಿದ್ದರು. ಹಾಲು ಮತ್ತು ಅದರ ಉತ್ಪನ್ನಗಳು ಮಾನವ ಕುಲಕ್ಕೆ ಆಹಾರವಾಗಿತ್ತು. ಅವು ಸತ್ತನಂತರವೂ ಅವುಗಳ ಚರ್ಮವೂ ಉಪಯೋಗಕ್ಕೆ ಬರುತ್ತದೆ. ಗೋಸಂಪತ್ತೇ ನಾಡಿನ ಸಂಪತ್ತು ಎಂದು ನಂಬಿದ್ದ ಈ ದೇಶದಲ್ಲಿ ಅವುಗಳಿಗೆ ಮೀಸಲಾದ ಗೋಮಾಳಗಳೇ ಪರಭಾರೆಯಾದವು.

ಈ ಕಥೆಯಲ್ಲಿ ಶಕುನ ಅಪಶಕುನಗಳು ಗ್ರಾಮೀಣರ ಬದುಕಿನಲ್ಲಿ ಹಾಸು ಹೊಕ್ಕಾಗಿವೆ. ಒಳ್ಳೆಯ ಶಕುನಗಳು ಉತ್ತಮವೆಂದು ನಂಬಿದ್ದರು ಹಾಗೆಯೇ ಕೆಟ್ಟ ಶಕುನಗಳು ಕಾಣಿಸಿಕೊಂಡರೆ ದುರಂತ ಸಂಭವಿಸುವುದೆಂದು ನಂಬಿದ್ದರು. ಈರಯ್ಯನ ಹೆಂಡತಿ ಮನೆಗೆ ಹಿಂದಿರುಗದಿದ್ದಾಗ ಈರಯ್ಯನ ತಾಯಿ ಸಾಕವ್ವ ಅಪಶಕುನವೆಂದು ಹೇಳುತ್ತಿದದ್ದನ್ನು ನೆನೆದಳು. "ಅದೇ ಸಾಕಿ ನೆತ್ತೀ ಮೇಲೆ ನಾಕೈದು ಸಾರಿ ಬಿದ್ದವಂತಲ್ಲ ಪಲ್ಲಿ ಸಂದೇಲಿ ಕಾಗೆ ಬೇರೆ ತಲೆ ಬಡೀತಂತೆ ಅದಕ್ಕೇ ಮುಂದಿನ ಸನಿವಾರ ಸನಿಮಾತ್ಮನ ಕಥೆ ಓದಿಸುವಾ ಅಂತ ನಿಂಗೆ ಹೇಳೂವ ಅಂತಿದ್ದೆ"(ಎಂ. ರಾಮಕೃಷ್ಣ, ತೇರು ಬಂತು ತವರಿಗೆ, ೧೯೭೦, ಪುಟ – ೧೦೧). ಈ ವಿವರಣೆಯಲ್ಲಿ ಪಲ್ಲಿ ಹಾಗೂ ಕಾಗೆಗಳು ಅಪಶಕುನವೆಂದು ನಂಬಿದ ಗ್ರಾಮೀಣರು ಪರಿಹಾರವಾಗಿ

ಶನಿಮಾತ್ಮನ ಕಥೆ ಓದಿಸುವ ಸಂಪ್ರದಾಯವು ರೂಢಿಯಲ್ಲಿದೆ. ಸಂಕ್ರಾಂತಿ ಹಬ್ಬದ ಹಿನ್ನೆಲೆಯಲ್ಲಿ ಕಥೆಗಾರರು ಗ್ರಾಮೀಣ ಬದುಕನ್ನು ಬಹಳ ಸೂಕ್ಷ್ಮವಾಗಿ ಗ್ರಹಿಸಿ ಕಥೆಗೆ ಒಳಪಡಿಸಿದ್ದಾರೆ.

ಸಾಕವ್ವ ತಾನು ಸೊಪ್ಪು ತರಲು ಹೋಗುವ ದಾರಿಯಲ್ಲಿ ಎಷ್ಟೇ ಅಪಶಕುನಗಳಾದರೂ ಲೆಕ್ಕಿಸದೆ ಮುನ್ನಡೆಯುತ್ತಾಳೆ. ಸೊಪ್ಪು ತರುವ ಭರದಲ್ಲಿ ಕಾಲು ಜಾರಿ ಬಾವಿಗೆ ಬಿದ್ದು ಪ್ರಾಣಬಿಡುತ್ತಾಳೆ. ಯಜಮಾನ ಈರಯ್ಯನವರ ದ್ವೇಷ, ಅಸೂಯೆ, ವೈರತ್ವ ಅವರ ಬಾಳ ಸಂಗಾತಿಯನ್ನು ಬಲಿತೆಗೆದುಕೊಳ್ಳುವುದರ ಮೂಲಕ ಕಥೆ ಮುಕ್ತಾಯವಾಗುತ್ತದೆ.

ಭಾರತೀಯ ಸಮುದಾಯದಲ್ಲಿ ಸಾಂಸ್ಕೃತಿಕವಾಗಿ ಹಬ್ಬ ಆಚರಣೆಗಳು ಸಂಪ್ರದಾಯವಾಗಿ ನಡೆದು ಬಂದಿವೆ. ಬಹುತೇಕ ಹಬ್ಬಗಳು ಕೃಷಿಗೆ ಹಾಗೂ ಪ್ರಾಕೃತಿಕಕ್ಕೆ ಸಂಬಂಧಿಸಿದೆ. ಕಥೆಗಾರರು ತಮ್ಮ ಪ್ರಾದೇಶಿಕ ನೆಲೆಯಲ್ಲಿ ಕಂಡುಬರುವ ದೀಪಾವಳಿ ಹಬ್ಬದ ಆಚರಣೆಯನ್ನು ವಿವರಿಸುವ ಕಥೆ **'ದೀವಳಗೆ'**.

ಈ ಕಥೆಯಲ್ಲಿ ಜೀತದಾಳಾಗಿ ದುಡಿಯುವ ಸಿದ್ಧಣ್ಣನ ಕುಟುಂಬದ ಜೊತೆಗೆ ದೀಪಾವಳಿ ಹಬ್ಬವನ್ನು ಆಚರಿಸುವ ರೀತಿಯನ್ನು ಗುರುತಿಸಬಹುದು. ಊರ ಗುಡಿಯ ಮುಂದೆ ಹಾರೆಯಿಂದ ಗುಂಡಿ ತೋಡಿ ತ್ರಿಕೋನ ಆಕಾರದ ರೀಪೀಸು ಪಟ್ಟಿಯನ್ನು ಆಕಾಶ ಕಂಬದ ತುದಿಗೆ ಹುರಿಯಿಂದ ಬಿಗಿದು ಕಟ್ಟಲಾಗುತ್ತದೆ. ಪಟ್ಟಿಯ ತುದಿಗೆ ಬಿಳಿ ಬಾವುಟ ಹಾಗೂ ಮಾವಿನ ಸೊಪ್ಪು ಕಟ್ಟುವುದು. ಪಟ್ಟಿಯ ಒಂದು ಕಡೆಗೆ ಕಬ್ಬಿಣದ ಚಿಕ್ಕ ರಾಟೆಯನ್ನು ಕಟ್ಟಿ ಅದರೊಳಗೆ ಸೆಣಬಿನ ಹುರಿಯನ್ನು ತೂರಿಸಿ ಅರ್ಧಭಾಗ ಎಳೆಯುವುದು. ಆಕಾಶ ಕಂಬಕ್ಕೆ ನಾಲ್ಕಾರು ಕಡೆ ಸುಣ್ಣದ ಪಟ್ಟೆ, ಕೆಮ್ಮಣ್ಣು ಪಟ್ಟೆ ಬಳಿಯುವರು. ಕಂಬದ ತಾಳನ್ನು ಗುಂಡಿಯ ಅಂಚಿಗಿಟ್ಟು ಜಲ್ಲಿ ಕಲ್ಲುಗಳನ್ನು ಆಯ್ದು ತಂದು ಕಂಬದ ಸುತ್ತಾ ಗುಂಡಿಯೊಳಗೆ ಹಾಕಿ ಮತ್ತು ಅದರ ಮೇಲೆ ಮಣ್ಣು ಹಾಕಿ ಬಿಗಿ ಮಾಡುವರು. ಕಂಬದ ತಾಳಿಗೆ ಬಾಳೆ ಕಂದು, ಕಬ್ಬಿನ ಜಲ್ಲೆ ಕಟ್ಟುವರು.

ಬೋರಪ್ಪನ ಗುಡಿಯ ಮೇಲೆ ದೀಪೋತ್ಸವ. ಗುಡಿಯ ಮೇಲ್ಭಾಗದ ಸುತ್ತ ಕೈಎಣ್ಣೆ ದೀಪಗಳ ಸಾಲು ಸಾಲು. ಗೋಪುರದ ಮೇಲೆಲ್ಲಾ ಬೆಳಗುತ್ತಿದ್ದ ದೀಪಗಳು ಕಣ್ಣಿಗೆ ರಾಚುತ್ತಿದ್ದವು. ಮೂಡಲ ದಿಕ್ಕಿನಲ್ಲಿ ನಿಂತು ಪೂಜೆ ಮಾಡಿದ ಪೂಜಾರಪ್ಪ.

ಈ ಕಥೆಯಲ್ಲಿ ಜಾನಪದೀಯ ಅಂಶಗಳನ್ನು ಸೇರಿಸುವ ಮೂಲಕ ಜನಪದೀಯ ಬದುಕಿನಲ್ಲಿ ದೇಶೀಯ ಪವಾಡಪುರುಷರು ಹೇಗೆ ನೆಲೆಕಂಡುಕೊಂಡಿದ್ದಾರೆ ಎಂಬ ವಿಚಾರಗಳನ್ನು ನಾವು ಗಮನಿಸಬಹುದು.

ಆನು ಮಲೆ, ಜೇನುಮಲೆ, ಮುದ್ದುಮಲೆ
ಗುಂಜೆಮಲೆ ಗಲಗಂಜಿ ಮಲೆ, ಎಪ್ಪತ್ತೇಳು ಮಲೆಯಲ್ಲಿ
ತಪ್ಪದೆ ನಾಟ್ಯವಾಡುವಂತ
ನಮ್ಮ ಮುದ್ದು ಮಾದಪ್ಪನ ಪಾದಕ್ಕೆ ಒಂದು ಸಾರಿ ಉಘೇ

ಅನ್ನಿ ಎಂದು ಮಲೆಯ ಮಾದೇಶ್ವರನ ಮಹಿಮೆಯನ್ನು ಕೊಂಡಾಡಿದ ಪೂಜಾರಪ್ಪ. ಗ್ರಾಮೀಣ ಪ್ರದೇಶಗಳಲ್ಲಿ ಹಬ್ಬ-ಹರಿದಿನಗಳನ್ನು ಆಚರಿಸುವುದೆಂದರೆ ಅದು ಕುಟುಂಬವೊಂದಕ್ಕೆ ಮಾತ್ರ ಸೀಮಿತವಾದದ್ದಲ್ಲ; ಅದು ಊರಿಗೆ ಸಂಬಂಧಿಸಿದ್ದು ಪ್ರಮುಖ ಊರಿನ ವ್ಯಾಪ್ತಿಗೆ ಸೇರುವ ಹಲವು ಊರುಗಳವರೂ ಒಟ್ಟಿಗೇ ಸೇರಿ ಆಚರಿಸುವ ಹಬ್ಬಗಳೂ ಇವೆ. ಮನೆಮನೆಗಳಿಗೆ ಇಂತಿಷ್ಟು ಧವಸ, ಧಾನ್ಯ, ಕಾಣಿಕೆಗಳನ್ನು ಸಂಗ್ರಹಿಸಿ ಗುಡಿಗಳ ಹತ್ತಿರ ಅಥವಾ ತೋಪುಗಳಲ್ಲಿ ಅಡಿಗೆ ಮಾಡಿ ಎಡೆಯಿಟ್ಟು ಪೂಜಿಸಿ ಸಾಮೂಹಿಕ ಭೋಜನ ಮಾಡುವುದು 'ಊರೋಟ್ಟಿನ ಹಬ್ಬ'ವಾದರೆ, ಗುಡಿ ಎದುರು ಮನೆಗೊಂದರಂತೆ ಅವರವರೇ ಮಡೆಉದ್ದು ಆಚರಿಸುವುದು ಹಬ್ಬದ ಇನ್ನೊಂದು ಕ್ರಮ. ಮನೆಗಳಲ್ಲೇ ಅಡುಗೆ ಮಾಡಿ ಆರತಿ, ಮಡೆ, ಹಣ್ಣುಕಾಯಿ, ಬಂಡಿಗಳೊಂದಿಗೆ ವಾದ್ಯಸಮೇತ ಗುಡಿ ಬಳಿಗೆ ಮೆರವಣಿಗೆಯಲ್ಲಿ ಬಂದು ದೇವರಿಗೆ ಎಡೆ ಇಟ್ಟು ಪೂಜಿಸಿ ಮರಳಿಬಂದು ಅವರವರ ಮನೆಯಲ್ಲಿಯೇ ನೆಂಟರಿಷ್ಟರೊಡನೆ ಊಟ ಮಾಡುವುದು ಹಬ್ಬದ ಮತ್ತೊಂದು ಕ್ರಮ.

ಮಾಸ್ತವ್ವನ ಆತ್ಮ ವೃತ್ತಾಂತ ಮಾಸ್ತಿ ಕಲ್ಲಿನ ಚರಿತ್ರೆಯನ್ನು ಕಟ್ಟಿಕೊಡುವ ಬೋರೇಗೌಡ ಚಿಕ್ಕಮರಳಿ ಅವರ **'ಮಾಸ್ತವ್ವನ ಆತ್ಮ ವೃತ್ತಾಂತ'** ಕಥೆಯು ಚರಿತ್ರೆಯ ಒಳಗೆ ಸೇರಿ ಮಹಾಸತಿಯಾದವರು ಮತ್ತು ಅವರ ನೆನಪಿನಲ್ಲಿ ನೆಟ್ಟ ಕಲ್ಲುಗಳೂ ಇಂದು ಮಾಸ್ತಿ ಕಲ್ಲಾಗಿ ಅದು ಊರಿನ ಹೆಣ್ಣು ಮಗಳೊಬ್ಬಳ ಕಥೆಯಾಗಿ ಅವಳು, ಊರಿಗೆ ಅವ್ವ ಅಥವಾ ಅಮ್ಮನಾಗಿ ಮಾಸ್ತಮ್ಮನಾಗಿರುವುದು ಕಂಡುಬರುತ್ತದೆ. ಇಂತಹ ಘಟನೆಯೊಡನೆ ಅಂದಿನ ಸಮಾಜದ ನಡಾವಳಿಗಳನ್ನು ಬಹುತೇಕ ಊರಿನ ಕಾವಲು ದೇವತೆ ಮಾರಮ್ಮ, ಮಾಸ್ತಮ ಇತರ ದೇವರುಗಳ ಇರುವುದನ್ನು ಕಾಣಬಹುದು. ಇಂತಹ ಒಂದು ಊರಿನ ದೇವತೆಯ ಕಥೆಯನ್ನು

ಕಥೆಗಾರರಾದ ಬೋರೇಗೌಡ ಚಿಕ್ಕಮರಳಿ ಅವರು ತಮ್ಮ ಕಥೆಯಲ್ಲಿ ಚಿತ್ರಿಸುವುದರ ಜೊತೆಗೆ ಗ್ರಾಮ್ಯ ಪ್ರದೇಶದ ದುಡಿಮೆಯ ಹೆಣ್ಣುಮಗಳೊಬ್ಬಳ ಬದುಕನ್ನು ಚಿತ್ತರಿಸಿದ್ದಾರೆ. "ಸತ್ತ ಗಂಡನಿಗೆ ಮಾಸ್ತಿಯಾಗಿ ಸಾಯುವುದೇನು? ಸತ್ತ ಗಂಡನಿಗೆ ಮಾಸ್ತಿಯಾಗಿ ಬದುಕವುದು. ಬದುಕಿರುವ ಗಂಡನಿಗೂ ಮಾಸ್ತಿಯಾಗಿ ಬಾಳುವುದು ನಮ್ಮಂಥವರ ಹಣೆಬರಹ"(ಬೋರೇಗೌಡ ಚಿಕ್ಕಮರಳಿ, ಗೋಡೆಗಳ ನಡುವೆ, ೨೦೦೭, ಪುಟ -೧೧೪). ಇಲ್ಲಿ ಹೆಣ್ಣು ಮಗಳೊಬ್ಬಳು ಗಂಡ ಯುದ್ಧದಲ್ಲಿ ಸತ್ತಾಗ ತಾನು ಕೂಡ ಚಿತೆ ಏರುತ್ತಿದ್ದಳು. ಆ ನೆನಪಿಗಾಗಿ ಮಾಸ್ತಿಕಲ್ಲನ್ನು ನೆಡಲಾಗುತ್ತಿತು. ಆದರೆ ಈಗ ಕಾಲ ಬದಲಾಗಿದೆ ಬದುಕಿರುವ ಗಂಡ ಸಂಸಾರ ಜವಾಬ್ದಾರಿಯಿಲ್ಲದೆ, ಮನೆಯ ಹೆಣ್ಣು ಮಗಳೆ ಸಂಸಾರದ ನೊಗವನ್ನು ಹೊರುವುದರಿಂದ ಕಷ್ಟ ಜೀವಿಯಾಗಿ ಬದುಕು ನಡೆಸುವ ಸಂದರ್ಭ ಒದಗಿದೆ. ಬದುಕಿರುವ ಗಂಡನಿಗೂ ಮಾಸ್ತಿಯಾಗಿ ಬಾಳುವುದು ಕಥೆಯಲ್ಲಿ ನಿರೂಪಿತವಾಗಿದೆ.

ಕಥಾನಾಯಕಿ ಮಾಸ್ತಮ್ಮ ತನ್ನ ಮಾವ ಹೇಳುತ್ತಿದ್ದ ಮಾತುಗಳನ್ನು ನೆನೆಯುವ ಮೂಲಕ ಕಥೆಗಾರರು ಪಾಂಡವಪುರ ತಾಲ್ಲೂಕಿನ ಮಡಕೆಪಟ್ಟಣದ ಗ್ರಾಮ ದೇವರ ಆಚಾರ-ವಿಚಾರಗಳನ್ನು ವಿವರಿಸುತ್ತಾರೆ. ಮಾಸ್ತಮ್ಮ ಮಡಕೆ ಪಟ್ಟಣದ ವೀರಭದ್ರನ ಒಕ್ಕಲಿನವರು. ವೀರಭದ್ರ ಮನೆದೇವರು. ಪ್ರತೀ ಸೋಮವಾರ ಮನೆ ಗುಡಿಸಿ ಸಾರಿಸಿ, ಪಾತ್ರೆ ಪಗಡೆ ತೊಳೆದು ಪೂಜೆ ಮಾಡುವುದು, ಕಾರ್ತಿಕಮಾಸದ ಮೊದಲನೇ ಸೋಮವಾರ ವೀರಭದ್ರನಿಗೆ ಮನೆಯ ಮೊದಲ ಪೂಜೆ. ಶಿವರಾತ್ರಿಯಂದು ಮನೆಯಲ್ಲಿ ಹಬ್ಬದ ವಾತಾವರಣ. ಎಂಟು ದಿನ ಮುಂಚಿನಿಂದಲೂ ದುಂಬು ಧೂಳು ಹೊಡೆದು ಮನೆಯನ್ನು ಅಚ್ಚುಕಟ್ಟು ಮಾಡುವುದು. ಅಟ್ಟದ ಮೇಲಿನ ವಸ್ತುಗಳನ್ನೆಲ್ಲ ಕೆಳಗಿಳಿಸಿ ಶುಚಿಮಾಡಿ ಪುನಃ ಅಲ್ಲಲ್ಲೇ ಇಡುವುದು. ಸುಣ್ಣ ಬಣ್ಣ, ಹೀಗೆ ಒಂದು ವಾರಕಾಲ ಬಿಡುವಿಲ್ಲದ ಕೆಲಸ. ಮನೆಯ ಹೆಂಗಸರಿಗೆಲ್ಲಾ ಮೈಕೈ ನೋವು ಬರುವಷ್ಟು ಕೆಲಸ. ಕನ್ನಾಂಬಾಡಿಯ ನೀರು ಬಂದ ಮೇಲೆ ಬೇರೆ ಬೇರೆ ಊರಿಗೆ ಹೋಗಿ ಸೇರಿಕೊಂಡವರೆಲ್ಲಾ ಶಿವರಾತ್ರಿಯ ದಿನ ಒಟ್ಟಿಗೆ ಸೇರಿ ಒಂದು ರಾತ್ರಿ, ಮಾರನೆಯ ಒಂದು ಹಗಲು ಪೂಜೆಪುನಸ್ಕಾರ ಪರ ಅಂತ ಮಾಡಿ ಹೋಗುತ್ತಾರೆ. ಹಿಂದಿನ ಕಾಲದಲ್ಲಿ ಕೊಂಡಬಂಡಿಯೂ ಇದ್ದು ಈಗ ಇದೆಲ್ಲಾ ನಿಂತು ಹೋಗಿದೆ. ಅರಸರ ಕಾಲದಲ್ಲಿ ಕಾಲುವೆ ನಿರ್ಮಿಸಿದ ಮೇಲೆ ಕಾಲುವೆಯ ನೀರು ಬಂದು ಮಡಕೆಪಟ್ಟಣ ಮುಳುಗಡೆಯಾಯಿತು. ಇದು ಪಾಳೇಗಾರರ ಬೀಡಾಗಿತ್ತು ಎಂದು ನಂಬುವ

ದೊಡ್ಡ ಊರಾದ ದೊಡ್ಡ ಮರಡಿಯಲ್ಲಿ ಈಗ ಮಾಸ್ತಮ್ಮನ ವಾಸ. ಪಾಳೆಗಾರರ ಬೀಡಾಗಿದ್ದರಿಂದ ಊರ ಸುತ್ತ ಕೋಟೆಯು ಇತ್ತಂತೆ. ಊರಿನಲೆಲ್ಲ ಅದೆಷ್ಟು ದೇವರ ಮನೆಗಳು! ಹುಲ್ಲು ಜೋಪಡಿಗಳೇದೇವರ ಮನೆಗಳು ಊರಿನ ಹೆಬ್ಬಾಗಿಲು ಈಗಲೂ ಎತ್ತರವಾಗಿದೆ. ಮಾರಮ್ಮನ ಗುಡಿಯ ಮುಂದೆ ಕಲ್ಲಿನ ಮಂಟಪ, ಮಂಟಪದ ಮೇಲೆ ಎತ್ತರದ ಗೋಪುರ. ಗೋಪುರದ ಸುತ್ತ ದೇವರುಗಳ ಶಿಲ್ಪ, ಬಲಿಪೂಜೆ, ಸಿಡಿ ಮೊದಲಾದವು ನಡೆದಿರಬೇಕು ಈಗ ಯಾವುದು ಇಲ್ಲ. ಹದಿನೈದು ಇಪ್ಪತ್ತು ವರ್ಷಕ್ಕೆ ಒಮ್ಮೆ ನೆನಪಾದಂತೆ ದೊಡ್ಡ ಹಬ್ಬ ಅಂತ ಮಾಡುತ್ತಾರೆ.

ಮಾಸ್ತಮ್ಮನ ಒಡಬಾಳನ್ನು ವಿವರಿಸುವಾಗ ಊರಿನ ರೀತಿ-ನೀತಿ, ದೇವಾಲಯಗಳ ಪರಿಚಯ ಮಾಡುತ್ತಾರೆ. ಪ್ರತಿಯೊಂದು ಗ್ರಾಮೀಣ ಪ್ರದೇಶಗಳು ಜಾನಪದ ನಂಬಿಕೆಗಳ ಪ್ರಕಾರ ಊರ ರಕ್ಷಣೆಗೆಂದು ವೀರಭದ್ರ ಅಥವಾ ಹನುಮಂತನ ಗುಡಿಗಳಿರುತ್ತವೆ.

ಯಾವುದೇ ಜಾತಿಯ, ಧರ್ಮದ ಹಿನ್ನೆಲೆಯುಳ್ಳ ಪ್ರತಿಯೊಬ್ಬ ವ್ಯಕ್ತಿಯು ತನ್ನ ದೈವವನ್ನು ನಂಬುತ್ತಾನೆ. **'ಹರಕೆಯ ಹಣ'** ಬೆಸಗರಹಳ್ಳಿ ರಾಮಣ್ಣ ಅವರು ಕಥೆಯಲ್ಲಿ ಸಾಮಾನ್ಯವಾಗಿ ಊರು ಎಂದ ಮೇಲೆ ಗುಡಿಗಳು ಇರುವುದು ಸರ್ವೆಸಾಮಾನ್ಯ. ಹಾಗೆಯೇ ಈ ಕಥೆಯಲ್ಲಿ ಬರುವ ಮಲ್ಲನಾಯ್ಕನಹಳ್ಳಿಯಲ್ಲಿ ಮೂರು ಹೆಣ್ಣು ದೇವತೆಗಳು ದಂಡಿಗನಮ್ಮ ಒಕ್ಕಲಿಗರ ದೇವರಾದರೆ, ಮಾಸ್ತಮ್ಮ-ಹುಚ್ಚಮ್ಮ, ಅಥವಾ ಮಾರಮ್ಮ ದಲಿತರ ದೇವರುಗಳು, ಈ ಮೂರು ಗುಡಿಗಳಿಗೂ ಹರಿಜನರೇ ಪೂಜೆ ಮಾಡುವುದು, ತೀರ್ಥ ಕೊಡುವುದು ನಡೆದಿದೆ. ಗ್ರಾಮೀಣ ಪ್ರದೇಶಗಳಲ್ಲಿ ತಮ್ಮ ಪೂರ್ವಿಕರು ನಡೆಸಿಕೊಂಡು ಬಂದ ಸಂಪ್ರದಾಯ ರೂಢಿಗಳನ್ನು ಬಹಳ ಭಯಭಕ್ತಿಯಿಂದ ಮುಂದಿನ ಪೀಳಿಗೆಗೆ ನಡೆಸಿಕೊಂಡು ಹೋಗುವುದನ್ನು ಈ ಕಥೆಯಲ್ಲಿ ಕಾಣಬಹುದು. ಮೇಲು ಜಾತಿಯವರಿಗೆ ದಂಡಿಗನಮ್ಮನ ಗುಡಿಯ ಸುತ್ತ ಕೂರಿಸಿ ಊಟ ಹಾಕಿ, ಉಳಿದ ಆಹಾರವನ್ನು ಹರಿಜನರಿಗೆ ನೀಡುವುದು ಇತ್ತು. ಈ ಕಥೆಯಲ್ಲಿ ಬಲಿ ಪದ್ಧತಿಯನ್ನು ಕಾಣಬಹುದು. ಆಡು ಕುರಿಗಳು ಜೊತೆಗೆ ಹಂದಿಗಳನ್ನು ದೇವರ ಹೆಸರಿನಲ್ಲಿ ಬಲಿಕೊಟ್ಟು ಪೂಜಿಸುವುದು ಈ ಹಳ್ಳಿಯ ಜನರ ನಂಬಿಕೆಯಾಗಿದೆ.

ಸಮಾಜದ ಒಳಗೆ ಕುಟುಂಬವೊ, ಕುಟುಂಬದೊಳಗೆ ಸಮಾಜವೋ ಇದು ಸಮಾಜಶಾಸ್ತ್ರಜ್ಞರ ಚರ್ಚೆಗೆ ಬಿಟ್ಟಿದ್ದು, ಆದರೆ ಸಮಾಜ ಮತ್ತು ಕುಟುಂಬ ಎರಡರಲ್ಲೂ ಬದುಕುತ್ತಿರುವವ ಮನುಷ್ಯ ದಿನಚರಿಯಲ್ಲಿ ಬರುವ ಹುಟ್ಟು, ಸಾವು

ಮಧ್ಯದಲ್ಲಿ ಬಾಲ್ಯ, ಯೌವ್ವನ, ಮುಪ್ಪು ಇವುಗಳ ಚೌಕಟ್ಟಿನಲ್ಲಿ ಮಾನವನ ಬದುಕು ಸಾಗುತ್ತದೆ. 'ಸಂಸ್ಕೃತಿ' ಎಂಬುದು ಒಂದು ಗುಂಪಿನ ಅಥವಾ ಸಮಾಜ ಹಿನ್ನಲೆಯಲ್ಲಿ ಬರುವಂತದ್ದು. 'ಗರ್ಜನೆ' ಕಥೆಯಲ್ಲಿ ಪಾರ್ವತಿ ಎಂಬ ಹೆಣ್ಣು ಮಗಳು ಬಾಲ್ಯದಿಂದ ಯೌವ್ವನಕ್ಕೆ ಕಾಲಿಡುವ ಸಂದರ್ಭವನ್ನು ಕಥೆಯಲ್ಲಿ ಗುರುತಿಸಬಹುದು. ಇದೊಂದು ದೈಹಿಕ ಪ್ರಕ್ರಿಯೆ. ಆದರೆ ನಮ್ಮ ಸಮಾಜ ಅದರಲ್ಲೂ ಗ್ರಾಮೀಣ ಪ್ರದೇಶಗಳಲ್ಲಿ ಇದು ಒಂದು ವಿಶೇಷತೆಯೇ ಆಗಿದೆ. ಈ ಕ್ರಿಯೆಯನ್ನು 'ಮೈನೆರೆಯುವುದು ಎಂಬುದಾಗಿ ಬಿಂಬಿಸಲಾಗುತ್ತದೆ'. ಸಂಪ್ರದಾಯದಂತೆ ಈ ಕಥೆಯಲ್ಲಿ ಬರುವ ಪಾರ್ವತಿಗೆ ಮಡಿಲಗೆ ಕೊಬ್ಬರಿ, ಅಕ್ಕಿ ಬಿಗಳ ತುಂಬಿಸಿ ಸೊಪ್ಪಿನ ಗುಡಿಸಿಲಿನಲ್ಲಿ ಕೂರಿಸುವರು. ಇದನ್ನು 'ಗುಡ್ಲು' ಕೂಡುವುದು ಎನ್ನುವರು. ಇವತ್ತಿಗೂ ಕೆಲವು ಗ್ರಾಮೀಣ ಪ್ರದೇಶಗಳಲ್ಲಿ ಈ ಸಂಪ್ರದಾಯವಿರುತ್ತದೆ. ಇಲ್ಲಿ ಕಥೆಗಾರರು ಕೇವಲ ಕಥೆಯನ್ನು ಮಾತ್ರ ಪರಿಗಣಿಸದೆ ಸುತ್ತಲಿನ ಸಂಪ್ರದಾಯಗಳನ್ನು ತಮ್ಮ ಕಥೆಯೊಳಗೆ ನಿರೂಪಿಸಿದ್ದಾರೆ. (ಸೊಪ್ಪಿನಿಂದ ಕೂಡಿದ ಗುಡ್ಲು ವೈಜ್ಞಾನಿಕ ಎಂಬುದು ರುಜುವಾತಾಗಿದೆ. ಇಂಗಾಲಾಮ್ಲವನ್ನು ಸೊಪ್ಪು ಹೀರಿಕೊಳ್ಳುತ್ತದೆ. ಇದನ್ನೇ ಮೈಲಿಗೆ ತೆಗೆಯುವುದು ಎನ್ನಲಾಗುತ್ತದೆ.)

ಹೆಣ್ಣು ಮಕ್ಕಳು ಮೈನೆರೆಯುವುದು ಎಂಬ ವಿಚಾರವಾಗಿ ಸಾಕಷ್ಟು ವೈಜ್ಞಾನಿಕ ಹಿನ್ನೆಲೆಗಳನ್ನು ನೀಡಿದರೂ ಸಹ, ನಮ್ಮ ಸಮುದಾಯವು ಹಲವು ನಂಬಿಕೆಯಿಂದ ಮೈನೆರೆದ ಹೆಣ್ಣು ಮಕ್ಕಳನ್ನು ಊರಿಂದ ಹೊರಗೆ ಇರಿಸುತ್ತಾರೆ. ಇದು ವಿಶೇಷವಾಗಿ ಗೊಲ್ಲರಹಟ್ಟಿಗಳಲ್ಲಿ ಕಾಣಬರುತ್ತದೆ. ಮನೆಯಲ್ಲಿ ಅವರಿಗೆ ಸ್ವತಂತ್ರವಿಲ್ಲದೆ ಹಬ್ಬ- ಹರಿದಿನಗಳಲ್ಲಿ, ಪೂಜೆಗಳಲ್ಲಿ ಪ್ರತ್ಯೇಕವಾಗಿ ಇರಿಸುವುದು ಸಾಮಾನ್ಯವಾಗಿದೆ.

**'ಆಕ್ರಮಣ'** ನಾಗಮಂಗಲ ಕೃಷ್ಣಮೂರ್ತಿ ಅವರ ಕಥೆಯಲ್ಲಿ ಪ್ರಾದೇಶಿಕವಾಗಿ ನಡೆದುಕೊಂಡು ಬಂದಿರುವ ಸಂಪ್ರದಾಯವನ್ನು ಸೂಕ್ಷ್ಮವಾಗಿ ಗ್ರಹಿಸಿದ್ದಾರೆ. ಕಥೆಯಲ್ಲಿ ಬರುವ ಹಿರಿಕೆರೆ ಬರಗಾಲದಿಂದ ನೀರಿಲ್ಲದೆ ಬಣಗುಟ್ಟಿತ್ತು. ಹಿರಿಕೆರೆ ಹಳ್ಳಿಯ ಜನರಿಗೆ, ದನ-ಕರುಗಳಿಗೆ, ನೀರು, ಆಹಾರವಿಲ್ಲದೆ ಕಂಗಾಲಾಗಿದ್ದರು. 'ಮಳೆ' ಬರಲೆಂದು ತಲೆಮಾರುಗಳಿಂದ ನಡೆದು ಬಂದ ಕಾರ್ಯಗಳನ್ನು ಮಾಡಲು ಪ್ರಾರಂಭಿಸಿದರು. 'ತಿಂಗಳು ಮಾಮ' ಹಬ್ಬ ಮಾಡಿದರು. ಕಪ್ಪೆ ಮದುವೆ, ಕತ್ತೆ ಮೆರವಣಿಗೆ ಮಾಡಿದರು. "ಉಯ್ಯೋ, ಉಯ್ಯೋ ಮಳೆರಾಯ ಹೂವಿನ ತೋಟಕ್ಕೆ

ನೀರಿಲ್ಲ" ಎಂದು ಸಕಲರು ಮುಗಿಲಿಗೆ ಮುಖಮಾಡಿ ಕೂಗುವರು. ಹೂವಿನ ತೇರು ಉತ್ಸವ ಮಾಡಿಸಿ, 'ಹೂ' ಕೇಳು ಪದ್ಧತಿಯಂತೆ ತಯಾರಿ ನಡೆಯಿತು.

ಇಂದಿಗೂ ನಮ್ಮ ಗ್ರಾಮೀಣ ಪ್ರದೇಶಗಳಗಲ್ಲಿ ಮಳೆ ಬಾರದಿದ್ದಾಗ, ಮಳೆಯನ್ನು ಕುರಿತು ನಡೆಸುವ ಹಲವು ನಂಬಿಕೆ ಕಾರ್ಯಗಳು ಪ್ರಸ್ತುತವಾಗಿವೆ. ಸಕಾಲಕ್ಕೆ ಮಳೆ ಬಾರದೆ ಜನಜಾನುವಾರುಗಳು ಪರಿತಪಿಸುವ ಕೂಗೂ ಮಳೆರಾಯನಿಗೆ ಕೇಳಿಸುವಂತಾಗಲು ಅಥವಾ ಮೊರೆ ಹೋಗಲು ಕಪ್ಪೆ ಮದುವೆ, ಕತ್ತೆ ಮದುವೆ, ಬಾಲಕರ ಮದುವೆ, ತಿಂಗಳ ಮಾಮನ ಹಬ್ಬ, ಬೆಳದಿಂಗಳಪ್ಪನ ಹಬ್ಬ, ಜೋಕುಮಾರಸ್ವಾಮಿ ಹಬ್ಬ, ಮಣ್ಣೆತ್ತಿನ ಹಬ್ಬ, ಇನ್ನು ನೇರವಾಗಿ ಮಳೆರಾಯ ಅರ್ಥಾತ್ ಇಂದ್ರನ ಮಣ್ಣಿನ ಮೂರ್ತಿ ಅಥವಾ ಗೊಂಬೆ ಮಾಡಿಕೊಂಡು ಕೊಂಬು, ಕಹಳೆ, ತಮಟೆ, ನಗಾರಿ ಶಬ್ಧಗಳ ಸಹಿತ ಊರಿನ ಬೀದಿಗಳಲ್ಲಿ ಮೆರವಣಿಗೆ ಹೊರಡುವ ಇತ್ಯಾದಿ ಹಲವು ಧಾರ್ಮಿಕ ಆಚರಣೆಗಳಿವೆ. ಮಳೆರಾಯನು ಸಂತುಷ್ಟಿಗಾಗಿ ವೈದಿಕವಾಗಿ ಪರ್ಜನ್ಯ ಜಪಯಜ್ಞವು ಜರುಗುತ್ತದೆ. ಯಜ್ಞಕ್ಕೆ ಬಳಸುವ ಸಮಿತ್ತು(ಅರಳಿ ಕಡ್ಡಿಗಳು)ಗಳ ಹೊಗೆ ಅಥವಾ ಧೂಮ ಮೋಡ ಕಟ್ಟಲು ಸಹಾಯಕವಾಗುತ್ತದೆ ಎಂಬ ವೈಜ್ಞಾನಿಕ ಕಾರಣಗಳು ಇವೆ.

ನಾಲ್ಕೈದು ದಶಕಗಳ ಹಿಂದೆ ಹಿರಿಯರು ಕಂಡಂತೆ ಅಥವಾ ಪಾಲ್ಗೊಂಡಂತೆ ಊರಿನ ಮೇಲೆ ಮೋಡ ಚಲಿಸುತ್ತಿದ್ದಾಗ ಊರಿನ ಜನರೆಲ್ಲಾ ಸೇರಿ ಖಾಲಿಡಬ್ಬ, ಹಳೇಮೊರ ಇತ್ಯಾದಿ ಶಬ್ದ ಮಾಡುವ ಸಾಧನಗಳನ್ನು ಹಿಡಿದು ಕಿವಿಗಡಚಿಕ್ಕುವಂತೆ ಬಡಿಯುವ ಶಬ್ದದಲ್ಲಿ ಪಡ್ಡೆ ಹೈಕಳು ಗಟ್ಟಿಯಾಗಿ–

ಬಾರೊಬಾರೊ ಮಳೆರಾಯ
ಬಾಳೆ ತೋಟಕೆ ನೀರಿಲ್ಲ
ಹುಯ್ಯೊಹುಯ್ಯೊ ಮಳೆರಾಯ
ಹೂವಿನ ತೋಟಕ್ಕೆ ನೀರಿಲ್ಲ

ಎಂದು ಹಾಡುತ್ತಿದ್ದರು ಎನ್ನುವ ಬದಲಾಗಿ ಕೂಗುತ್ತಿದ್ದರು. ಈ ಕೂಗಿಗೆ ಮತ್ತು ಶಬ್ದದ ತರಂಗಗಳಿಗೆ ಒಮ್ಮೊಮ್ಮೆ ಮಳೆಯೂ ಬಂದುಬಿಡುತ್ತಿತ್ತು. ಬಂದ ಮೋಡ ಹಾಗೇ ತೇಲಿ ಹೋದರೆ ನಂತರವೋ, ಮಾರನೇ ದಿನವೋ ಮೋಡ ಬಂದಾಗ ತಮ್ಮ ಪಟ್ಟು ಬಿಡುತ್ತಿರಲಿಲ್ಲ. ತಾವು ಬಡಿಯುವ ಶಬ್ದತರಂಗಕ್ಕೆ ಮಳೆ ಹುಯ್ಯುವದೆಂಬ ನಂಬಿಕೆಯಿದೆ. ಉತ್ತರ ಕರ್ನಾಟಕದ ಹಲವಡೆ ಭಾರೀ

ಶಬ್ದವನ್ನುಂಟುಮಾಡುವ ಡೊಳ್ಳನ್ನು ಸೊಂಟಕ್ಕೆ ಕಟ್ಟಿಕೊಂಡು ಅದರ ಸಪ್ಪಳದೊಂದಿಗೆ ಕೊಂಬು, ಕಹಳೆಯ ಗರ್ಜನೆಯೊಂದಿಗೆ ಜಾಗಟೆ, ನಗಾರಿ, ನೌಬತ್ತುಗಳನ್ನು ಬಾರಿಸುತ್ತಾರೆ. ಇನ್ನು ಇದರೊಂದಿಗೆ ಜೋಕುಮಾರಸ್ವಾಮಿ ಹಬ್ಬ, ಮಣ್ಣೆತ್ತಿನ ಹಬ್ಬ ಹೀಗೆ ಹಲವಾರು ಮಳೆರಾಯನಿಗೆ ಸಂಬಂಧಿಸಿದ ಹಬ್ಬಗಳಿವೆ.

ಈ ಹಬ್ಬಗಳು ಅಥವಾ ನಂಬಿಕೆಗಳ ಕಾರ್ಯಗಳು ಪ್ರಾದೇಶಿಕವಾಗಿ ವ್ಯತ್ಯಾಸವಿದ್ದರೂ ನಡವಳಿಕೆಗಳ ಉದ್ದೇಶ ಮತ್ತು ಗುರಿ ಒಂದೇ ಆಗಿದೆ.

**'ಸಾಮ್ತಿ'**(ಕ್ಯಾತನಹಳ್ಳಿ ರಾಮಣ್ಣ) ಕಥೆಯಲ್ಲಿ ಪ್ರಾದೇಶಿಕವಾಗಿ ರೂಢಿಯಲ್ಲಿರುವ ಕೆಲವು ನಂಬಿಕೆಗಳು ಮತ್ತು ಸಂಪ್ರದಾಯವನ್ನು ಕಥೆಗಾರರು ಕಥೆಯ ಮೂಲಕ ಹೇಳಿದ್ದಾರೆ. ಸಾಮಾಜಿಕ ಬದುಕಿನ ಚಿತ್ರಣವನ್ನು ನೈಜವಾಗಿ ಹೇಳುವ ಮೂಲಕ ಕಥೆಯನ್ನು ಕಟ್ಟಿದ್ದಾರೆ. ಈ ಕಥೆಯಲ್ಲಿ ಬರುವ ಚೆಲುವ, ಬೋರ, ಶಂಕರ ಪ್ರೌಢಶಾಲೆಗೆ ವಿಧಾಯ ಹೇಳಿ ಊರಲ್ಲೇ ಉಳಿದಿರುತ್ತಾರೆ. ಈ ಮೂವರ ಸಂಭಾಷಣೆ ಮೂಲಕ ಕಥೆಯನ್ನು ಎಣೆದಿದ್ದಾರೆ. ಕೃಷಿ ಭೂಮಿಯಲ್ಲಿ ಕೆಲವು ದುಷ್ಟ ಶಕ್ತಿಗಳು ಸೇರಿರುವುದನ್ನು ರಾವುಗದ್ದೆಯೆಂದು ನಂಬಿರುವ ಜನರು ಅದಕ್ಕೆ ಶಾಂತಿ ಮಾಡುವುದನ್ನು 'ಸಾಮ್ತಿ' ಎಂದು ಗ್ರಾಮೀಣ ಭಾಷೆಯಲ್ಲಿ ಬಳಸಲಾಗಿದೆ. ರಾವುಗದ್ದೆಯನ್ನು 'ರಾವುನ್ಗಗದ್ದೆ' ಎಂದು ಜೋಡಿಸಿ ಹೇಳುತ್ತಾರೆ.

ಚೆಲುವ ರಾವುನ್ಗಗದ್ದೆ ವಿವರಣೆಯನ್ನು ಶಂಕರನಿಗೆ ಕೊಡುತ್ತಾನೆ. "ರಾವುನ್ಗಗದ್ದೆ ಅಂದ್ರೆ ಅಂತಿಂಥ ರಾವುನ್ಗಗದ್ದೆ ಅಲ್ಲ ಕಣ್ಲಾ ಸಂಕ್ರಾ. ಕತ್ಲೆ ಒತ್ನಲ್ಲಿ ಅಲ್ಲೀಗೋಗಾಕೇ ಎಲ್ಲಾರೂ ಎದುರ್ಕತರೆ ಕಣ್ಲಾ. ಯೋಳ್ತಿನಿ ಕೇಳೂ, ಇಂಗೇ ಒಂದ್ಸಲ ಯಾರೋ ಕೊಪ್ಲಿಂದ ನಮ್ಮೂರ್ಗೆ ಬತ್ತಾ ಇದ್ರಂತೆ ವಬ್ರೇ ನಡ್ಕಂಡಿ. ಕೆಂಚಪ್ನ ಗದ್ದೆ ನ್ಯಾರುಕ್ಕೆ ಬಂದಾಗ ಒಂದು ಕರೀ ನಾಯ್ನಂಗೆ ಆದೀಗ್ ಬತ್ತಂತೆ. ಯಾವ್ದೋ ನಾಯಿ ಇರ್ಬೇಕೂಂತ ಅತ್ರುಕ್ ಬಂದ್ ನೋಡುದ್ರೆ ಕೊತ್ತಿಮರಿಯಂಗ್ ಕಾಣುಸ್ತಂತೆ! ಎದುರ್ಕಂಡ್ರೂವೆ ಅವಷ್ಟಕ್ಕವ್ನು ಮುಂದುಕ್ಕೋಗಿ ಇಂದುಕ್ ತಿರಗ್ ನೋಡ್ತಾನೆ. ದೊಡ್ಡ್ ಕಿರ್ಬ ಕಂಡಂಗ್ ಕಂಡುಬುಡ್ತಂತೆ"(ಕ್ಯಾತನಹಳ್ಳಿ ರಾಮಣ್ಣ, ಎಂದು ಬಂದಿತೋ ಮಳೆ, ೨೦೦೦, ಪುಟ–೦೪)ಗ್ರಾಮ್ಯ ಭಾಷೆಯ ಮೂಲಕ ಇಲ್ಲಿ ದೆವ್ವ ಭೂತ ಕಲ್ಪನೆಯ ನಂಬಿಕೆಗಳು ಹಳ್ಳಿಗಾಡಿನಲ್ಲಿ ಜೀವಂತವಾಗಿರುವುದನ್ನು ಕಾಣುತ್ತೇವೆ.

ಈ ಕಥೆಯಲ್ಲಿ ಬರುವ ಮಾದೇಗೌಡರು ತನ್ನ ಜಮೀನಿಗೆ ಸಾಮ್ತಿ (ಶಾಂತಿ)ಮಾಡುವರು. ಸ್ವತ: ಲೇಖಕರು ಜಾನಪದ ವಿದ್ವಾಂಸರಾಗಿರುವುದರಿಂದ ಪ್ರಾದೇಶಿಕವಾಗಿ ನಡೆಯುವ ಈ ಆಚರಣೆಯನ್ನು ಚನ್ನಾಗಿ ನಿರೂಪಿಸಿದ್ದಾರೆ.

ಜಮೀನಿನಲ್ಲಿ ಬಲಿ ಕೊಡಲು ಕುರಿಯ ದೇಹವನ್ನು ತಬ್ಬಿ ಅದು ಅಲುಗಾಡದಂತೆ ಹಿಡಿದು, ಅದರ ಕತ್ತಿನಿಂದ ರಕ್ತ ಬಸಿಯಲು ಸಹಾಯ ಮಾಡಿದರು. ತಾಂಬಟ್ಟಲು ಅರ್ಧ ತುಂಬಿದಾಗ ಹಿಡಿದಿದ್ದವನನ್ನು ನೋಡಿ ಸಾಕು ಎನ್ನುವಂತೆ ತಲೆಯಾಡಿಸಿದರು ಗೌಡರು. ಆಮೇಲೆ, ಹಿಂಗಾಲುಗಳನ್ನು ಹಿಡಿದಿದ್ದವನು ಅದನ್ನು ದರದರನೆ ಎಳೆದುಕೊಂಡು ಭತ್ತದ ರಾಶಿಯ ಸುತ್ತ ಒಂದು ಸುತ್ತು ಬಂದ.

ಎಡೆ ಇಡಲು ಅನ್ನದ ದೇಕ್ಷವನ್ನು(ಅಗಲವಾದ ತಟ್ಟೆ) ಕೆಳಗೆ ಇಟ್ಟು ತಾಂಬಟ್ಟಲು ತರಿಸಿ ಐದು ಬೊಗಸೆಯಷ್ಟು ಅನ್ನವನ್ನು ಆ ರಕ್ತದೊಳಗೆ ಹಾಕಿದರು. ದೇಕ್ಷವನ್ನು ಮುಚ್ಚಿ ತಾಂಬಟ್ಟಲಿನ ಅನ್ನವನ್ನು ಕಲಸಿ ಬತ್ತದ ರಾಶಿಯ ಮುಂದೆ ಪೂರ್ವ ದಿಕ್ಕಿನಲ್ಲಿಟ್ಟರು. ಒಂದು ಪುಟ್ಟ ಕುಕ್ಕೆಯಲ್ಲಿ ಒಲೆಯಿಂದ ಬೂದಿ ಸರಿಸಿ ಭತ್ತದ ರಾಶಿಗೆ ಬೂದಿಯ ಹಾರವನ್ನು ಹಾಕಿದರು. ಪೂರ್ವ ದಿಕ್ಕಿಗೆ ಎದುರಾಗಿ ರಾಶಿಯ ನಡುವೆ ಮೂರು ನಾಮಗಳನ್ನು ಇಡುವರು. ಹಣ್ಣಿನ ತೊಟ್ಟು ಮುರಿದು, ಕರ್ಪೂರ ಗಂಧದ ಕಡ್ಡಿ ಹಚ್ಚಿ, ಕಾಯಿ ಒಡೆದು ಪೂಜೆ ಮಾಡುವರು. ಹಾಗೆ ತಾಂಬಟ್ಟಲನ್ನು ಎತ್ತಿಕೊಂಡು ಉರಿಯುತ್ತಿರುವ ಒಲೆಯಿಂದ ಕೊಳ್ಳಿಗಳನ್ನು ತೆಗೆದುಕೊಂಡು 'ಯೀಹಿಹಿ', 'ಊಹುಹು' ಎಂದು ಉಯ್ಲು ಹಾಕುತ್ತ ಗದ್ದೆ ಹಂಚಿನಲ್ಲಿ ನಡೆಯುವರು. ಅವರ ಹಿಂದೆ ರಕ್ತದನ್ನದ ರಂಗೋಲಿಯನ್ನು ಬಿಡುತ್ತಾ ಗೌಡರು ಗಂಭೀರವಾಗಿ ಹೊರಟರು. ಹೀಗೆ ತಮ್ಮ ಗದ್ದೆಯನ್ನು ಒಂದು ಸುತ್ತು ಬಂದು, ಹೊರಟಿದ್ದ ಮೂಲೆಯಿಂದಲೇ ಕಣವನ್ನು ಹೊಕ್ಕರು. ರಾಶಿಯ ಮುಂದೆ ಬಂದ ಗೌಡರು ರಾವಿಗೆ ಸಾಮ್ತಿಯಾಯಿತೆಂದು ನಂಬಿದರು. ಇಲ್ಲಿ ಕಥೆಗಾರರು ಪ್ರಾದೇಶಿಕವಾಗಿ ತಾವು ಕಂಡ ನಂಬಿಕೆ ಸಂಪ್ರದಾಯಗಳನ್ನು ಕಥೆಯ ಮೂಲಕ ಓದುಗರಿಗೆ ಮನವರಿಕೆ ಮಾಡಿದ್ದಾರೆ.

ವಿಶ್ವ ಮಹಿಳೆ ದಿನಾಚರಣೆ ಆರಂಭವಾಗಿ ನೂರು ವರ್ಷ ಕಳೆದರು ಮಹಿಳೆಯರ ಬದುಕು ಸುಧಾರಿಸಿದೆ ಎಂದು ಗಟ್ಟಿಯಾಗಿ ಹೇಳಲು ಸಾಧ್ಯವಾಗುತ್ತಿಲ್ಲ. ಒಂದೆಡೆ ಮಹಿಳೆ, ಶಿಕ್ಷಣ, ಆರೋಗ್ಯ, ಸೇನೆ, ಆಡಳಿತ, ನ್ಯಾಯಾಲಯ, ಬ್ಯಾಂಕ್, ಐಟಿ–ಬಿಟಿ, ರಾಜಕೀಯ ಹೀಗೆ ಹಲವು ರಂಗಗಳಲ್ಲಿ ಸ್ಥಾನ ಪಡೆದು ತನ್ನದೆ ಆದ ಛಾಪು ಮೂಡಿಸಿ ಪುರುಷರಿಗಿಂತ ಕಡಿಮೆಯಿಲ್ಲವೆಂದು ನಿರೂಪಿಸಿದ್ದಾಳೆ. ಅದೇ ಹೊತ್ತಿನಲ್ಲಿಯೇ ವರದಕ್ಷಿಣೆ, ಅತ್ಯಾಚಾರ ಲೈಂಗಿಕ ಕಿರುಕುಳ, ಕೌಟುಂಬಿಕ ದೌರ್ಜನ್ಯ, ಬಾಲ್ಯವಿವಾಹ, ಹೆಣ್ಣು ಭ್ರೂಣಹತ್ಯೆಗಳಂಥ ಅಮಾನವೀಯ ಆಚರಣೆಗಳಿಂದ ನೊಂದು ಜೀವತೆತ್ತುಕೊಳ್ಳುತ್ತಿದ್ದಾಳೆ. ಅವಳ

ನೋವಿಗೆ ಇನ್ನೂ ಹೆಚ್ಚಿನ ಹೋರಾಟವು ಬೇಕಾಗುತ್ತದೆ. ಒಟ್ಟಾರೆ ಈ ನೂರು ವರ್ಷಗಳಲ್ಲಿ ಸಾಕಷ್ಟು ಬದಲಾವಣೆ ಆಗಿರಬಹುದು. ಆದರೆ ನಿರೀಕಿಸಿದಷ್ಟು ಯಶಸ್ಸು ಕಂಡಿಲ್ಲ ಎಂಬುದಕ್ಕೆ **'ಸಾಕ್ಷಿ'** ಕಥೆ ಉದಾಹರಣೆಗಾಗಿದೆ.

ಕಥೆಯಲ್ಲಿ ಕಥೆಗಾರರು ಕಥೆಯನ್ನು ನಿರೂಪಿಸುವಾಗ ಮನುಷ್ಯನ ಸಾವಿನ ನಂತರ ನಡೆಯುವ ಕ್ರಿಯೆಗಳನ್ನು ಪ್ರಾದೇಶಿಕವಾಗಿ ರಮೇಶ್ ಹುಲ್ಲುಕೆರೆ ಅವರ **'ಸಾಕ್ಷಿ'** ಕಥೆ ವಿವರಿಸುತ್ತದೆ. ಓದಿದ ಮಧು ಎಂಬುವನು ತಾನು ಇಷ್ಟಪಟ್ಟ ಹುಡುಗಿಯನ್ನೆ ಮದುವೆಯಾದ. ಆದರೂ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಸಾವು ಕಥೆಯಲ್ಲಿ ನಿಗೂಢವಾಗಿ ಉಳಿಯುತ್ತದೆ. ಶವಸಂಸ್ಕಾರದ ನಂತರ ಮಾಡುವ ಕಾರ್ಯವನ್ನು ಮತ್ತು ಸಾಮಾಜಿಕವಾಗಿ ನಡೆದುಬಂದ ಸಂಪ್ರದಾಯಗಳನ್ನು ಕಥೆಗಳಲ್ಲಿ ಒಡಮೂಡಿಸಿದ್ದಾರೆ. ಮನುಷ್ಯನು ನಂಬಿಕೆಯಿಂದಲೆ ಬದುಕನ್ನು ಕಟ್ಟಿರುತ್ತಾನೆ. ಕಾಲಾನಂತರದಲ್ಲಿ ನಂಬಿಕೆ ಸಂಪ್ರದಾಯಗಳು ಕೆಲವರಿಗೆ ನೆಮ್ಮದಿಯೆನಿಸಿದ್ದರೆ, ಮತ್ತೆ ಕೆಲವರಿಗೆ ಕಿರಿಕಿರಿಯಾಗುವುದನ್ನು ಈ ಕಥೆಯಲ್ಲಿ ಮಧುವಿನ ಹೆಂಡತಿ ಗೌರಿ ಪಾತ್ರದ ಮೂಲಕ ತಿಳಿಯಬಹುದು.

ಮಧುವಿನ ಸಂಸ್ಕಾರವನ್ನು ತಮ್ಮನಾದ ಅನಂತನು ಮಾಡುತ್ತಾನೆ. ಹನ್ನೊಂದನೇ ದಿನದ ಕಾರ್ಯವನ್ನು ಅನಂತನ ಕೈಯಲ್ಲಿ ಮಾಡಿಸುವ ವಿವರಣೆ ಹೀಗಿದೆ. ಬೇಗನೆ ಪೂಜೆ ಮುಗಿಸಿಬಿಡಿ ಎಂದು ಅವಸರ ಪಡಿಸಿ, ತಲೆಬೋಳಿಸಿ ನಿಂತ ಅನಂತನಿಗೆ ಗಡಿಗೆ ಹೊರಿಸಿಕೊಂಡು, ಗುದ್ದವನ್ನು ಮೂರು ಬಾರಿ ಸುತ್ತಿಸಿ ಪ್ರತಿ ಸುತ್ತಿಗೂ ಗಡಿಗೆಗೆ ತೂತು ಕೊರೆದು, ಗಡಿಗೆಯನ್ನು ನೆಲಕ್ಕೆ ಕುಕ್ಕಿಸಿ ಬಲವಂತವಾಗಿ ಅನಂತನನ್ನು ಬಾಯಿ ಬಡಿದುಕೊಳ್ಳುವಂತೆ ಮಾಡುವರು.

ಗುದ್ದದ ಮೇಲೆ ಎಡೆ ಇಟ್ಟ ಭಕ್ಷ್ಯಗಳಿಗೆ ಅಷ್ಟು ಹದ್ದುಗಳ ಪೈಕಿ ಒಂದಾದರೂ ಬೀಳದಿರುವುದು ಜನಕ್ಕೆ ಅಚ್ಚರಿಯಾಯಿತು. ಪಟೇಲರಿಗೆ ಯಾರೋ ಗೋವು ಪೂಜೆ ಮಾಡಿಸುವಂತೆ ತಿಳಿಸಿದ ಮೇಲೆ ಅನಂತನನ್ನು ತಣ್ಣೀರಿನಲ್ಲಿ ಮುಳುಗಿಸಿ ಮತ್ತೆ ಪೂಜೆ ಮಾಡಿಸಿ, ಪೂಜೆಗೆ ಇರಿಸಿದ್ದ ಬಾಳೆಹಣ್ಣುಗಳನ್ನು ಹಸುವಿಗೆ ತಿನ್ನಿಸಿದ ಮೇಲೆ ಕೂತು ಜೂಗಣಿಸುತ್ತಿದ್ದ ರಾಣಕಾಟಿಗಳು ಎದ್ದವು. ಬದುಕಿದ್ದಾಗ ಪುಣ್ಯದ ಕೆಲಸ ಮಾಡಿದ್ದರೆ ಸತ್ತಾಗ ಎಡೆ ಇಟ್ಟಾಗ ಕಾಗೆ ಹದ್ದುಗಳು ಬಂದು ತಿನಿಸುಗಳನ್ನು ಮುಟ್ಟುತ್ತವೆ ಎಂಬ ನಂಬಿಕೆ. ಈ ಕ್ರಿಯೆಗಳು ಆಧುನಿಕ ಬದುಕಿನಲ್ಲಿಯೂ ನಡೆಯುತ್ತಿದೆ. ಅನಾದಿಕಾಲದಿಂದಲೂ ಮನುಷ್ಯ ಮತ್ತು ಪ್ರಾಣಿ-ಪಕ್ಷಿಗಳೊಡನೆ ಸಂಬಂಧಗಳು ಹೊಂದಿವೆ.

ಗಂಡ ಸತ್ತಾಗ ಹೆಂಡತಿಯ ಬಳೆ ಕುಂಕುಮ ತೆಗೆಸುವ ಪದ್ಧತಿಯು ನಡೆದು ಬಂದಿದೆ. ಹಾಗೆಯೇ ಮಧುವಿನ ಹೆಂಡತಿ ಗೌರಿಗೆ ಈ ಕ್ರಿಯೆಯನ್ನು ಮಾಡುವಾಗ ವಿರೋಧಿಸುತ್ತಾಳೆ. ಇಲ್ಲಿ ಹೆಣ್ಣು ಹುಟ್ಟಿನಿಂದ ಅಲಂಕಾರಿಕ ವಸ್ತುವಾಗಿ ಬಳೆ ಕುಂಕುಮವನ್ನು ಉಪಯೋಗಿಸುವುದು ಸಹಜವಾಗಿದೆ. ಇದು ಮುತ್ತೈದೆ ಸ್ಥಾನವನ್ನು ತುಂಬುತ್ತದೆ. ಆದರೆ ಗಂಡ ಸತ್ತ ನಂತರ ತೆಗೆಸುವ ಪದ್ಧತಿಯು ಸರಿಯಲ್ಲ ಎಂದರೂ ಜರಗುತ್ತಿದೆ. ವಿದ್ಯಾವಂತ ಹಾಗೂ ಉದ್ಯೋಗನಿರತ ಮಹಿಳೆಯರಲ್ಲಿ ಸುಧಾರಣೆ ಕಂಡುಬರುತ್ತಿದೆ. ಇಂದಿನ ಸಾಮಾಜಿಕ ರಚನೆ ಬದಲಾಣೆಯ ದಿಕ್ಕಿಗೆ ಚಲಿಸಿದೆ, ಗಂಡ ಸತ್ತಾಗ, ಆಕೆ ಮರು ಮದುವೆಗೆ ಅವಕಾವಿದೆ, ಅಥವಾ ಸ್ವಾತಂತ್ರವಾಗಿ ಯಾರಹಂಗಿಗೂ ಒಳಗಾಗದೆ ಬದುಕಬಹುದು. 'ಸಾಕ್ಷಿ' ಕಥೆಯಲ್ಲಿನ ಗೌರಿಯ ವಿರೋಧ ಸರಿಯಾದುದೆ ಆಗಿದೆ. ಆಕೆ ಒಂದು ರೀತಿಯಲ್ಲಿ ಸಮಾಜಕ್ಕೆ ಮಾದರಿಯಾಗಿದ್ದಾಳೆ.

ಕಥೆಗಾರರು ಪಿ.ಯು.ಸಿ ಮತ್ತು ಎಂ.ಎ ಓದುವಾಗ ಸಹಪಾಠಿಯಾದ ಸ್ನೇಹಿತರ ಬದುಕಿನ ಮಾನಸಿಕ ತುಮುಲಗಳನ್ನು ಮತ್ತು ಚಿಂತನೆಗಳನ್ನು ಬಿಚ್ಚಿಡುವ ಕಥೆ **'ಕರೆ'**ಯಲ್ಲಿ ಬೋರೇಗೌಡ ಚಿಕ್ಕಮರಳಿಯವರು ಎಲ್ಲೂ ಸ್ನೇಹಿತರ ಹೆಸರನ್ನು ಹೇಳಲು ಇಚ್ಚಿಸಿಲ್ಲ. ಕಾರಣ ಅವರಂದುಕೊಂಡ ಬದುಕನ್ನು ಕಥೆಯಲ್ಲಿ ಮೂಡಿಸಿರುವುದರಿಂದ ಗೌಪ್ಯವಾಗಿಯೆ ಕಾಪಾಡಿದ್ದಾರೆ.

ಕಥೆಗಾರರು ಶಾಲೆಯ ಕೆಲಸದಲ್ಲಿ ತೊಡಗಿದ್ದಾಗ ಹುಡುಗನೊಬ್ಬ 'ಸಾರ್, ನಿಮ್ಮ ಗೆಳೆಯರ ತಾಯಿ ತೀರ್ಕೊಂಡ್ರು ಸಾರ್' ಎಂದಾಗ ಯಾವ ಗೆಳೆಯನ ಬಗ್ಗೆ ಹೇಳುತ್ತಿದ್ದಾನೆ ಎಂದು ಯೋಚಿಸಿ ಹುಡಗನನ್ನು 'ನೀನು ಯಾವೂರಪ್ಪ ಮರಿ' ಎಂದು ಕೇಳಿ ಖಚಿತಪಡಿಸಿಕೊಂಡರು. ಗೆಳೆಯನ ಮನೆಗೆ ಶಾಲೆ ಮುಗಿಸಿ ಹೋದಾಗ ಯಾವ ಜನರು ಕಾಣಿಸಲಿಲ್ಲ. ಜಗಲಿಯ ಒಂದು ಬದಿಯ ಕಿಟಕಿಯ ಮೇಲೆ ದೀಪ ತಣ್ಣಗೆ ಉರಿಯುತ್ತಿತ್ತು. ಜಗಲಿಯನ್ನು ತೊಳೆದು ಶುಚಿಗೊಳಿಸಲಾಗಿತು. ಮಂಡ್ಯ ಜಿಲ್ಲೆಯ ಸುತ್ತ-ಮುತ್ತ ಊರುಗಳ ಮನೆಯಲ್ಲಿ ಸಾವಾಗಿದ್ದು, ಶವಸಂಸ್ಕಾರದ ನಂತರ ಜನರು ಕಾಲುವೆಯಲ್ಲಿ ಅಥವಾ ಹಳ್ಳಕೊಳ್ಳಗಳಲ್ಲಿ ಕಾಲು ತೊಳೆದು ತಲೆ ಮೇಲೆ ನೀರು ಚಿಮುಕಿಸಿ, ಸತ್ತವರ ಮನೆಯ ಮುಂದೆ ದೀಪ ಹಚ್ಚಿರುವುದನ್ನು ನೋಡಿಕೊಂಡು ಹೋಗುವುದು ಸಂಪ್ರದಾಯ(ದೀಪ ಸತ್ತವರ ಆತ್ಮ ಎಂಬ ನಂಬಿಕೆಯಿದೆ). ಅದು ಸಾವಿನ ಸೂತಕವನ್ನು ಕಳೆಯುತ್ತದೆ ಎಂಬ ನಂಬಿಕೆ.

ಸ್ನೇಹಿತನ ಕಣ್ಣುಗಳಲ್ಲಿ ಕಣ್ಣೀರು ಕಂಡು ತಾಯಿ ಕಳೆದು ಕೊಂಡಾಗ ಎಲ್ಲರಿಗೂ ಆಗುವಂತೆ ಈತನಿಗೂ ಅಪಾರ ದು:ಖವಾಗಿದೆ ಎಂದು ತಿಳಿದರು. ನಂತರ ಕಥೆಗಾರರು ಪಾಂಡವಪುರಕ್ಕೆ ಹೋಗುವುದಾಗಿ ಹೇಳಿದಾಗ ನಾನು ನಿನ್ನ ಜೊತೆ ಬಂದು ಮೇಲುಕೋಟೆಗೆ ಹೋಗುವುದಾಗಿ ಸ್ನೇಹಿತ ತಿಳಿಸಿದ. ಕಥೆಗಾರರಿಗೆ ಆಶ್ಚರ್ಯವೆನಿಸಿತು. ಊರಿನಲ್ಲಿ ಇದ್ದು ಮನೆಯವರಿಗೆ ಧೈರ್ಯ ಹೇಳಬಾರದೆ ಎಂದಾಗ, "ಬೋರಣ್ಣ, ಈ ಮನೆಯಲ್ಲಿ ನಾನು ಹೇಗಿರಲಿ ಹೇಳು. ನಿನಗೇ ಗೊತ್ತಲ್ಲ. ನನ್ನ ತಮ್ಮ ತಮ್ಮನ ಹೆಂಡತಿ ಇಬ್ಬರೂ ಇದೇ ಮನೆಯಲ್ಲಿ ಒಂದೇ ದಿನ ತೀರಿಕೊಂಡರು. ಅದಾಗಿ ಇನ್ನು ಒಂದು ವರ್ಷ ಕಳೆದಿಲ್ಲ. ಅಪ್ಪ ತೀರಿಕೊಂಡ, ಅಪ್ಪ ಸತ್ತು ತಿಂಗಳು ತುಂಬಲಿಲ್ಲ, ಈಗ ಅವ್ವ, ಒಂದೇ ವರ್ಷದಲ್ಲಿ ಇಷ್ಟು ಸಾವುಗಳನ್ನು ಕಂಡ ಈ ಮನೆಯಲ್ಲಿ ಇರಲು ನನಗೆ ಮನಸ್ಸಾಗುತ್ತಿಲ್ಲ"(ಬೋರೇಗೌಡ ಚಿಕ್ಕಮರಳಿ, ಗೋಡೆಗಳ ನಡುವೆ, ೨೦೦೩, ಪುಟ-೯೯). ಕಥೆಗಾರ ಸ್ನೇಹಿತನ ಮನೆಯಲ್ಲಿ ನಡೆದ ಘಟನೆಗಳನ್ನು ಸ್ಥೂಲವಾಗಿ ಕಥೆಯಲ್ಲಿ ಎಣೆದಿದ್ದಾರೆ.

ತಮ್ಮ ಇಷ್ಟಪಟ್ಟು ಮದುವೆಯಾದ ಹೆಣ್ಣಿನ ತಂದೆ 'ಆ ಮನೆಯಲ್ಲಿ ಏನಿದೆ ಅಂತ ಮದುವೆಯಾಗುತ್ತಿ, ಹುಟ್ಟಿದಾಗಿನಿಂದ ತಿರುಕೊಂಡು ತಿಂದವು' ಅಂದನಂತೆ. ತಮ್ಮನ ಮದುವೆಗೆ ಅಪ್ಪ ಒಪ್ಪಲಿಲ್ಲ. ಆದರೂ ಹಠಹಿಡಿದು ಅದೇ ಹುಡುಗಿ ಮದುವೆಯಾದ. ಇವರುಗಳ ಪ್ರೀತಿ ಕಷ್ಟಪಟ್ಟು ಸಂಪಾದಿಸಿದ ಜಮೀನನ್ನು ಕಸಿದುಕೊಳ್ಳುವ ಸಂಚಿಗೆ ಕಾರಣವಾಯಿತು. ತಮ್ಮ ವಿಷಕುಡಿದು ಸತ್ತ, ಮೆಚ್ಚಿ ಬಂದ ಹೆಣ್ಣು ಅದೇ ಬಾಟಲಿನ ವಿಷ ಕುಡಿದು ಸತ್ತಳು, ಮನೆಗೆ ಉಳಿದ ಒಬ್ಬ ಮಗ ಸ್ನೇಹಿತನಿಗೆ ತಂದೆ ತಲೆ ಬೋಳಿಸಿಕೊಳ್ಳುವಂತೆ ಸೂಚಿಸಿದರು. ಆದರೆ ಕಣ್ಣಿಲ್ಲದ ಆಚಾರಕ್ಕೆ ನಾನೇಕೆ ಸೋಲಲಿ ಎಂದು ಕೋಪ ವ್ಯಕ್ತಪಡಿಸಿದ. ಊರು ಹೇಳಿದ ಹಾಗೆ ಕೇಳು ಅಂದ ಅಪ್ಪ. ಅದಕ್ಕೆ ವ್ಯತಿರಿಕ್ತವಾಗಿ ನೀನೆ ಕೇಳಿಕೊಂಡು ಬಿದ್ದಿರು ಎಂದು ಮೇಲುಕೋಟೆಗೆ ಹೋಗಿಬಿಟ್ಟ. ಅಸ್ತಮದ ಅಪ್ಪನಿಗೆ ಒಳಗಿನ ಕೊರಗಿನ ಜೊತೆಗೆ ಖಾಯಿಲೆಯೂ ಹಿಡಿಯುತ್ತದೆ. ಕಥೆಗಾರರ ಸ್ನೇಹಿತ ಮತ್ತೆ ಸಂಪ್ರದಾಯ ಮೀರುತ್ತಾರೆ. ಸ್ನೇಹಿತರ ತಂದೆಗೆ ಐವತ್ತೈದು ಅರವತ್ತು ವರ್ಷ. ಅನೇಕ ವರ್ಷಗಳ ಕಾಲ ಗಂಡನೊಂದಿಗೆ ಬದುಕಿದ ಅವ್ವ. ದುಡಿದು ಬದುಕಿದ ಅಪ್ಪನಿಗೆ ಸ್ವರ್ಗ ಸಿಗಲು ಈ ಶಾಸ್ತ್ರ ಸಂಪ್ರದಾಯಗಳ ಸಹಾಯ ಬೇಕು ಎಂದು ಅವಳು ಬಯಸಿದಳು. ಸ್ನೇಹಿತ ತಲೆ ಬೋಳಿಸಿಕೊಳ್ಳದೆ, ಗಡಿಗೆ ಒಡೆದು ಬಾಯಿಬಡಿದುಕೊಳ್ಳದೆ, ಮಂತ್ರ ಹೇಳಿ ಎಳ್ಳು ನೀರು ಬಿಡದೆ ಹೋದುದರಿಂದ

ಅಪ್ಪನಿಗೆ ಸ್ವರ್ಗ ಸಿಗದೆಹೋಯಿತು. ಅವನು ಪ್ರೇತನಾಗಿ ನಮ್ಮನ್ನು ಕಾಡುತ್ತಾನೆ ಎಂದು ನಂಬಿದ್ದ ತಾಯಿಯನ್ನು ಕಂಡು ಆಶ್ಚರ್ಯವಾಯಿತೆಂದು ಸ್ನೇಹಿತನ ಅಭಿಪ್ರಾಯ. ಇಲ್ಲಿ ದೀರ್ಘಕಾಲ ಸಂಸಾರ ಮಾಡಿದ ಗಂಡನು ಪ್ರೇತವಾಗಿ ತೊಂದರೆ ಕೊಡುವನೆಂಬ ತಾಯಿಯ ನಂಬಿಕೆಯನ್ನು ಕಂಡು ಚಿಂತಿಸಲಾಗಿದೆ. ಮಾನವರು ಒಬ್ಬರನೊಬ್ಬರು ಅರ್ಥೈಸಿಕೊಂಡು ಬದುಕುವ ಪರಿಯನ್ನು ಕಥೆಗಾರರು ಪ್ರಶ್ನಾರ್ಥಕವಾಗಿ ಕಂಡಿದ್ದಾರೆ.

ತಂದೆ-ತಾಯಿ ಸತ್ತಾಗ ಶವ ಸಂಸ್ಕಾರ ಮಾಡುವಾಗ ಮಗ ಮಡಕೆ ಒಡೆಯುವುದು, ತಲೆಬೋಳಿಸಿಕೊಳ್ಳುವುದು, ಬಾಯಿ ಬಡಿದುಕೊಳ್ಳುವ ಆಚರಣೆ ಯಾವ ರೀತಿ ಹುಟ್ಟಿಕೊಂಡಿತೊ ಗೊತ್ತಿಲ್ಲ. ಈ ಆಚರಣೆಯನ್ನು ಮಾಡಿದರೆ ಸತ್ತವರಿಗೆ ಮುಕ್ತಿ ಎಂದು, ಇಲ್ಲವಾದರೆ ಮನೆಯವರಿಗೆ ಏನಾದರೂ ಕೆಡುಕು ಸಂಭವಿಸುವುದೆಂದು ನಂಬಿಕೆ. ಅದು ಮೀರಿ ಕಷ್ಟಗಳು ಎದುರಾದಾಗ ಇಂತಹ ಆಚರಣೆಗಳ ಜೊತೆಗೆ ತಳುಕು ಹಾಕುವುದು, ಅವುಗಳಿಗೆ ಪರಿಹಾರವಾಗಿ ಅಂತದೇ ಆಚರಣೆಗಳನ್ನು ಮಾಡುವುದು. ಗ್ರಾಮೀಣ ಹಾಗೂ ರೈತ ಸಮುದಾಯದ ನಂಬಿಕೆಗಳಾಗಿವೆ.

ಸ್ನೇಹಿತ ಶಾಸ್ತ್ರ ಸಂಪ್ರದಾಯಗಳನ್ನು ಮೀರಿ ಬುದ್ಧಿಕಲಿಸ ಬೇಕೆಂದುಕೊಂಡರು. ಆದರೆ ಹೆದರಿದರು, ಹೆದರಿದ್ದು ಶಾಸ್ತ್ರಕ್ಕಲ್ಲ, ಸಂಪ್ರದಾಯಕಲ್ಲ, ಜನರಿಗೂ ಅಲ್ಲ. ಹೆದರಿದ್ದು ಅಪ್ಪನ ಸಾವಿಗೆಂದು ತಾವೇ ಹೇಳಿಕೊಳ್ಳುತ್ತಾರೆ. 'ನನ್ನ ಗಟ್ಟಿತನವನ್ನು ಅಲುಗಿಸುವ ಪದರಗಳು ನನ್ನೊಳಗೇ ಇವೆ ಎಂದು ತಿಳಿದಿರಲಿಲ್ಲ' ಎಂಬ ಮಾತುಗಳು ಯಾವುದೋ ಒತ್ತಡಕ್ಕೆ ಬಿದ್ದು ತಮ್ಮ ನಿಲುವುಗಳನ್ನು ಮುರಿದು ಹಾಕುತ್ತಾರೆ.

"ಅಪ್ಪನ ಸಾವು ಅವ್ವನದಾದಂತೆ ಅವ್ವನದು ಈಕೆಯದೂ ಆಗಿಬಿಟ್ಟರೆ ಹೇಗಪ್ಪಾ. ನಾನು ತಬ್ಬಲಿಯಾದಂತೆ ನನ್ನ ಮಗನೂ.... ತುಂಬಾ ಭಯವಾಯಿತು ಬೋರಣ್ಣ ಸೋತು ಹೋದೆ. ನನ್ನ ಓದು, ನನ್ನ ಅರಿವು, ನನ್ನ ಮಂಥನ ಎಲ್ಲವನ್ನು ಸೋಲಿಸಿಬಿಟ್ಟೆ, ಬಲಿಕೊಟ್ಟುಬಿಟ್ಟೆ"(ಬೋರೇಗೌಡ ಚಿಕ್ಕಮರಳಿ, ಗೋಡೆಗಳ ನಡುವೆ, ೨೦೦೩, ಪುಟ-೧೦೮). ಈ ಮಾತುಗಳು ಕಥೆಗಾರರ ಸ್ನೇಹಿತರದು. ಇಲ್ಲಿ ಹತಾಶರಾಗಿರುವುದರ ಜೊತೆಗೆ ತನ್ನ ಜ್ಞಾನದಿಂದ ಕಂಡುಕೊಂಡ ಸಂಪ್ರದಾಯಗಳ ಹೊರತಾದ ಜೀವನವನ್ನು ನಡೆಸಲು ಸಾಧ್ಯವಾಗಲಿಲ್ಲ ಎಂಬುದನ್ನು ಸೂಕ್ಷ್ಮವಾಗಿ ಗ್ರಹಿಸಬಹುದು.

ಮನುಷ್ಯ ಭೂಮಿಯ ಮೇಲೆ ಬದುಕಿರುವಾಗಿನಿಂದ ಬಂದ ಸಂಪ್ರದಾಯಗಳು ಮಣ್ಣಿನ ಗುಣಗಳು ಅಷ್ಟು ಸುಲಭವಾಗಿ ಪ್ರಜ್ಞಾವಂತ ವ್ಯಕ್ತಿಯನ್ನು ಕೂಡ ಬಿಟ್ಟು ಹೋಗಲಾರದು. ಏಕೆಂದರೆ ತಮ್ಮ ಪೂರ್ವಿಕರ ತಲೆಮಾರುಗಳಿಂದ ನಡೆಸಿ ಕೊಂಡು ಬಂದಿರುವ ಸಂಪ್ರದಾಯಗಳು ನಾವು ಬಿಟ್ಟರು ಅವು ನಮ್ಮನ್ನು ಬಿಡುವುದಿಲ್ಲ. ಸಂಪ್ರದಾಯಗಳನ್ನು ಮುರಿಯುವಲ್ಲಿ ಕಥೆ ಸೋತಿದೆ ಎಂದರೆ ಅದು ವಿಮರ್ಶೆಯಾಗುತ್ತದೆ. ಆದರೆ ಅದು ಸಾಮಾಜಿಕ ಕಟ್ಟು ಕಟ್ಟಳೆಯಲ್ಲಿ ಬಿಗಿದು ಕೊಂಡಿದೆ. ಕಥೆಗೆ ಅನುಸಾರವಾಗಿ ಕಥೆಗಾರರು ನಿರೂಪಿಸಿದ್ದಾರೆ.

ಭಾರತೀಯ ಪರಂಪರೆಯಲ್ಲಿ ಜನನಕ್ಕೆ ಏಷ್ಟು ಮಹತ್ವವಿದೆಯೋ ಮರಣಕ್ಕೂ ಅಷ್ಟೇ ಮಹತ್ವವಿದೆ, ಸತ್ತಾಗಲೂ ಮದುವೆಯ ಸಂಭ್ರಮವಾಗಿಸುವ ಪದ್ಧತಿಯೂ ಜರುಗುತ್ತದೆ. ಅಂತಹ ಸಾಂಪ್ರದಾಯಿಕ ಆಚರಣೆಯನ್ನು ಕಥಾ ವಸ್ತುವನ್ನಾಗಿಸಿದ ಸಾಹಿತ್ಯದ ಹಲವು ಪ್ರಕಾರಗಳು ಕನ್ನಡದಲ್ಲಿವೆ. **'ಶವಯಾತ್ರೆ'** ಕಥೆ ಅಂತಹ ವಸ್ತುವನ್ನು ಒಳಗೊಂಡ ಕಥೆಯಾಗಿ ಗೋಚರಿಸುತ್ತದೆ. ನಾಗಮಂಗಲ ಕೃಷ್ಣಮೂರ್ತಿ ಕಥೆಯ ಶೀರ್ಷಿಕೆಯ ಹೆಸರಿನಂತೆ ಕಥೆಗಾರರು ತಾವು ಕಂಡ ಅನುಭವದ ಘಟನೆಯನ್ನು ಕಥೆಯಾಗಿ ನಿರೂಪಿಸಿದ್ದಾರೆ. ತಮ್ಮ ತಾಯಿಯ ಹತ್ತಿರ ಸಂಬಂಧಿ ಹೊನಗಳ್ಳಿ ಮಾವ ತೀರಿಕೊಂಡ ವಿಚಾರ ತಿಳಿದು ಕಥೆಗಾರರು ಕಛೇರಿಯಿಂದ ತಾಯಿ ಅಣ್ಣನೊಂದಿಗೆ ಹೊನಗಳ್ಳಿಗೆ ಸಂಸ್ಕಾರಕ್ಕೆ ಹೋದರು. ಮಾವ ಚೆಲುವಣ್ಣನ ಮಗಳು ಉತ್ತರ ಕರ್ನಾಟಕದಿಂದ ಬರುವುದು ಬೆಳಗ್ಗೆ ಎಂದು ಗೊತ್ತಾಗಿ ಹೆಣ ಕಾಯಲು ಟಿ.ವಿ-ವಿ.ಸಿ.ಪಿ ಹಾಕಿ ಬೆಳಗಾನ ತೂಕಡಿಸಿದರು.

ಸಂಪ್ರದಾಯದಂತೆ ಬೆಳಗ್ಗೆ ಹಸಿಗರಿ, ಬಿದಿರು ಬೊಂಬುಗಳಿಂದ ಚಟ್ಟ ಕಟ್ಟುವುದು, ಶವಕ್ಕೆ ಸ್ನಾನ ಮಾಡಿಸಿ, ಹೊಸ ಬಟ್ಟೆ ತೊಡಿಸಿ ಕುರ್ಚಿಮ್ಯಾಲೆ ಕೂರಿಸಲಾಯಿತು. ಹೊಸ ಸೀರೆ ಹಣೆ ತುಂಬಾ ಕುಂಕುಮ್ಮವಿಟ್ಟು, ಕೆನ್ನೆಗೆ ಅರಿಶಿನ ಬಳಿದು ವಿಕಾರ ರೂಪವಾಗಿ ಸತ್ತ ಮಾವನ ಹೆಂಡತಿಯನ್ನು ಮಾವನ ಪಕ್ಕದಲ್ಲಿ ಕೂರಿಸಿ, ಉಡಿ ತುಂಬಿ, ಅಕ್ಕಿ-ಇಕ್ಕಿ ಮದುವೆ ಹೆಣ್ಣು ಗಂಡಿಗೆ ಶಾಸ್ತ್ರ ಮಾಡುವಂತೆ ಮಾಡಿ, ಹಣ್ಣು-ಕಾಯಿ ಮುರಿದು, ಗಂಧದ ಕಡ್ಡಿ ಬೆಳಗಿ ಅಂತಿಮ ಪೂಜೆ ಮಾಡಲಾಯಿತು. ಹೀಗೆ ಬಯಲು ಪ್ರದೇಶದ ಗ್ರಾಮೀಣ ಭಾಗಗಳಲ್ಲಿ ಕಂಡುಬರುವ ಸಂಪ್ರದಾಯಗಳನ್ನು ಕಥೆಯಲ್ಲಿ ಬಿಂಬಿಸಿದ್ದಾರೆ. ಪಟ್ಟಣ

ಪ್ರದೇಶಗಳಲ್ಲಿ ಈ ಸಂಪ್ರದಾಯಗಳು ಮರೆಯಾಗುತ್ತಿವೆ. ಗ್ರಾಮೀಣ ಭಾಗಗಳಲ್ಲಿ ಅಲ್ಪ-ಸ್ವಲ್ಪ ವ್ಯತ್ಯಾಸ ದೊಂದಿಗೆ ಈ ಕಾರ್ಯಗಳು ಪ್ರಸ್ತುತ ಈಗಲು ನಡೆಯುತ್ತವೆ.

ಸಾವಿನ ನಂತರ ಕ್ರಿಯೆಗಳು ನಂಬಿಕೆಯ ಒಂದು ಭಾಗವಾಗಿ ಜನರಲ್ಲಿ ಮಿಳಿತಗೊಂಡಿದೆ. ಆಚರಣೆಗಳಂತೆ ನಂಬಿಕೆಗಳು ನಮ್ಮ ಬದುಕಿನ ಜೊತೆ ಹಾಸುಹೊಕ್ಕಾಗಿವೆ. ನಂಬಿಕೆಗಳಿಂದಲೇ ಈ ಸಂಪ್ರದಾಯ ಆಚರಣೆಗಳು ಜಾರಿಯಾಗಿತ್ತೆಂದರೆ ತಪ್ಪಲ್ಲ. ಮಂಡ್ಯ ಜಿಲ್ಲೆಯ ಹಲವಾರು ಕಥೆಗಾರರು ಈ ನಂಬಿಕೆಯನ್ನು ತಮ್ಮ ಕಥಾ ಗರ್ಭದಲ್ಲಿ ಜೋಡಿಸಿ ಕಥೆಗಳನ್ನು ಹೆಣೆದಿರುವುದನ್ನು ಕಾಣಬಹುದು. ಒಂದು ಕಡೆ ಈ ನಂಬಿಕೆ ಸಂಪ್ರದಾಯ ಆಚರಣೆಗಳು ಅಜ್ಞಾನದ ಕುರುಹುಗಳಾಗಿ ಕಂಡುಬಂದರೆ ಅವುಗಳೇ ಸಾಹಿತ್ಯದ ವಸ್ತುವಾಗಿ ಬಳಕೆಯಾಗಿರುವುದನ್ನು ಕಾಣಬಹುದು.

ಬೆಸಗರಹಳ್ಳಿ ರಾಮಣ್ಣ ಅವರ **'ಹಾವಿಲ್ಲದ ಹುತ್ತ'** ಕಥೆಯಲ್ಲಿ ನಿರೂಪಕರು ದಸರೆಯ ರಜಾಕ್ಕೆ ಊರಿಗೆ ಹೋದಾಗ ತಮ್ಮ ತೋಟದಲ್ಲಿ ಮೋಹಿನಿಯ ಕಾಟವಿದೆಯೆಂದು ಕೆಲಸದವರು ಹೇಳಿದ ಕಥೆಯನ್ನು ಕೇಳಿ ರಾತ್ರಿ ಕನಸು ಬಿದ್ದು "ಅಯ್ಯೋ! ನಾನಲ್ಲ... ನಾನಲ್ಲ ಎಂದು ಹಾಸಿಗೆಯ ಮೇಲೆ ಎದ್ದು ಕುಳಿತಾಗ, ತಂದೆ ದೀಪ ಹತ್ತಿಸಿ. ಏನಾಯ್ತು ಯಾಕೆ ಅರಚಿಕೊಂಡೆ?" ಎಂದು ಕೇಳುವಷ್ಟರಲ್ಲಿ ಅವರ ತಾಯಿ ಉಪ್ಪು, ಮೆಣಸಿನ ಕಾಯಿ ತಂದು ಭಯ ನಿವಾರಣೆಗೆ 'ಇಳಿ' ತೆಗೆದರು. ಅವರ ಅಜ್ಜಿ ಮೂರು ಕಾಸನ್ನು ತೆಗೆದು "ಸ್ವಾಮಿ ಏಳು ಬೆಟ್ಟಗಳ ಒಡೆಯ, ವೆಂಕಟರಮಣ ನನ್ನ ಮೊಮ್ಮಗನ ಒಂದು ತಲೆಕೂದಲೂ 'ಚಳ್' ಅನ್ನದಾಗೆ ಕಾಪಾಡು" ಎಂದು ಮುಡುಪು ಕಟ್ಟಿದರು. ಈ ರೀತಿಯ ಸಂಪ್ರದಾಯ ಪ್ರತಿ ಹಳ್ಳಿಗಾಡಿನ ಮನೆಗಳಲ್ಲಿ ಮಾಡುವುದು ವಾಡಿಕೆಯಾಗಿದೆ. ಮನುಷ್ಯನಿಗೆ ಯಾವುದೇ ತೊಂದರೆಗಳು ಕಂಡು ಬಂದರೂ ದೇವರ ಮೊರೆ ಹೋಗುವುದು ಅವರ ನಂಬಿಕೆಯ ಬದುಕಾಗಿದೆ. 'ಮುಡುಪು' ಎಂದರೆ ದೇವರ ಹೆಸರಿನಲ್ಲಿ ಹರಕೆ ಹೊತ್ತು ಪತ್ಯೇಕವಾಗಿ ತೆಗೆದಿರಿಸಿದ ಹಣ. ಈ ಹಣವನ್ನು ಸಾಮಾನ್ಯವಾಗಿ ಅರಿಶಿನ ಬಟ್ಟೆಯಲ್ಲಿ ಗಂಟು ಹಾಕುತ್ತಾರೆ. ಇಂದಿನ ಆಧುನಿಕತೆಯಲ್ಲಿ ಈ ರೀತಿಯ ಪದ್ಧತಿ ಮೂಢನಂಬಿಕೆ ಎನ್ನಿಸಿದರೂ ಕೂಡ ಗ್ರಾಮೀಣ ಜನರಿಗೆ ಇದರಲ್ಲಿ ನಂಬಿಕೆ ಇದೆ.

**'ನಂಜಿನ ಕೊನೆ'** ಕಥೆಯಲ್ಲಿ 'ನಿಯತ್ತು ಮುಖ್ಯ ಉಂಡ ಮನೆಗೆ ಎರಡು ಬಗೆಯ ಬಾರದು'. 'ಮತ್ತೆ ಮನಸ್ಸು ಥತ್' ಎಲ್ಲೋದ್ರು ಇದೇ ಆಯ್ತು ನಿನ್ನ ಬಾಳು

ದಬ್ಬೆ ಕಟ್ಟಿದ ನಾಯಿ ಬಾಲ 'ಇದರಜ್ಜಿನಾ ಬಡಿಯ!' ಎಂಬ ವಾಕ್ಯಗಳು ತಪ್ಪು ಮಾಡ ಹೊರಟವನಿಗೆ ಬುದ್ಧಿ ಮಾತುಗಳಾಗಿ ಸರಿದಾರಿಗೆ ತರುವ ನಂಬಿಕೆಯಾಗಿದೆ. ಈ ಕಥೆಯಲ್ಲಿ ಬರುವ ಆಳು ಮರಿನಂಜ ತೆಂಗಿನ ಮರಹತ್ತಿ ಎಳನೀರು ಕಿತ್ತು ಕೆಳಗೆ ಇಳಿದಾಗ ಅವನಿಗೆ ಬಾಯಾರಿಕೆಯಾಗಿ ಕಾಲುವೆಯಲ್ಲಿ ನೀರು ಕುಡಿಯಲು ಹೋಗಿ ನೋಡಿದಾಗ ಕಾಲುವೆ ಬರಿದಾಗಿತ್ತು. ಕೊನೆಗೆ ತನ್ನ ಒಡೆಯನ ತೋಟದ ಒಂದು ಎಳನೀರು ಕುಡಿದರೆ ತಪ್ಪಾಗುವುದಿಲ್ಲ ಎಂದುಕೊಂಡು, ಎಳನೀರನ್ನು ಮಚ್ಚಿನಿಂದ ಕೊಚ್ಚಬೇಕು ಅಷ್ಟರಲ್ಲಿ ಇದ್ಯಾಕೆ ಹೀಗೆ ಎಂದು ಯೋಚಿಸಿದ ಮರಿನಂಜ "ಹುಟ್ಟಿಸಿದ ದೇವ್ರು ಹುಲ್ಲು ಮೇಯಿಸ್ತಾನ? ನಿಯತ್ತೊಂದು ಮನ್ಸನ ತಾವು ಸರಿಯಾಗಿಯಿದ್ದು ಬುಟ್ರೆ ಎಲ್ಲಾದರೂ ಬದುಕಬೋದು. ಯಾವುದಕ್ಕೂ ನಿಯತ್ತು ಮುಖ್ಯ. ಉಂಡ ಮನೇಗೆ ಎರಡು ಬಗೀದೇಹೋದ್ರೆ ದೇವ್ರು ಸದಾಬೆನ್ ಹಿಂದೇ ಇರ್ತಾನೆ"(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೭, ಪುಟ-೬೨)ಎಂದು ಗೌಡರ ಅವ್ವ ತಾಯಕ್ಕನವರು ಹೇಳಿದ ಮಾತುಗಳು ನೆನಪಾಗಿ ಮರಿನಂಜ ಎಳ್ಳುನೀರನ್ನು ಕೈಬಿಟ್ಟು ಬೇರೆ ಕೆಲಸದಲ್ಲಿ ತೊಡಗಿದ. ಈ ಸಂದರ್ಭವು ಹಳ್ಳಿಗಾಡಿನ ಬದುಕಿನಲ್ಲಿ ಮೋಸ, ತಟವಟ, ವಂಚನೆ, ಸುಳ್ಳು ಇವುಗಳಿಂದ ಬಹಳ ದೂರವಾಗಿದ್ದ ಗ್ರಾಮೀಣ ಪ್ರದೇಶದ ಜನ ದೇವರು ಎಂಬ ನಂಬಿಕೆಯ ಮೇಲೆ ಬದುಕನ್ನು ದೂಡುತ್ತಿದ್ದರು. ಆದರೆ ಇಂದಿನ ಆಧುನಿಕತೆಯ ಸಂದರ್ಭದಲ್ಲಿ ಬದಲಾದ ಸಾಮಾಜಿಕ ನಂಬಿಕೆಯು ಕಣ್ಮರೆಯಾಗುತ್ತಿದೆ. ತಪ್ಪು ಮಾಡಿದರೆ ಎಲ್ಲಿ ದೇವರು ಶಿಕ್ಷಿಸುವನೋ ಎಂಬ ಭಯದಿಂದ ಬದುಕುತ್ತಿದ್ದ ಜನ ಮಾನವೀಯತೆಯ ಮನುಷ್ಯರಾಗಿದ್ದರು. ಇಂದು ಅದರ ಮೌಲ್ಯಗಳನ್ನು ಮರೆತು ಸ್ವಾರ್ಥಪರ, ಭ್ರಷ್ಟತೆಯಿಂದ ಕೂಡಿದ್ದು ಪ್ರತಿದಿನವು ಮಾಧ್ಯಮಗಳಲ್ಲಿ ನೋಡುತ್ತಿದ್ದೇವೆ, ಓದುತ್ತಿದ್ದೇವೆ, ಕೇಳುತ್ತಿದ್ದೇವೆ.

ಇದೇ ಕಥೆಯಲ್ಲಿ ಹರಿಕಥೆ ಕೇಳಲು ಹೋಗಿದ್ದ ನಿಂಗಣ್ಣ "ಅಲ್ಲ ಮರಿನಂಜಣ್ಣ, ಆ ಹರಿಶ್ಚಂದ್ರ ಮಾರಾಜಂದು ಅದೇನ್ ಸತ್ಯ ಅಂತೀನಿ। ಆಡಿದ ಮಾತಿಗೆ ಹೆಂಡ್ತಿ ಕತ್ತು ಕತ್ತರಿಸೋಕು ಹೆದರಲಿಲ್ಲ। ಅದೆಂಥ ಮನ್ಸಯಿರಬೇಕು!(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೭, ಪುಟ-೬೩). ಸುಮಾರು ೩೦-೪೦ ವರ್ಷಗಳ ಹಿಂದೆ ಹುಣ್ಣಿಮೆ ಹಬ್ಬ-ಹರಿದಿನಗಳಲ್ಲಿ, ಹರಿಕಥೆ ಮಾಡಿಸುವುದು ವಾಡಿಕೆಯಾಗಿತ್ತು. ಹರಿಕಥೆಯೆಂಬುದು ಒಂದು ರೀತಿಯ ಕಥಾಕಾಲಕ್ಷೇಪ. ಪುರಾಣಪುಣ್ಯ ಕಥೆಗಳ ಮೂಲಕ ಜನರಿಗೆ ನೈತಿಕ ಮೌಲ್ಯಗಳನ್ನು ತಿಳಿಸುವಂತದ್ದಾಗಿದೆ. ನಮ್ಮ ಪೂರ್ವಿಕರು ಅದರಲ್ಲೂ ಹಳ್ಳಿಜನರು ಅನರಕ್ಷಸ್ಥರಾದರೂ ಇಂಥ ನೀತಿಬೋಧನೆಗಳಿಂದ ಜೀವನವನ್ನು

ಉತ್ತಮವಾಗಿ ರೂಪಿಸಿಕೊಳ್ಳುತ್ತಿದ್ದರು. ಪಾಪ-ಪುಣ್ಯಗಳ ಅರಿವಿತ್ತು. ಪರೋಪಕಾರ ಬುದ್ಧಿಯನ್ನು ಬೆಳೆಸುತ್ತಿತ್ತು. ರಾಮಾಯಣ, ಮಹಾಭಾರತ, ಭಾಗವತ ಮುಂತಾದ ಕಥೆಗಳನ್ನು ಹಾಗೂ ಅದರಲ್ಲಿ ಬರುವ ಉಪಕಥೆಗಳನ್ನು ರಾಗಸಂಯೋಜನೆಗಳಿಂದ ತುಳಸಿಮಾಲೆ ಧರಿಸಿದ ಹರಿದಾಸರು ತಂಬೂರಿ, ಜಾಗಟೆಗಳನ್ನು ಹಿಡಿದು ಸುಶ್ರಾವ್ಯವಾಗಿ ನುಡಿಸುತ್ತಾ, ಹಾಡುತ್ತಾ ಕಥಾಕಾಲಕ್ಷೇಪ ನಡೆಸುತ್ತಿದ್ದರು. ಹರಿಕಥೆ ಎಂದಾಗ ವಿಷ್ಣುಗೆ ಸಂಬಂಧಿಸುದಾದರು ಶಿವಕಥನಗಳನ್ನು ಹೇಳಲಾಗುತ್ತಿತ್ತು. (ಸದ್ಯ ಈಗಲೂ ಅಷ್ಟೋ ಇಷ್ಟೋ ಬಳಕೆಯಲ್ಲಿದೆ) ಸತ್ಯಹರಿಶ್ಚಂದ್ರ ಕಥೆಯ ಪ್ರೇರಣೆಯೇ ಬಾಲಕ ಕರಮಚಂದಗಾಂಧಿಗೆ ದಾರಿದೀಪವಾಯಿತು. ಇದೇ ಕಥೆಯಲ್ಲಿ ಮರಿನಂಜ ನೂರು ರೂಪಾಯಿಯ ಎಂಜಲು ಕಾಸಿಗಾಗಿ ಹೆಂಡತಿ, ಎರಡು ಮಕ್ಕಳು, ದನ, ಆಡು, ಕುರಿ ಇದ್ದ ಮನೆಯಲ್ಲಿ ಏನನ್ನೂ ಅರಿಯದೆ ಮಲಗಿದ್ದಾಗ ಸೀಮೆ ಎಣ್ಣೆ ಸುರಿದು "ಧಗಧಗ" ಎಂದು ಉರಿದು ಹೋಗಿದ್ದು ನೆನಪಾಗಿ, ಪಶ್ಚಾತ್ತಾಪಗೊಂಡು, ಗೋಹತ್ಯೆ ಶಿಶುಹತ್ಯೆಗೆ ಮರಿನಂಜ ಗಡಗಡನೆ ನಡುಗಿದ. ಯಮನ ಲೋಕದಲ್ಲಿ ತನಗೆ ಯಾವ ಶಿಕ್ಷೆ ಕಾದಿದೆಯೋ ಎಂದು ಭಯ ಪಟ್ಟನು. ಮಹಾಭಾರತದ ಸ್ವರ್ಗಾರೋಹಣ ಪರ್ವದಲ್ಲಿ ಧರ್ಮರಾಯನಿಗೆ ಕೆಲಹೊತ್ತು ನರಕದ ದರ್ಶನವಾಗುತ್ತದೆ. ಈ ನರಕದ ಭಯಾನಕ ಕಥೆಗಳನ್ನು ಕೇಳಿಯೇ ನಮ್ಮ ಜನ ಕೆಟ್ಟ ಕೆಲಸಕ್ಕೆ ಕೈ ಹಾಕಲು ಭಯಪಡುತ್ತಿದ್ದರು. ಧರ್ಮರಾಯನಿಗೆ ದೇವಲೋಕದ ಭಟರು ಯಮಲೋಕವನ್ನೆಲ್ಲಾ ಅಡ್ಡಾಡಿಸಿ ಅಲ್ಲಿನ ಶಿಕ್ಷೆಗಳನ್ನು ತೋರಿಸಿದ್ದರು.

ದೃಶ್ಯ. ೧ ಒಂದು ಸ್ಥಳದಲ್ಲಿ ಒಬ್ಬನನ್ನು ಗರಗರಸದಿಂದ ಸೀಳಿಸುತ್ತಿದ್ದಾರೆ.

ದೃಶ್ಯ. ೨ ಇನ್ನೊಂದು ಜಾಗದಲ್ಲಿ ಒಬ್ಬಳನ್ನು ಬಿಸಿ ಎಣ್ಣೆಯಲ್ಲಿ ಹಾಕಿ ಬೇಯಿಸುತ್ತಿದ್ದಾರೆ.

ದೃಶ್ಯ. ೩ ಮತ್ತೊಂದು ಸ್ಥಳದಲ್ಲಿ ಉಕ್ಕಿನ ಮೊಳೆಗಳನ್ನು ಶರೀರದಲ್ಲಿ ಇಳಿಸುತ್ತಿದ್ದಾರೆ.

ದೃಶ್ಯ. ೪ ಒಂದು ಸ್ಥಳದಲ್ಲಿ ಬೇಟೆ ನಾಯಿಗಳಿಂದ ಕಡಿಯಿಸುತ್ತಿದ್ದಾರೆ.

ದೃಶ್ಯ. ೫ ಇನ್ನೊಂದು ಸ್ಥಳದಲ್ಲಿ ಒಬ್ಬಳನ್ನು ತುಂಡುತುಂಡಾಗಿ ಕಡಿಯುತ್ತಿದ್ದಾರೆ.

ದೃಶ್ಯ. ೬ ಒಂದು ಸ್ಥಳದಲ್ಲಿ ಕೆಳಗಡೆಯಿಂದ ಬಾಯಿಗೆ ಬರುವಂತೆ ಶೂಲವೇರಿಸುತ್ತಿದ್ದಾರೆ.

ದೃಶ್ಯ. ೭ ಇನ್ನೊಂದು ಸ್ಥಳದಲ್ಲಿ ಮೊಸಳೆಗಳಿಗೆ ಆಹಾರವಾಗಿ ಹಾಕಿ ತಿನ್ನಿಸುತ್ತಿದ್ದಾರೆ.

ದೃಶ್ಯ. ೮ ಆಕಡೆಗೆ ಹತ್ತಾರು ವಿಷಸರ್ಪಗಳು ಬುಸುಗುಡುತ್ತಾ ಕಚ್ಚಲು ಬರುತ್ತಿದ್ದರೆ ತತ್ತರಿಸಿ ಓಡಾಡುತ್ತಿರುವ ಸ್ಥಿತಿ ಏನಾಗಬೇಕು!.

ದೃಶ್ಯ.೯ ಮಲಮೂತ್ರಗಳಿಂದ, ಕೀವುರಕ್ತಗಳಿಂದ, ಅನೇಕ ವಿಷಕ್ರಿಮಿಗಳಿಂದ ತುಂಬಿತುಳುಕುತ್ತಿದ್ದ ವೈತರಣೀ ನದಿಯಲ್ಲಿ ಕೆಲವರನ್ನು ಬಲವಂತವಾಗಿ ಈಜಾಡಿಸುತ್ತಿದ್ದರು. ಇಂಥ ಅನೇಕಾನೇಕ ಶಿಕ್ಷೆಗಳನ್ನು ನೋಡನೋಡುತ್ತಾ ಈ ಘೋರ ದೃಶ್ಯಗಳನ್ನು ನಾನೋಡಲಾರೆ ಎಂದು ಕಣ್ಣು ಮುಚ್ಚಿಕೊಂಡನು ಧರ್ಮರಾಯ. ಮಾನವಲೋಕದಲ್ಲಿ ಪಾಪದ ಕೆಲಸಗಳನ್ನು ಮಾಡಿದ ನೀಚರಿಗೆ ಅವರು ಮಾಡಿದಂತಹ ಪಾಪಗಳಿಗೆ ಅನುಸಾರವಾಗಿ ಇಲ್ಲಿ ಶಿಕ್ಷೆ ವಿಧಿಸಲಾಗುತ್ತದೆ ಎಂದರು ದೇವಭಟರು. ಮಹಾಭಾರತದಲ್ಲಿ ಧರ್ಮರಾಯನಿಗೆ ತೋರಿಸುವ ನರಕದ ದೃಶ್ಯವೇ ಒಂದು ಅಧ್ಯಾಯವಾಗುತ್ತದೆ.

ಈ ಕಥೆಯ ಮೂಲ ಉದ್ದೇಶ ಇಹಲೋಕದ ಜನರು ಒಳ್ಳೆಯವರಾಗಿ ಬಾಳಬೇಕು ಎಂದು ಪ್ರೇರೇಪಿಸುತ್ತದೆ. ಇಲ್ಲಿ ಕಥೆಗಾರ ತನ್ನ ಸಮಾಜದ ಜನರು ಆಚರಿಸುವ ನಂಬಿಕೆಗಳನ್ನು ತಪ್ಪು-ಸರಿ ಅಲ್ಲವೆಂದು ಕೆಲವೊಮ್ಮೆ ನಿರ್ಣಯಿಸಲಾರ. ಅವರವರ ನಂಬಿಕೆಯ ಆಧಾರದ ಮೇಲೆ ಬದುಕನ್ನು ಕಟ್ಟಿಕೊಳ್ಳುವ ವಿಚಾರಗಳನ್ನು ಇರುವಂತೆ ಹೇಳುವುದು ಕೆಲವೊಮ್ಮೆ ಅನಿವಾರ್ಯವಾಗುತ್ತದೆ. 'ಕೆಂಪು ಹುಂಜ' ಕಥೆಯಲ್ಲಿ ನಿಂಗಕ್ಕ ತನ್ನ ಕೆಂಪು ಹುಂಜ ಕಾಣದೆ. ದೇವರಿಗೆ ಕಾಸು ಮಂತ್ರಿಸಿ ಅರಿಸಿನದ ಬಟ್ಟೆಯಲ್ಲಿ ಕಟ್ಟುವಾಗ "ಊರ ಮುಂದಲ ಮಾರವ್ವ, ನಿನಗೆ ಕಾಣದೇ ಇರೋದು ಒಂದೂ ಇಲ್ಲ. ನನ್ನ ಕೋಳಿ ಮುರ್ಕೊಂಡರ್ನ ಇನ್ನು ಮೂರು ನಾಲ್ಕು ದಿನಕ್ಕೆ ನನ್ನ ಕಣ್ಣೆದುರಿಗೇ ಭೂಗತ ಮಾಡ್ಬುಡು" ಈ ವಾಕ್ಯಗಳು ಗ್ರಾಮೀಣ ಪ್ರದೇಶದ ಮನನೊಂದ ಸಾಮಾನ್ಯ ಗೃಹಿಣಿಯೊಬ್ಬಳ ದೈವದ ನಂಬಿಕೆಯೊಂದಿಗೆ ತಪ್ಪು ಮಾಡಿದವರಿಗೆ ಶಿಕ್ಷೆಯಾಗಬೇಕೆಂಬ ಇಂಗಿತ ವ್ಯಕ್ತವಾಗಿದೆ.

ಪ್ರತಿಯೊಬ್ಬ ಕಥೆಗಾರನ ಕಥೆಯಲ್ಲಿ ಅವನ ಸುತ್ತಲಿನ ಸಮಾಜದ ಆಗು ಹೋಗುಗಳು, ನಡವಳಿಕೆ, ಪ್ರಾಥಮಿಕ ಅಂಶಗಳು ಸೇರಿಕೊಂಡಿರುತ್ತವೆ. ಹಾಗೆಯೇ **'ನೆಲದ ಉಸಿರು'** ಕಥೆಯಲ್ಲಿ ವೆಂಕಟೇಗೌಡ ಎಂಬ ಪಾತ್ರವು ಮನೆಯ ಹಿರಿಯ ವ್ಯಕ್ತಿಯಾಗಿದ್ದು ತನ್ನ ಪೂರ್ವಿಕರ ಬಳುವಳಿಯಾದ ಮನೆತನದ ಒಟ್ಟು

ಆಸ್ತಿಯನ್ನು ಪಾಲು ಮಾಡುವುದು ಅಂದರೆ ಅದು ಪಾಪದ ಕೆಲಸವೆಂದೆ ನಂಬಿಕೆ ಇರುವುದನ್ನು ಲೇಖಕರು ಕಥೆಯಲ್ಲಿ ನಿರೂಪಿಸಿದ್ದಾರೆ. ಅಲ್ಲದೆ ಮೂರು ಅಕ್ಷರ ಕಲಿತು ಪ್ಯಾಟೆ ಸೇರಿದ ಮಗನ ಆಸ್ತಿ ಪಾಲು ಮಾಡುವ ಮನೋಧೋರಣೆಯನ್ನು ವಿರೋಧಿಸುತ್ತಾರೆ. ಆಧುನಿಕತೆಯ ಫಲವಾಗಿ ತನ್ನ ಸ್ವಾರ್ಥ ಜೀವನಕ್ಕೆ ಒಗ್ಗಟಿನ ಮನೆಯನ್ನು ಪಾಲು ಮಾಡುವ ಹುನ್ನಾರವನ್ನು ರಮೇಶ ಎಂಬ ಪಾತ್ರದ ಮೂಲಕ ಗುರುತಿಸಬಹುದಾಗಿದೆ. ಪ್ರಸ್ತುತ ಕಥೆಯಲ್ಲಿ ಸ್ವಾತಂತ್ರ್ಯೋತ್ತರ ಭಾರತದ ಸಾಮಾಜಿಕ ಜೀವನ ಛಿದ್ರವಾಗುತ್ತಿರುವುದನ್ನು ಸೂಕ್ಷ್ಮವಾಗಿ ಗಮನಿಸಬಹುದು ಅಂದರೆ ಅವಿಭಕ್ತ ಕುಟುಂಬ ವ್ಯವಸ್ಥೆಯ ತುಂಬು ಕುಟುಂಬಗಳಲ್ಲಿ ಆಧುನಿಕತೆ ಪ್ರಭಾವಕ್ಕೆ ಒಳಗಾಗಿ ವಿಭಕ್ತ ಕುಟುಂಬ ಅಂದರೆ ಸಣ್ಣ ಸಣ್ಣ ಘಟಕಗಳಾಗಿ ಒಡೆದು ಹೋಗುತ್ತಿರುವ ಸಂದರ್ಭವನ್ನು ಕಾಣಬಹುದು. ಸಂಘಟಿತ ಬದುಕಿನಲ್ಲಿ ಹೆಚ್ಚು ಯಶಸ್ಸು ಸಾಧ್ಯವೆಂಬುದು ಹಿರಿತಲೆಮಾರಿನವರ ನಂಬಿಕೆಯಾಗಿತ್ತು ಎಂಬುದು ಈ ಕಥೆಯ ಆಶಯವಾಗಿದೆ.

ಇದೆ ಕಥೆಯಲ್ಲಿ ರೈತನ ಕಾಳಜಿ ಮತ್ತು ರೈತನಾಗಿ ಹುಟ್ಟುವುದು ಪುಣ್ಯವೆಂದು ಹೇಳುವ ಸಾಲುಗಳು ಅರ್ಥಪೂರ್ಣವಾಗಿವೆ. ಕಥೆಗಾರರ ಆಶಯವು ಇಡೀ ಸಮಾಜ ಅಭಿವೃದ್ಧಿ ಕಾಣಬೇಕಾದರೆ ಪ್ರತಿ ಗ್ರಾಮ ಅಥವಾ ಹಳ್ಳಿಗಳ ಅಭಿವೃದ್ಧಿಯಿಂದ ಮಾತ್ರ ಸಾಧ್ಯ ಎಂಬ ಗಾಂಧಿ ಕಲ್ಪನೆಯನ್ನು ಕಥೆಗಾರರು ಸ್ಮರಿಸಿದ್ದಾರೆ.

**'ಚಿಕ್ಕಿ ಚಂದ್ರಮ'** ಕಥೆಯಲ್ಲಿ ಚಿಕ್ಕಿಯು ಸಿರಿವಂತ ಹುಡುಗನನ್ನು ಬಯಸಿ ನಿರಾಸೆಯಾಗುವ ಕಥಾವಸ್ತುವನ್ನು ಹೊಂದಿದೆ. ಇದು ಉಳ್ಳವರ ಮತ್ತು ಇಲ್ಲದವರ ನಡುವಿನ ಪ್ರೇಮ ಪ್ರಕರಣವಾದರೂ ಕಥೆಗಾರರು ಗ್ರಾಮೀಣ ಬದುಕಿನ ಸಾರವತ್ತನ್ನು ಚಿತ್ರಿಸಿದ್ದಾರೆ. ಹಳ್ಳಿಗಳಲ್ಲಿ ಮುಂಜಾನೆಯಲ್ಲಿ ಕಾಣಬರುವ ಕಾರ್ಯಗಳು ಗ್ರಾಮ್ಯ ಬದುಕನ್ನು ಈ ಕಥೆಯಲ್ಲಿ ಅನಾವರಣಗೊಳಿಸಿದ್ದಾರೆ. ಇದ್ದ ಹತ್ತು ಹನ್ನೆರಡು ಮನೆಗಳಲ್ಲಿ ಇನ್ನೂ ಯಾರೂ ಎದ್ದ ಸೂಚನೆಗಳಿರಲಿಲ್ಲ. ಮರಗಿಡಗಳಲ್ಲಿ ಹಕ್ಕಿಗಳ ಸದ್ದಿನ್ನೂ ಪ್ರಾರಂಭವಾಗಿರಲಿಲ್ಲ. ಊರಿಗೆ ಊರೇ ಮೌನವಾಗಿತ್ತು. ಅಂತಹ ಪ್ರಶಾಂತ ಸಮಯದಲ್ಲಿ ರಾಗಿ ಕಲ್ಲಿನ ಶಬ್ದ ಊರನ್ನೆಲ್ಲ ವ್ಯಾಪಿಸಿತು. ಅದರ ಗರಗರ ಸದ್ದಿನೊಡನೆ, ಬಳೆಗಳ ಮಂಜುಳನಾದದ ಹಿಮ್ಮೇಳ ಬೆರೆತು ಶ್ರುತಿ ಹಿಡಿಯುತ್ತಿತ್ತು ಇನ್ನೂ ಹಾಡದಿದ್ದ ಹಾಡಿಗೆ. ಇನ್ನು ಹಾಡದೆ ಹೇಗೆ ನಡೆದೀತು! ಚಿಕ್ಕಿಯೇ ಪ್ರಾರಂಭ

ಮಾಡಿದಳು ಪದವನ್ನು. ಪದದ ಕೊನೆಯಲ್ಲಿ ಗೌರಿ ತಾನೂ ಧ್ವನಿ ಸೇರಿಸಿ ರಾಗ ಎಳೆಯುತ್ತಿದ್ದಳು. ಅವರ ಹಾಡಿನ ಓಘದಲ್ಲಿ ರಾಗಿ ಕಲ್ಲು ಹಗುರವಾಗಿ ತೇಲಿತ್ತು.

"ಬೆಳಗಾಗ ನಾನೆದ್ದು ಯಾರ್ಯಾರ ನೆನೆದೇನು
ಎಳ್ಳುಜೀರಗೆ ಬೆಳೆಯೋಳಾ
ಎಳ್ಳುಜೀರಗೆ ಬೆಳೆಯೋಳ್ ಭೂಮಿತಾಯ
ಎದ್ದೊಂದು ಗಳಿಗೆ ನೆನೆದೇವೂ".

"ಕಬ್ಬು ಕಾರುಳ್ಳವನೇ ಹುಬ್ಬು ನೇರುಳ್ಳವನೇ
ಗೊಬ್ಬರದ ಗಾಡಿ ಹೊಡೆಯೋನೇ
ಗೊಬ್ಬರದ ಗಾಡಿ ಹೊಡೆಯೊ ಅಣ್ಣಯ್ಯನ
ಹುಬ್ಬಿಗಿನ್ನೊಂದು ಸರಿಯುಂಟೇ"
(ಎಂ. ರಾಮಕೃಷ್ಣ, ತೇರು ಬಂತು ತವರಿಗೆ, ೧೯೭೦, ಪುಟ-೧೩೭).

ಈ ಜಾನಪದ ಗೀತೆಯೂ ಗ್ರಾಮೀಣ ಪ್ರದೇಶದ ಶ್ರಮ ಸಂಸ್ಕೃತಿಯನ್ನು ತಿಳಿಸುತ್ತದೆ.

ಇತ್ತೀಚಿನ ದಿನಗಳಲ್ಲಿ ಧರ್ಮದ ಹೆಸರಿನಲ್ಲಿ ಕಾವಿ ತೊಡುವ ಎಷ್ಟೋ ಮಂದಿ ಇಂದ್ರಿಯ (ಲೌಕಿಕ) ಆಸೆಗಳನ್ನು ತ್ಯಜಿಸದೆ ಮೇಲಿನ ನೋಟಕೆ ಧರ್ಮ ಗುರುಗಳಾಗಿ ಕಂಡರೂ ಕೂಡ, ಮಾಡಬಾರದ ಕೆಲಸವನ್ನು ಮಾಡುವುದನ್ನು ಕಾಣುತ್ತೇವೆ. ಇದೇ ರೀತಿಯ ಒಂದು ಅಂಶ ಬೆಸಗರಹಳ್ಳಿ ರಾಮಣ್ಣನವರ **'ಸ್ವಾರ್ಥ'** ಕಥೆಯಲ್ಲಿ ಕಂಡುಬರುತ್ತದೆ.

ಪುಟ್ಟಸ್ವಾಮಿಗೌಡ ಎಂಬಾತ ತನ್ನ ಗೃಹಸ್ಥಾಶ್ರಮ ಮುಗಿಸಿ ಗುರುಭೋದನೆ ತೆಗೆದುಕೊಂಡು, ಶಂಕರ ಮಠವನ್ನು ತನ್ನ ತೋಟದಲ್ಲಿ ಕಟ್ಟುತ್ತಾನೆ. ಆದರೆ ಗುರುಭೋದನೆ ಹೆಸರಿಗೆ ಮಾತ್ರ. ಒಂದಂಶದಷ್ಟು ಕೂಡ ಭಕ್ತಿ-ಸತ್ಯ ಮಾರ್ಗದಲ್ಲಿ ನಡೆಯುವುದಿಲ್ಲ. ಆಸ್ತಿ-ಹಣ ಎಂಬುದು ಅವನನ್ನು ಬಿಟ್ಟಿರುವುದಿಲ್ಲ. ತನ್ನ ಹಿರಿಯ ಮಗನೊಂದಿಗೆ ಆಸ್ತಿಗಾಗಿ ಕೋರ್ಟಿನ ಮೆಟ್ಟಿಲೇರಿ ತನಗೂ ಒಂದು ಭಾಗ ಬರುವಂತೆ ಮಾಡಿಕೊಳ್ಳುತ್ತಾನೆ. ಧರ್ಮ-ನೀತಿಯನ್ನು ಮೀರಿ ಒಂದು ಹೆಣ್ಣಿನೊಂದಿಗೆ ಅನೈತಿಕ ಸಂಬಂಧದಲ್ಲಿ ತೊಡುಗುವುದು ಸಂಪ್ರದಾಯ ವಿರೋಧದ ಪ್ರಮುಖ ಅಂಶವಾಗಿ ಕಾಣಬರುತ್ತದೆ.

"ಗುರುಭೋದನೆ ತೆಗೆದುಕೊಂಡ ಪುಟ್ಟಸ್ವಾಮಿಯು ನಾಲ್ಕು ತಿಂಗಳಿನಿಂದ ಬಾಗಿಲು ತೆಗೆಯದಿದ್ದ ದೇವರ ಮನೆಯ ಬಾಗಿಲು ತೆಗೆದಾಗ ಗದ್ದಿಗೆಯ ಮೇಲೆ

ಹಾಗೂ ಸುತ್ತಮುತ್ತ, ಗದ್ದಿಗೆಯ ಮೇಲಿರುವ ಶಂಕರಾಚಾರ್ಯರ ಫೋಟೋ ಮೇಲೆ ಧೂಳು ತುಂಬಿದೆ. ಗದ್ದಿಗೆಯ ಪಕ್ಕದಲ್ಲಿಟ್ಟಿದ್ದ ಭಗವದ್ಗೀತೆ, ಲಕ್ಷ್ಮೀಶ ಕವಿಯ ಜೈಮಿನಿ ಭಾರತ, ಕುಮಾರವ್ಯಾಸ ಭಾರತಕ್ಕೆ ಗೆದ್ದಲು ಹಿಡಿದಿದೆ. ಬೆಳಕಿನಲ್ಲಿ ಗುರು ಶಂಕರರ ಗಂಭೀರ ಸಾತ್ವಿಕ ಮುಖವನ್ನು ನೋಡಲು ಹಿಂಜರಿದರು. ನಿಮಗೆ ಈ ಮುಖ ತೋರಿಸಲಾರೆ ಎಂದು ಗದ್ದಿಗೆ ಮುಂದೆ ಕುಳಿತರು"(ಬೆಸಗರಹಳ್ಳಿ ರಾಮಣ್ಣ, ಕನ್ನಂಬಾಡಿ, ೧೯೮೭, ಪುಟ-೧೪೩). ಇಲ್ಲಿ ಧೂಳು ತುಂಬಿರುವ, ಗೆದ್ದಲು ಹಿಡಿದಿರುವಂತೆ ಪುಟ್ಟಸ್ವಾಮಿಯ ಮನಸ್ಥಿತಿಯಾಗಿದೆ.

ತಾನು ಮಾಡಿದ ತಪ್ಪಿನ ಅರಿವಿನಿಂದ ಗುರುವಾದರೂ ತಲೆ ತಗ್ಗಿಸಬೇಕಾಯಿತು. 'ಯಾವಳನ್ನಾದರೂ ಮಠಕ್ಕೆ ತಂದು ಇಟ್ಕೋ?' ಎಂಬ ಮಗನ ಮಾತುಗಳಿಂದ ಪುಟ್ಟಕ್ಕನ ಸಂಬಂಧದ ಸುಳಿವು ಮಗನಿಗೆ ಗೊತ್ತಾಗಿಬಿಟ್ಟಿದೆಯೋ ಎಂಬ ಸಂಶಯದಿಂದ ಚಡಪಡಿಸುತ್ತಾನೆ. ಗುರುಭೋದನೆ ನೆಪಮಾತ್ರಕ್ಕೆ ಎಂದಾಗಿ ತನ್ನ ವೈಯಕ್ತಿಕ ಆಸೆಗಳನ್ನು ಬಿಟ್ಟು ಹೊರಬರುವ ಸಾಧ್ಯತೆಗಳನ್ನು ಇಲ್ಲಿ ಕಾಣಲಾಗುವುದಿಲ್ಲ. ಕಥೆಗಾರರ ವಾಸ್ತವ ಪ್ರಜ್ಞೆ ಎದ್ದು ಕಾಣುತ್ತದೆ.

ಆದರೂ ಹಿಂದೆ 'ಮನೆ-ಮಠ' ಎಂಬುದು ಸಾಮ್ಯವಾದ ಪದ ಬಳಕೆಯಾಗಿತ್ತು. ಮನೆ ಯಜಮಾನ ಅಥವಾ ಒಡತಿ ಎಲ್ಲಿಗಾದರೂ ಹೊರ ಹೋಗುವಾಗ ಅವರಿಗರಿವಿಲ್ಲದೆ 'ಮನೆಮಠ ಜೋಪಾನ' ಎಂಬ ಪದ ಬಳಕೆಯಲ್ಲಿತ್ತು. ಮನೆಯೆಂಬುದು ಲೌಕಿಕ ಆಗರವಾದರೆ, ಮಠಯೆಂಬುದು ಅಲೌಕಿಕ ತಾಣವಾಗಿತ್ತು. (ಈಗಲೂ ಅದರ ಅರ್ಥ ಹಾಗೆಯೇ ಇದೆ) ನಮ್ಮ ಜನ ತಮ್ಮ ದುಖಃದುಮ್ಮಾನಗಳನ್ನು, ತಾಪತ್ರಯಗಳನ್ನು ಮಠದಲ್ಲಿ ಕಳೆದು ನವಚೈತನ್ಯವನ್ನು ಪಡೆದು ಊರಿಗೆ ಅಥವಾ ಮನೆಗೆ ಮರಳಿ ಬರುತ್ತಿದ್ದರು. ಇಂಥ ಆಧ್ಯಾತ್ಮಿಕ ಅಥವಾ ಜೀವಚೈತನ್ಯದ ಕೊರತೆಯಿಂದ ಇಂದು ರೈತರ ಆತ್ಮಹತ್ಯೆಯ ಹಲವು ಕಾರಣಗಳಲ್ಲಿ ಇದು ಒಂದು ಭಾಗವಾಗಿದೆ. ನಿಜವಾದ ಸಂತ, ಸನ್ಯಾಸಿ, ಯತಿಗಳಿಗೆ ಮತ್ತೊಬ್ಬರ ಅಥವಾ ಸಮಾಜದ ದುಖಃವನ್ನು ಅಳಿಸುವ ಶಕ್ತಿಯಿದೆ.

ಕಥೆಗಾರರಲ್ಲಿ ಮೂಡಿ ಬಂದಿರುವ ಸಂಪ್ರದಾಯ ವಿಚಾರಗಳಲ್ಲಿ ಅಂಥಾ ವ್ಯತ್ಯಾಸಗಳು ಕಾಣಬರುವುದಿಲ್ಲ. ಕಾರಣ ಬಹುಪಾಲು ಲೇಖಕರು ಹಳ್ಳಿಗಳಲ್ಲಿಯೇ ಹುಟ್ಟಿಬೆಳೆದವರು. ಮುಂದೆ ಅವರ ವಿದ್ಯಾಭ್ಯಾಸದೊಂದಿಗೆ ವೃತ್ತಿಗಳು ಬೇರೆಬೇರೆ ಯಾದರೂ ಅವರ ಹೃದಯಾಂತರಾಳದಲ್ಲಿ ಅದೂ ಬಾಲ್ಯದಲ್ಲಿ ಕಂಡುಂಡ ಆಚಾರ,

ವಿಚಾರ ಸಂಪ್ರದಾಯಗಳನ್ನು ನಿರೂಪಿಸುವುದರಲ್ಲಿ ಒಟ್ಟಾರೆ ಯಶಸ್ವಿಯಾಗಿದ್ದಾರೆ. ಇಂದಿನ ಓದುಗರ ಮುಂದೆ ಹಿಂದಿನ ಗ್ರಾಮೀಣ ಪ್ರದೇಶಗಳಲ್ಲಿ ಪೂರ್ವಿಕರಿಂದ ಪರಂಪರೆಯಾಗಿ ಬದುಕಿನಲ್ಲಿ ಹಾಸುಹೊಕ್ಕಾಗಿ ಬಂದಿರುವ ಆಚಾರ, ವಿಚಾರ, ವ್ಯವಹಾರ, ಪದ್ಧತಿ, ನಂಬಿಕೆ, ಶ್ರದ್ಧೆ ಇವುಗಳನ್ನು ಯಥಾಸ್ಥಿತಿಯಲ್ಲಿ ಓದುಗರ ಕಣ್ಣ ಮುಂದೆ ಇಟ್ಟಿದ್ದಾರೆ. ಜತೆಜತೆಗೆ ಅಂಟಿಕೊಂಡಿರುವ ಮೌಢ್ಯಗಳನ್ನು ಹೇಳಿದ್ದಾರೆ. 'ಶವಯಾತ್ರೆ'ಯಂಥ ಕಥೆಗಳಲ್ಲಿ ಇಂಥ ಮೌಢ್ಯಗಳು ನಿಜವಾದರೂ; ಗುಡ್ಲು ಮೂಡುವುದು ಸಂಪ್ರದಾಯದಲ್ಲಿ ಇರುವ ಹಿಂದಿನ ವೈಜ್ಞಾನಿಕ ವಿಚಾರವನ್ನು ವಿಶ್ಲೇಷಿಸಲಾಗಿದೆ. ಇವು ಒಂದೆರಡು ಉದಾಹರಣೆಗಳಷ್ಟೆ. ಹಬ್ಬ ಹರಿದಿನಗಳ ವಿಚಾರದಲ್ಲಿ ಅವುಗಳ ಹಿಂದಿನ ಜಾನಪದೀಯ ಅಂಶಗಳನ್ನು ಗುರುತಿಸಬಹುದಾಗಿದೆ. ಆ ಸಂದರ್ಭದಲ್ಲಿ ಹಳ್ಳಿಗಳಲ್ಲಿ ಕಾಣಬರುವ ಸೌಹಾರ್ದತೆ, ಆಚಾರ, ವಿಚಾರಗಳಲ್ಲಿ, ಸಂಪ್ರದಾಯಗಳಲ್ಲಿ ಏಕಾತನತೆ ಕಾಣಬರುತ್ತದೆ. ಇಂದಿನ ಹಳ್ಳಿ ಅಥವಾ ಕೃಷಿ ಜೀವನಗಳಲ್ಲಿ ಏನೆಲ್ಲ ಆಧುನಿಕ ಸೌಲಭ್ಯಗಳು ದೊರಕುತ್ತಿದ್ದರೂ ಆ ಹಿಂದಿನ ಸರಳ ಸಹಜ ಜೀವನ ಕಾಣಬರುತ್ತಿಲ್ಲ. ಇಂದು ಹಲವಾರು ಕಾರಣಗಳಿಂದ ಸಂಕಷ್ಟದಲ್ಲಿ ಸಿಲುಕಿಕೊಂಡಿರುವ ಗ್ರಾಮೀಣರು ಅಥವಾ ರೈತಾಪಿವರ್ಗ ಈ ಕಥೆಗಳಲ್ಲಿ ಕಾಣಬರುವ 'ಸುಗ್ಗಿ' ಯಂಥ ಸಹಜ ಹಾಗೂ ಸಂತೋಷದಾಯಕ ಕೃಷಿಯ ಕಡೆಗೆ ಮುಖಮಾಡಬೇಕಾಗಿದೆ. ಅದರಲ್ಲೂ ಮುಖ್ಯವಾಗಿ ಅಂಗಡಿಗಳಿಂದ, ಸೊಸೈಟಿಗಳಿಂದ ಕೊಂಡುತರುವ ಬಿತ್ತನೆಬೀಜ, ರಾಸಾಯಾನಿಕ ಗೊಬ್ಬರದಿಂದ ವಿಮುಖವಾಗಿ ಸಹಜ, ಸಾವಯವ, ಸಂಪ್ರದಾಯಸ್ಥ ಕೃಷಿಯತ್ತ ಹಾಗೂ ಗೋವುಗಳನ್ನು ಅವಲಂಬಿಸಿಕೊಂಡು ಮುಂದಾದರೂ ಹಳ್ಳಿಗರ ಬಾಳು ಹಸನಾಗಬೇಕು. ಹಬ್ಬಹರಿದಿನಗಳ ಆಚರಣೆಯಲ್ಲಿ ಹೃದಯದಲ್ಲಿ ಮಾನವೀಯತೆ ತುಂಬಬೇಕು. ಒಟ್ಟಾರೆ ಕಥೆಗಳಲ್ಲಿ ವಿಷಯ, ವಸ್ತುಗಳ ಸುತ್ತ ಬಳಸಲಾಗಿರುವ ಮಾತುಗಳೆಲ್ಲ ಪ್ರಾದೇಶಿಕ ಭಾಷೆಯ ಮೂಲಕ ಬೆಸೆದುಕೊಂಡಿರುವ ಅಂಶಗಳು ಮುಂದಿನ ತಲೆಮಾರಿಗೆ ವರ್ಗಾಯಿಸುತ್ತಿರುವಂತಿದೆ. ಎಸರು, ಉದಕ, ಉಪ್ಪೆಸ್ರು, ಹಿಟ್ಟಿಸ್ರು, ಅವರೆ ಕಾಳು, ಮುದ್ದೆ, ಬೆರಕೆಸೊಪ್ಪು, ತೋಟ-ತುಡಿಕೆ, ಇಂದಿನ ನವ ನಾಗರೀಕತೆಯಲ್ಲಿಯೂ ಮಂಡ್ಯ ಪ್ರದೇಶದಲ್ಲಿ ಉಳಿದುಕೊಂಡು ಬಂದಿರುವುದು ಸಂತೋಷದ ವಿಷಯ.

ಈ ಅಧ್ಯಾಯದಲ್ಲಿ ಗುರುತಿಸಿರುವ ಬೆಸಗರಹಳ್ಳಿ ರಾಮಣ್ಣನವರ 'ಸುಗ್ಗಿ', 'ಮಹಾನವಮಿ', 'ನಂಜಿನ ಕೊನೆ', 'ನೆಲದ ಉಸಿರು', 'ಗರ್ಜನೆ', 'ಶೂಲ'

ಕ್ಯಾತನಹಳ್ಳಿ ರಾಮಣ್ಣನವರ 'ಸಾಮ್ತಿ', ಎಂ. ರಾಮಕೃಷ್ಣ ಅವರ 'ಸಂಕ್ರಾತಿ', 'ಚಿಕ್ಕಿಚಂದ್ರಮ', ರಮೇಶಹುಲ್ಲುಕೆರೆ ಅವರ 'ಸಾಕ್ಷಿ', ಬೋರೆಗೌಡ ಚಿಕ್ಕಮರಳಿ ಅವರ 'ಕರೆ', 'ಮಾಸ್ತಮ್ಮನ ಆತ್ಮವೃತ್ತಾಂತ', ನಾಗಮಂಗಲ ಕೃಷ್ಣಮೂರ್ತಿ ಅವರ 'ಆಕ್ರಮಣ', 'ಶವಯಾತ್ರೆ', ಶಿವಳ್ಳಿ ಕೆಂಪೇಗೌಡರ 'ದೀವಳಿಗೆ' ಈ ಮೇಲ್ಕಂಡ ಕಥೆಗಳಲ್ಲಿ ಮೂಡಿ ಬಂದಿರುವ ಸಂಪ್ರದಾಯ ವಿಚಾರಗಳನ್ನು ಹಲವೆಡೆ ವೈಜ್ಞಾನಿಕ ಹಾಗೂ ಸಾಂಸ್ಕೃತಿಕ ದೃಷ್ಟಿಕೋನದಲ್ಲಿ ವಿಶ್ಲೇಷಣೆ ಮಾಡಿದರೆ ಸಂಪ್ರದಾಯ ಅಚರಣೆ ಹಾಗೂ ನಂಬಿಕೆಗಳಲ್ಲೂ ಹಲವಾರು ವೈಜ್ಞಾನಿಕ ಅಂಗಳ ತಳಹದಿಯನ್ನು ಕಾಣಬಹುದು. ಈ ಕಥೆಗಾರರ ಕಥೆಗಳಲ್ಲಿ ಒಡಮೂಡಿರುವ ನಂಬಿಕೆ ಹಾಗೂ ಆಚರಣೆಯು ಸಂಸ್ಕೃತಿಯ ಭಾಗವಾಗಿ ಚಿತ್ರಿತಗೊಂಡಿರುವುದನ್ನು ನಾವು ಮನಗಾಣಬಹುದು.

## ಫಲಿತಗಳು

ಒಬ್ಬ ಕವಿಯು ತನ್ನ ಬದುಕಿನ ಸನ್ನಿವೇಶಗಳಲ್ಲಿ ಕೆಲಸ ಮಾಡುತ್ತಿರುವ ಹಲವಾರು ಶಕ್ತಿಗಳನ್ನು ಕುರಿತಂತೆ ಮೊದಲೇ ಹೊಂದಿರುವ ಅಥವಾ ಕೃತಿ ರಚನೆಯ ಮೂಲಕವೇ ಕಂಡುಕೊಳ್ಳುವ ವೈಚಾರಿಕವಾದ ತಿಳುವಳಿಕೆಯನ್ನು ಸಾಮಾಜಿಕ ಪ್ರಜ್ಞೆಯೆಂದು ಕರೆಯಬಹುದು. ಸಾಮಾಜಿಕ ಪ್ರಜ್ಞೆಯ ಸ್ವರೂಪವು ಅನಿವಾರ್ಯವಾಗಿಯೇ ಬರೆಯುತ್ತಿರುವ ಕವಿಯ ವರ್ಗ, ವರ್ಣ ಹಾಗೂ ಜೀವನ ವಿಧಾನಗಳಿಂದ ಸೀಮಿತವಾಗಿರುತ್ತದೆ. ಅದರೊಂದಿಗೆ ತನ್ನ ಸಮುದಾಯದ ಹಾಗೂ ಕಲಾ ಮಾಧ್ಯಮದ ಐತಿಹಾಸಿಕ ಬೆಳವಣಿಗೆಯ ಯಾವ ಖಚಿತವಾದ ಹಂತದಲ್ಲಿ ಅವನು ಬರೆಯುತ್ತಿರುವನೆಂಬ ಅಂಶವು ಸ್ವಲ್ಪ ಮಟ್ಟಿಗಾದರೂ ಅವನ ಬರವಣಿಗೆಯ ಸ್ವರೂಪವನ್ನು ತೀರ್ಮಾನಿಸುತ್ತದೆ. ಅಲ್ಲೊಮ್ಮೆ-ಇಲ್ಲೊಮ್ಮೆ ಕವಿಯ ವೈಯಕ್ತಿಕ ಪ್ರತಿಭೆಯು ಮೇಲೆ ಹೇಳಿದ ಸೀಮಿತಗಳನ್ನು ದಾಟಬಹುದು. ಆದರೆ ಆ ದಾಟುವಿಕೆಯ ಸ್ವರೂಪ ಕೂಡ ಮತ್ತೆ ವರ್ಗ ವರ್ಣಗಳನ್ನೇ ಅವಲಂಬಿಸಿರುತ್ತದೆ. ಸಾಹಿತ್ಯ ರಚನೆಯಲ್ಲಿ ತೊಡಗುವ ಹೊರಮನಗಳೆರಡರ ದೃಷ್ಟಿಯಿಂದ ಈ ಮಹಾ ಪ್ರಬಂಧವನ್ನು ಪರಿಶೀಲಿಸಲಾಗಿದೆ.

ಸಾಮಾಜಿಕ ಪ್ರಜ್ಞೆಯ ಪರಿಕಲ್ಪನೆ ವಿಷಯ ಅಥವಾ ವಿಚಾರ ಒಂದು ಜಿಲ್ಲೆಗೆ, ಒಂದು ರಾಜ್ಯಕ್ಕೆ ಅಥವಾ ದೇಶಕ್ಕೆ ಸೀಮಿತವಾಗದೆ ಇಡೀ ವಿಶ್ವಕ್ಕೆ ಸಂಬಂಧಿಸಿದ ವಿಷಯವಾಗಿದೆ. ಈ ನಿಟ್ಟಿನಲ್ಲಿ ಸಾಮಾಜಿಕ ಕಥಾ ಸಾಹಿತ್ಯಕ್ಕೆ ಒಂದು ಹೊಸ ರೂಪ ಸಿಕ್ಕಿದ್ದು ಕಳೆದ ಶತಮಾನದ ಆದಿಯಲ್ಲಿ. ಅದೂ ಪಾಶ್ಚಾತ್ಯ ಕಥಾ ಸಾಹಿತ್ಯವು ದೇಶೀಯ ಲೇಖಕರ ಮೇಲೆ ಗಾಢ ಪ್ರಭಾವವನ್ನು ಬೀರಿತು. ಕನ್ನಡದ ಹೊಸಯುಗದ ಸಣ್ಣಕಥೆಗೆ ಮಾಸ್ತಿಯವರು ತಮ್ಮ ಕಥೆಗಳ ಮೂಲಕ ನಾಂದಿಹಾಡಿದರು. ಅಲ್ಲೀಂದೀಚೆಗೆ ಕನ್ನಡದಲ್ಲಿ ಕಥಾ ರಚನೆ ವಿಶಿಷ್ಟ ರೂಪವನ್ನು ಪಡೆದುಕೊಂಡವು. ಕುವೆಂಪು ಅಂಥ ಮಹಾಕವಿಗಳು ಕಥೆ ಕಾದಂಬರಿಗಳನ್ನು ರಚಿಸಿದರು. ವಿಶೇಷವಾಗಿ ಸಾಹಿತಿಗಳು ಜೀವಿಸಿದ, ಅನುಭವಿಸಿದ ಪರಿಸರದಲ್ಲಿ ಅದು ಮಲೆನಾಡಾಗಿರಲಿ, ಬಯಲು ಸೀಮೆಯಾಗಿರಲಿ, ಕರಾವಳಿ ತೀರದಲ್ಲಾಗಿರಲಿ ಅವುಗಳಿಗೆ ಹೊಂದಿಕೊಂಡಂತೆ ಕಥೆಗಳು ರಚಿತವಾದವು. ಭಾಷಾದೃಷ್ಟಿಯಲ್ಲಿ, ಪಾತ್ರಗಳ ನಿರೂಪಣೆಯಲ್ಲಿ, ಪ್ರಾಕೃತಿಕ ವರ್ಣನೆಯಲ್ಲಿ ಓದುಗರ ಹೃದಯವನ್ನು

ತಟ್ಟಿದವು. ಮಲೆನಾಡಿನ ಕುವೆಂಪು, ತೇಜಸ್ವಿ, ಕರಾವಳಿಯ ಪಂಜೆಮಂಗೇಶರಾಯ, ಶಿವರಾಮಕಾರಂತ, ಬಯಲು ಸೀಮೆಯ ಗೊರೂರು ರಾಮಸ್ವಾಮಿ ಅಯ್ಯಂಗಾರ್, ಎಚ್.ಎಲ್. ನಾಗೇಗೌಡ, ಬೆಸಗರಹಳ್ಳಿ ರಾಮಣ್ಣ, ದೇವನೂರು ಮಹದೇವ. ಉತ್ತರ ಕರ್ನಾಟಕದ ಬಸವರಾಜ ಕಟ್ಟೀಮನಿ, ರಾವ್ ಬಹುದ್ದೂರ್, ಮೊದಲಾದವರು ಪ್ರಮುಖರು, ಪ್ರಾದೇಶಿಕ ಭಾಷೆಯೊಂದಿಗೆ ಸಾಮಾಜಿಕ ಚಿತ್ರಣವನ್ನು ನೀಡಿದ್ದಾರೆ. ಇದು ಕೆಲ ಉದಾಹರಣೆಯಷ್ಟೆ. ಇನ್ನೂ ಮುಂತಾದ ಅಪ್ರತಿಮ ಲೇಖಕರು ತಮ್ಮ ಪ್ರಾದೇಶಿಕ ಭಾಷೆ, ಪರಿಸರ, ಜನ ಜೀವನದ ರೀತಿರಿವಾಜುಗಳನ್ನು ಚಿತ್ರಿಸಿಕೊಟ್ಟಿದಾರೆ.

ಈ ನಿಟ್ಟಿನಲ್ಲಿ ಮಂಡ್ಯ ಜಿಲ್ಲೆಯಿಂದ ಪುಟಿದೆದ್ದ ಸ್ವಾತಂತ್ರ್ಯ ಪೂರ್ವದ ಗ್ರಾಮೀಣ ಬದುಕನ್ನು ನೋಡಿದ ಹಿರಿಯ ತಲೆಮಾರಿನ ಎಚ್.ಎಲ್. ನಾಗೇಗೌಡರು ಕಾದಂಬರಿಗಳನ್ನು ರಚಿಸುವುದಲ್ಲದೆ ಸಣ್ಣಕಥೆಗಳನ್ನು ರಚಿಸಿದ್ದಾರೆ. ಕಾದಂಬರಿಯಲ್ಲಿ ಬರುವಂತೆಯೇ ಇವರ ಸಣ್ಣ ಕಥೆಗಳಲ್ಲಿ ಮಂಡ್ಯ ಜಿಲ್ಲೆಯ ನಾಗಮಂಗಲ ಗುಡ್ಡಗಾಡು ಸೀಮೆಯ ಭೌಗೋಳಿಕ ಪರಿಸರ, ಪ್ರಾದೇಶಿಕ ಭಾಷಾ ಶೈಲಿ, ಜನಜೀವನದ ವಿಧಿವಿಧಾನಗಳು ಹಾಸುಹೊಕ್ಕಾಗಿವೆ. ಆ ಪರಿಸರದ ಅಂದಿನ ಸಾಮಾಜಿಕ ಪ್ರಜ್ಞೆಯ ವಿವಿಧ ಮುಖಗಳನ್ನು ತಮ್ಮ ಸಾಹಿತ್ಯದಲ್ಲಿ ನಿರೂಪಿಸಿದ್ದಾರೆ. ಸಮಾಜದ ಗಣ್ಯ-ಅಗಣ್ಯ, ಜಾತಿ, ಮತ, ಜಗಳ-ಬೋರಂಟಿ, ಉಳ್ಳವರು, ಬಡವರು, ದಲಿತರು, ಸ್ತ್ರೀಯರು ಹೀಗೆ ಎಲ್ಲರ ಬದುಕಿನ ದೃಷ್ಟಿಕೋನವನ್ನು ಚಿತ್ರಿಸಿದ್ದಾರೆ, ಇನ್ನು ಸಣ್ಣಕಥೆಗಳಲ್ಲಿ ಅಗ್ರಸ್ಥಾನ ಪಡೆದಿರುವ ಬೆಸಗರಹಳ್ಳಿ ರಾಮಣ್ಣನವರು ಮಂಡ್ಯ, ಮದ್ದೂರು ಭಾಗದ ಪರಿಸರ ಭಾಷಾ ಶೈಲಿಯನ್ನು ಚನ್ನಾಗಿ ದುಡಿಸಿಕೊಂಡಿದ್ದಾರೆ. ಕಥೆಗಳಲ್ಲಿ ಕಾಣಬರುವ ಸಾಮಾಜಿಕ ಪ್ರಜ್ಞೆಯನ್ನು ಎಳೆಎಳೆಯಾಗಿ ಬಿಡಿಸಿದ್ದಾರೆ.

ಸಾಮಾಜಿಕ ನಿಕೃಷ್ಟ ನಡವಳಿಕೆಯನ್ನು ಮಂಡ್ಯ ಜಿಲ್ಲೆಯ ಲೇಖಕರು ತೀವ್ರವಾಗಿ ಗಮನಿಸಿದ್ದಾರೆ. ಅವರ ಕಣ್ಣಿಗೆ ಬೀಳುತ್ತಿದ್ದ ಶೋಷಿತ ಘಟನೆಗಳು ಮನಕರಗುವುದಷ್ಟೇ ಅಲ್ಲ ಅವುಗಳನ್ನು ಕಥೆಗಳಲ್ಲೂ ನಿರೂಪಿಸಿದ್ದಾರೆ. ಸಾಹಿತ್ಯ ರೂಪದಲ್ಲಿ ಅದನ್ನು ಎಳೆಎಳೆಯಾಗಿ ಬಿಡಿಸಿದ್ದಾರೆ. ಆಯ್ಕೆ ಮಾಡಿಕೊಂಡಿರುವ ಕಥಾವಸ್ತು, ಭಾಷೆ ನಿರ್ದಿಷ್ಟ ಪ್ರಾದೇಶಿಕವಾಗಿಯೇ ಗೋಚರಿಸುತ್ತದೆ. ಅಂಥ ವ್ಯತ್ಯಾಸಗಳೂ ಕಾಣಬರುವುದಿಲ್ಲ. ಇನ್ನಿತರ ಅಧ್ಯಾಯಗಳಲ್ಲಿ ತಿಳಿಸಿರುವಂತೆ ಬಹುತೇಕ ಕಥೆಗಳು ಸ್ವಾತಂತ್ರ್ಯಪೂರ್ವ ಹಾಗೂ ನಂತರದ ಕೆಲ ಅವಧಿಯಲ್ಲಿ

ಇದ್ದಂತ ಸಾಮಾಜಿಕ ಪರಿಸ್ಥಿತಿ. ಈಗ ಮಂಡ್ಯ ಜಿಲ್ಲೆಯಲ್ಲಿ ಹುಡಕಿದರೂ ಜೀತ ಪದ್ಧತಿ ಇಲ್ಲ. ಕಥೆಗಳಲ್ಲಿ ಕಾಣಬರುವ ಜೀತ, ಗೌಡಿಕೆ, ಪಟೇಲ, ಶಾನುಭೋಗ ಇವೆಲ್ಲ ಪ್ರಜಾತಂತ್ರ ವ್ಯವಸ್ಥೆಯಲ್ಲಿ ಬಹು ಮಟ್ಟಿಗೆ ಅಳಿದುಹೋಗಿವೆ ಎಂದರೆ ತಪ್ಪಾಗಲಾರದು.

ಕಥೆಗಳಲ್ಲಿ ಕೇಳಿ ಬರುವ ಗೌಡಿಕೆ ಅಥವಾ ಶ್ರೀಮಂತರ ಕ್ರೌರ್ಯದ ಮಾತುಗಳು ಕಾಲಕ್ಕೆ ಮಹತ್ವ ಪಡೆದಿದ್ದವು. ಈಗ ಅಂಥ ಕ್ರೌರ್ಯದ ಮಾತುಗಳು ಕ್ಷೀಣಿಸಿವೆ. ಹಳ್ಳಿಗರಲ್ಲಿ, ವಿದ್ಯಾವಂತರಲ್ಲಿ ಹಾಗೂ ತಿಳಿದವರಲ್ಲಿ ಸಮಾನತೆಯನ್ನು ಕಾಣಬಹುದು. ಶೋಷಣೆ, ಶೋಷಿತ ಎನ್ನುವುದು ಮಂಡ್ಯ ಜಿಲ್ಲೆಯಲ್ಲಿ ಈಗ ಸವಕಲಾಗಿವೆ ಹಳ್ಳಿಯಲ್ಲಿ ವಾಸ ಮಾಡುವರೆಲ್ಲ ಒಂದೇ ವರ್ಗಕ್ಕೆ ಸೇರಿದವರಾಗಿದ್ದಾರೆ. ಕಾರಣ ಕೃಷಿ ಕೃಷಿಕರನ್ನು ಹಲವಾರು ಕಾರಣಗಳಿಂದ ಕಷ್ಟಕಾರ್ಪಣ್ಯಗಳಿಗೆ ಈಡುಮಾಡಿದೆ. ಅದು ವೈಯಕ್ತಿಕವಾಗಿ ಹಾಗೂ ಇನ್ನಿತರ ಕಾರಣಗಳಿಂದಾಗಿ ರೈತರ ಆತ್ಮಹತ್ಯೆಗಳೇ ಈ ಜಿಲ್ಲೆಯಲ್ಲಿ ಸರಣಿಗಳಲ್ಲಿ ನಡೆಯುತ್ತಿವೆ.

ಒಟ್ಟಾರೆ ಜಿಲ್ಲೆಯ ಕಥಾಲೇಖಕರು ತಮ್ಮ ಕಥೆಗಳಲ್ಲಿ 'ಶೋಷಿತ' ಎಂಬ ಪದವನ್ನು ಹೇರಳವಾಗಿ ಬಳಸಿದ್ದಾರೆ. ಬಡವ-ಶ್ರೀಮಂತರ ನಡುವಿನ ವ್ಯತ್ಯಾಸವನ್ನು ತಾವು ಕಂಡುಂಡುಂತೆ ಬರವಣಿಗೆ ರೂಪದಲ್ಲಿ ಇಳಿಸಿದ್ದಾರೆ. ದಲಿತರ ಬಗ್ಗೆ ಅಪಾರ ಪ್ರೀತಿಯನ್ನು ಇಟ್ಟುಕೊಂಡಿದ್ದಾರೆ. 'ಶೋಷಣೆ, ಶೋಷಿತರು' ಎನ್ನುವುದು ಜಿಲ್ಲೆಯಲ್ಲಿ ಸವಕಲು ನಾಣ್ಯಗಳಂತಾಗಿವೆ ಎಲ್ಲೋ ಕೆಲವಷ್ಟು ಉಳಿದಿವೆಯಾದರೂ ಮುಂದಿನ ದಿನಗಳಲ್ಲಿ ಸುಧಾರಣೆ ಆಗಬಹುದು ಎಂಬ ನಿರೀಕ್ಷೆ ಹುಟ್ಟಿಸುತ್ತದೆ. ಏಕೆಂದರೆ ಪ್ರಮುಖ ಮಾಧ್ಯಮವಾದ 'ಶಿಕ್ಷಣ' ಪರಿಣಾಮಕಾರಿಯಾಗಿ ಕೆಲಸ ಮಾಡುತ್ತಿದೆ ಅದು ಎಲ್ಲರನ್ನೂ ಒಗ್ಗೂಡಿಸುವಂಥ ದಿಕ್ಕಿನತ್ತ ಒಯ್ಯುತ್ತದೆ. ಜಿಲ್ಲೆಯ ಕಥೆಗಾರರ ಕಥಾ ವಸ್ತುಗಳು ಒಂದು ಕಾಲದ ಜನಜೀವನವನ್ನು ಪ್ರತಿಬಿಂಬಿಸಿವೆ. ಹಳೆಯಜಾಡನ್ನು ಬಿಟ್ಟು ಹೊಸ ದಿಕ್ಕಿನತ್ತ ನೋಡುವುದು ಉಚಿತವೇ ಸರಿ.

ವರ್ಗ ಸಂಘರ್ಷದ ವಿಷಯವನ್ನು ತೆಗೆದುಕೊಂಡಾಗ ಎಲ್ಲ ಕಥೆಗಾರರ ಬರಹ ಮತ್ತು ವಸ್ತು ಒಂದೇ ತೆರನಾದ ಒಡಂಬಡಿಕೆಯಿಂತಿದೆ. ಇದು ಒಂದು ಜಿಲ್ಲೆಯ ಅಥವಾ ಮಂಡ್ಯ ಪ್ರಾದೇಶಿಕ ಕಥೆಗಾರರ ಅನುಭವದ ಅಂತರಾಳದಲ್ಲಿ ಮೂಡಿಬಂದಿದೆ. ಅದೇ ಪಟೇಲ, ಶಾನುಬೋಗ, ವಿ.ಎ.(Village Accountant-ಗ್ರಾಮ

ಲೆಕ್ಕಾಧಿಕಾರಿ) ಶ್ರೀಮಂತ-ಬಡವ, ಬಡ್ಡಿಸಾಲ, ಶೋಷಿತವರ್ಗ, ಬಲಿಷ್ಠರ ದರ್ಬಾರು, ಸರಕಾರದ ಕಛೇರಿಗಳಲ್ಲಿ ಲಂಚದ ಹಾವಳಿ, ಚಳವಳಿ ನಾಯಕರ ಕುಮ್ಮಕ್ಕು, ಮುಗ್ಧರ ಜೈಲುಪಾಲು, ರಾಜಕೀಯ ಲಾಭ, ಬಡವರ ಕೂಗು, ಆಕ್ರೋಶ-ಹೀಗೆ ಕಥೆಗಳಲ್ಲಿ ಅಡಕವಾಗಿವೆ. ಒಟ್ಟಾರೆ ವರ್ಗಸಂಘರ್ಷ, ಜಾತಿ, ಕುಲಗಳನ್ನು ಒಳಗೊಂಡು ಸಮಾಜದಲ್ಲಿನ ಸ್ವಸ್ಥ್ಯವನ್ನು ಹಾಳು ಮಾಡುವುದನ್ನು ಕಥೆಗಳು ಅರ್ಥಪೂರ್ಣವಾಗಿ ಕಟ್ಟಿಕೊಡುತ್ತವೆ. ಶೋಷಣೆ ಎಂಬುದಕ್ಕೆ ನಾನಾ ಮುಖಗಳು. ಅದು ಗಂಡು, ಹೆಣ್ಣು, ಚಿಕ್ಕವರು, ದೊಡ್ಡವರು ಎಂಬ ಭೇದಭಾವವಿಲ್ಲದೆ ತನ್ನ ಅಟ್ಟಹಾಸವನ್ನು ಮೆರೆಯುತ್ತದೆ. ಅದಕ್ಕೆ ಪೂರಕವಾದ ಸಾಮಾಜಿಕ ಚೌಕಟ್ಟುಗಳು ಇಂತಹ ಶೋಷಣೆಗೆ ದಾರಿಮಾಡಿಕೊಟ್ಟಿರುವುದನ್ನು ಕಥೆಗಳಲ್ಲಿ ಕಾಣಬಹುದು. ಮಂಡ್ಯಜಿಲ್ಲೆಯ ಸಾಮಾಜಿಕ ವ್ಯವಸ್ಥೆ ಒಂದೇ ತೆರನಾಗಿರುವುದರಿಂದ ಜಿಲ್ಲೆಯ ಕಥೆಗಾರರೆಲ್ಲರೂ ತಮ್ಮ ಕಥೆಗಳಲ್ಲಿ ತಂದಿರುವ ಇಂತಹ ಸಂದರ್ಭಗಳು ಒಂದೇ ತೆರನಾಗಿ ಕಂಡುಬರುವುದನ್ನು ಕಾಣಬಹದು.

ಹಿಂದೆ ಅವಿಭಕ್ತ ಕುಟುಂಬಗಳಿದ್ದಾಗ ಸಾಮರಸ್ಯ ಹೊಂದಾಣಿಕೆಯ ಪಾಠ ಕುಟುಂಬದಿಂದಲೇ ಪ್ರಾರಂಭವಾಗುತ್ತಿತ್ತು. ಹಿರಿಯರು, ತಾಯಂದಿರು ಅದರ ಜವಾಬ್ದಾರಿ ತೆಗೆದುಕೊಳ್ಳುತ್ತಿದ್ದರು. ಇಂದು ವಿಭಕ್ತ ಕುಟುಂಬಗಳು ಅನುಭವೀ ಹಿರಿಯರ ಮಾರ್ಗದರ್ಶನವಿಲ್ಲದೆ ಹುಟ್ಟುವ, ಆಟವಾಡುವ ಮಕ್ಕಳೂ ಅನಾಥ ಪ್ರಜ್ಞೆ ಬೆಳೆಸಿಕೊಂಡು ಸಂಬಂಧ ಎನಿಸುವ ಯಾವ ಪ್ರತಿಸ್ಪಂದನವೂ ಇಲ್ಲದೆ ಬೆಳೆಯುತ್ತಿರುವುದು ಕುಟುಂಬಕ್ಕಲ್ಲದೆ, ಸಮಾಜಕ್ಕೂ ಮತ್ತು ರಾಷ್ಟ್ರಕ್ಕೂ ಆತಂಕಕಾರಿ ಸಂಗತಿಯಾಗಿದೆ.

ಒಟ್ಟಾರೆ ಕೌಟುಂಬಿಕ ಸಂಘರ್ಷಗಳ ನೆಲೆಗಳಲ್ಲಿ ಮಂಡ್ಯ ಜಿಲ್ಲೆಯ ಕಥೆಗಾರರ ಸಣ್ಣಕಥೆಗಳಲ್ಲಿ ಬರುವ ಪ್ರಾಸಂಗಿಕ ಸಂಘರ್ಷಗಳನ್ನು ಅವಲೋಕಿಸಿದಾಗ ಹೆಚ್ಚೂ ಕಮ್ಮಿ ಎಲ್ಲಾ ಲೇಖಕರ ವಸ್ತು, ಭಾಷೆ, ಸಂಘರ್ಷಗಳ ನಿರೂಪಣೆಯಲ್ಲಿ ಅಂಥ ವ್ಯತ್ಯಾಸಗಳು ಕಾಣಬರುವುದಿಲ್ಲ. ಎಲ್ಲಾ ಹಳ್ಳಿಗಾಡಿನ ಚಿತ್ರಣಗಳಿಂದ ಮೈದಾಳಿವೆ. ಪಾತ್ರಗಳೂ ಅಂತೆಯೇ ಬಡವ-ಬಲ್ಲಿದ, ಪಟೇಲ, ಶಾನುಭೋಗ, ಶೋಷಣೆ-ದಬ್ಬಾಳಿಕೆ, ಮಹಿಳೆಯ ಪ್ರಜ್ಞೆ-ಅನಾಥ ಪ್ರಜ್ಞೆ ಮುಂತಾದವು ಬಂದಿವೆ. ಇಂದಿನ ಆಧುನಿಕ ಜಾಗತೀಕರಣದ ವ್ಯವಸ್ಥೆಯಲ್ಲಿ ಇರಬಹುದಾದ ಕೌಟುಂಬಿಕ ಸಂಘರ್ಷದ ವಸ್ತುಗಳು ಹೆಚ್ಚು ಕಾಣಬರುವುದಿಲ್ಲ. ಹಿಂದೆಯೇ

ಸೂಚಿಸಿರುವಂತೆ ಮಂಡ್ಯ ಜಿಲ್ಲೆಯ ಬಹುತೇಕ ಕಥೆಗಾರರ ಕಥಾವಸ್ತು ಸ್ವಾತಂತ್ರ ಭಾರತದ ಹಿಂದಣ-ಮುಂದಣಗಳಲ್ಲಿ ಕಂಡು-ಕೇಳಿದ ಕಥೆಗಳಾಗಿವೆ.

ಕಥಾ ಕಥೆಗಾರರಲ್ಲಿ ಮೂಡಿ ಬಂದಿರುವ ಸಂಪ್ರದಾಯ ವಿಚಾರಗಳಲ್ಲಿ ಅಂಥಾ ವ್ಯತ್ಯಾಸಗಳು ಕಾಣಬರುವುದಿಲ್ಲ. ಕಾರಣ ಬಹುಪಾಲು ಕಥೆಗಾರರು ಹಳ್ಳಿಗಳಲ್ಲಿಯೇ ಹುಟ್ಟಿಬೆಳೆದವರು. ಮುಂದೆ ಅವರ ವಿದ್ಯಾಭ್ಯಾಸದೊಂದಿಗೆ ವೃತ್ತಿಗಳು ಬೇರೆಬೇರೆಯಾದರೂ ಅವರ ಹೃದಯಾಂತರಾಳದಲ್ಲಿ ಅದೂ ಬಾಲ್ಯದಲ್ಲಿ ಕಂಡುಂಡ ಆಚಾರ, ವಿಚಾರ ಸಂಪ್ರದಾಯಗಳನ್ನು ನಿರೂಪಿಸುವುದರಲ್ಲಿ ಒಟ್ಟಾರೆ ಯಶಸ್ವಿಯಾಗಿದ್ದಾರೆ. ಇಂದಿನ ಓದುಗರ ಮುಂದೆ ಹಿಂದಿನ ಗ್ರಾಮೀಣ ಪ್ರದೇಶಗಳಲ್ಲಿ ಪೂರ್ವಿಕರಿಂದ ಪರಂಪರೆಯಾಗಿ ಬದುಕಿನಲ್ಲಿ ಹಾಸುಹೊಕ್ಕಾಗಿ ಬಂದಿರುವ ಆಚಾರ, ವಿಚಾರ, ವ್ಯವಹಾರ, ಪದ್ಧತಿ, ನಂಬಿಕೆ, ಶ್ರದ್ಧೆ ಇವುಗಳನ್ನು ಯಥಾಸ್ಥಿತಿಯಲ್ಲಿ ಓದುಗರ ಕಣ್ಣ ಮುಂದೆ ಇಟ್ಟಿದ್ದಾರೆ. ಜತೆಜತೆಗೆ ಅಂಟಿಕೊಂಡಿರುವ ಮೌಢ್ಯಗಳನ್ನು ಹೇಳಿದ್ದಾರೆ. 'ಶವಯಾತ್ರೆ'ಯಂಥ ಕಥೆಗಳಲ್ಲಿ ಇಂಥ ಮೌಢ್ಯಗಳು ನಿಜವಾದರೂ; ಗುಡ್ಲು ಮೂಡುವುದು ಸಂಪ್ರದಾಯದಲ್ಲಿ ಇರುವ ಹಿಂದಿನ ವೈಜ್ಞಾನಿಕ ವಿಚಾರವನ್ನು ವಿಶ್ಲೇಷಿಸಲಾಗಿದೆ. ಇವು ಒಂದೆರಡು ಉದಾಹರಣೆಗಳಷ್ಟೆ. ಹಬ್ಬ ಹರಿದಿನಗಳ ವಿಚಾರದಲ್ಲಿ ಅವುಗಳ ಹಿಂದಿನ ಜಾನಪದೀಯ ಅಂಶಗಳನ್ನು ಗುರುತಿಸಬಹುದಾಗಿದೆ. ಆ ಸಂದರ್ಭದಲ್ಲಿ ಹಳ್ಳಿಗಳಲ್ಲಿ ಕಾಣಬರುವ ಸೌಹಾರ್ದತೆ, ಅಚಾರ, ವಿಚಾರಗಳಲ್ಲಿ, ಸಂಪ್ರದಾಯಗಳಲ್ಲಿ ಏಕಾತನತೆ ಕಾಣಬರುತ್ತದೆ. ಇಂದಿನ ಹಳ್ಳಿ ಅಥವಾ ಕೃಷಿ ಜೀವನಗಳಲ್ಲಿ ಏನೆಲ್ಲ ಆಧುನಿಕ ಸೌಲಭ್ಯಗಳು ದೊರಕುತ್ತಿದ್ದರೂ ಆ ಹಿಂದಿನ ಸರಳ ಸಹಜ ಜೀವನ ಕಾಣಬರುತ್ತಿಲ್ಲ.

'ಹಳೇಬೇರಿನ, ಹೊಸ ಚಿಗುರಿನ' ನವಚೈತನ್ಯದ ವಾತಾವರಣ ಪುನಃ ನಿರ್ಮಾಣವಾಗಬೇಕಾಗಿದೆ. ಇದಕ್ಕೆ ಪೂರಕವಾಗಿ ಇಂದಿನ ಪೀಳಿಗೆಯವರಿಗೆ ನಮ್ಮ ಪೂರ್ವಿಕರ ಸಂಸ್ಕೃತಿಯ ಅರಿವನ್ನು ಮೂಡಿಸಬೇಕಾಗಿದೆ. ಮೇಲಾಗಿ ಅವು ನಮ್ಮ ಪೂರ್ವಿಕರ ಜೀವಪ್ರೀತಿಯ ಸಂಪ್ರದಾಯಗಳು ಎಂದರೂ ತಪ್ಪಾಗುವುದಿಲ್ಲ. ವ್ಯಕ್ತಿ ಮತ್ತು ಸಮಾಜಗಳೆರಡೂ ಜೀವಂತ ವ್ಯವಸ್ಥೆಗಳಾದುದ್ದರಿಂದ ಅವುಗಳು ಪರಸ್ಪರ ಪ್ರಭಾವಬೀರದೆ ಇರಲಾರವು ತನ್ನ ಕಾಲದ ಸಾಮಾಜಿಕ ಸ್ಥಿತಿಗಳ ಬಗ್ಗೆ ಕವಿ ಮತ್ತು ಅವನ ತಕ್ಷಣದ ಪರಿಸರವು ತಳೆಯುವ ನಿರ್ಧಾರವು ಮೌಲ್ಯವಾಗಿರುತ್ತದೆ. ಸಾಮಾಜಿಕ ವಾಸ್ತವಗಳ ಕಾರಣಗಳನ್ನು ಕುರಿತಂತೆ ತನ್ನ ಸಾಹಿತ್ಯದಲ್ಲಿ

ಬಿಂಬಿಸುವ ಕಾರ್ಯವನ್ನು ಮಾಡುತ್ತಾನೆ. ಹೀಗೆ ಮಂಡ್ಯ ಜಿಲ್ಲೆಯ ಕಥೆಗಾರರು ತಮ್ಮ ಕಾಲಮಾನದ ಗ್ರಾಮೀಣ ಬದುಕನ್ನು ತಾವು ಕಂಡಂತೆ ಕಥೆಗಳ ವಸ್ತುಗಳಲ್ಲಿ ಬಳಸಿಕೊಂಡಿರುವುದು ಸ್ಪಷ್ಟವಾಗಿದೆ. ಅಸ್ವಾಭಾವಿಕ ರಚನೆಗಳಿಗಿಂತ ಸ್ವಾಭಾವಿಕ ರಚನೆಗೆ ಒತ್ತುಕೊಟ್ಟಿರುವುದನ್ನು ಕಂಡುಕೊಂಡಿದ್ದೇನೆ.

ಈ ರೀತಿಯಾಗಿ ಕಥೆಗಾರರು ಯಾವುದೇ ಕಾಲಘಟ್ಟಕ್ಕೆ ಸಿಲುಕದೆ ತಮ್ಮ ಕಥೆಗಳಲ್ಲಿ ರೈತ ಸಂವೇದನೆ, ದಲಿತ ಸಂವೇದನೆ, ಸ್ತ್ರೀ ಸಂವೇದನೆಗಳಿಗೆ ಹೆಚ್ಚು ಮಹತ್ವ ಕೊಟ್ಟಿರುವುದು ಅಧ್ಯಯನದಿಂದ ಕಂಡುಬಂದಿದೆ. ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ತಮ್ಮದೇ ಆದ ಕೊಡುಗೆ ನೀಡಿರುವುದು ಗಮನಾರ್ಹ ವಿಚಾರವಾಗಿದೆ. ಕನ್ನಡ ವಿಮರ್ಶಾ ಪರಂಪರೆಯಲ್ಲಿ ಹೆಚ್.ಎಲ್. ನಾಗೇಗೌಡ, ಬೆಸಗರಹಳ್ಳಿ ರಾಮಣ್ಣ, ಜೀ.ಶಂ ಪರಮಶಿವಯ್ಯ, ಡಿ. ಲಿಂಗಯ್ಯ ಇವರನ್ನು ಕುರಿತು ಗುರುತಿಸಲಾಗಿದೆ. ಇವರುಗಳನ್ನು ಒಳಗೊಂಡಂತೆ ಇನ್ನುಳಿದ ಕಥೆಗಾರರ ಕಥೆಗಳನ್ನು ಅಧ್ಯಯನದೊಳಗೆ ಸೇರಿಸಿ ಅವರ ಕಥಾ ಸಾಹಿತ್ಯದ ಶ್ರೇಷ್ಟತೆಯನ್ನು ಕಂಡುಕೊಂಡು ಅವುಗಳಿಗೆ ಮೌಲ್ಯ ಕಟ್ಟುವ ಪ್ರಯತ್ನ ಪ್ರಬಂಧದ ಸತ್ವವಾಗಿದೆ.

## ಅನುಬಂಧ-೧
## ಪ್ರಾಥಮಿಕ ಆಕಾರ ಗ್ರಂಥಗಳು


೧. ಕ್ಯಾತನಹಳ್ಳಿ ರಾಮಣ್ಣ, ೧೯೬೭, ತಿಳಿಜಲ, ದಿನಕರ ಪ್ರಕಾಶನ, ಮಂಡ್ಯ.

೨. ಕ್ಯಾತನಹಳ್ಳಿ ರಾಮಣ್ಣ, ೨೦೦೦, ಎಂದು ಬಂದಿತೋ ಮಳೆ, ಕ್ರಾಂತಿಸಿರಿ ಪ್ರಕಾಶನ.

೩. ನಾಗೇಗೌಡ.ಎಚ್.ಎಲ್, ೧೯೭೯, ಕಂಡು ಕೇಳಿದ ಕಥೆಗಳು, ಸಾಹಿತ್ಯ ಸದನ ಪ್ರಕಾಶನ, ಬೆಂಗಳೂರು.

೪. ನಾಗತಿಹಳ್ಳಿ ಚಂದ್ರಶೇಖರ, ೧೯೮೫, ನನ್ನ ಪ್ರೀತಿಯ ಹುಡುಗನಿಗೆ, ಕಥಾಸಂಕಲನ ಅಭಿವ್ಯಕ್ತಿ ಪ್ರಕಾಶನ, ಮೈಸೂರು.

೫. ನಾಗಮಂಗಲ ಕೃಷ್ಣಮೂರ್ತಿ, ೨೦೦೭, ಚಂದ್ರಸಾನಿ, ಶ್ರೀರಾಮ ಪ್ರಕಾಶನ, ಮಂಡ್ಯ.

೬. ಪರಮಶಿವಯ್ಯ.ಜೀ.ಶಂ, ೧೯೮೮, ಮಬ್ಬು ಜಾರಿದ ಕಣಿವೆಯಲ್ಲಿ, ಸಾಹಿತ್ಯ ಸದನ ಪ್ರಕಾಶನ, ಮೈಸೂರು.

೭. ಬೆಸಗರಹಳ್ಳಿ ರಾಮಣ್ಣ, ೧೯೮೬, ಕನ್ನಂಬಾಡಿ,( ಸಮಗ್ರ ಕಥೆಗಳು), ಪಲ್ಲವಿ ಪ್ರಕಾಶನ, ಮಂಡ್ಯ,

೮. ಬೋರೇಗೌಡ ಚಿಕ್ಕಮರಳಿ, ೧೯೮೮, ಏಳು ಸುತ್ತಿನ ಕೋಟೆ, ಮಂಡ್ಯ.

೯. ಬೋರೇಗೌಡ ಚಿಕ್ಕಮರಳಿ, ೨೦೦೬, ಗೋಡೆಗಳ ನಡುವೆ, ಅನಿಕೇತನ ಪ್ರಕಾಶನ, ಮಂಡ್ಯ.

೧೦. ರಮೇಶ್ ಹುಲ್ಲುಕೆರೆ, ೨೦೦೬, ಸೊಗಡು ಕಥಾ ಸಂಕಲನ, ಪ್ರಕಾಶಕರು, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಮಂಡ್ಯ, ಮಂಡ್ಯ.

೧೧. ರಾಮಕೃಷ್ಣ.ಎಂ, ೧೯೭೦, ತೇರು ಬಂತು ತವರಿಗೆ, ಮೈಸೂರು.

೧೨. ಲಿಂಗಯ್ಯ.ಡಿ, ೧೯೬೬, ಆಟಿಕೆ, ದಿನಕರ ಪ್ರಕಾಶನ, ಮಂಡ್ಯ.

೧೩. ಲಿಂಗಯ್ಯ. ಡಿ, ೧೯೮೯, ರಣಕಾಟಿಗಳು, ದಿನಕರ ಪ್ರಕಾಶನ, ಮಂಡ್ಯ.
೧೪. ವೆಂಕಟಯ್ಯ.ಜಿ. ೧೯೫೭, ಮಗಳ ಮಾಂಗಲ್ಯ. ಲಕ್ಷ್ಮೀ ಸ್ಮಾರಕ ಗ್ರಂಥಮಾಲೆ, ಮೈಸೂರು.
೧೫. ಹರವು ದೇವೇಗೌಡ, ೨೦೧೦, ಮದಕ, ಉದಯಕಾಲ ಪ್ರಕಾಶನ, ಮಂಡ್ಯ.
೧೬. ಶಂಭೂನಹಳ್ಳಿ ಕೃಷ್ಣೇಗೌಡ(ಸಂ), ೨೦೦೯, ಮಂಡ್ಯದ ಮಣ್ಣಿನ ಕಥೆಗಳು, ನಾಗರತ್ನ ಪ್ರಕಾಶನ, ಮಂಡ್ಯ.
೧೭. ಶಿವಳ್ಳಿ ಕೆಂಪೇಗೌಡ, ೨೦೦೮, ಚಮ್ಮಾವುಗೆ, ಉದಯಕಾಲ ಪ್ರಕಾಶನ, ಮಂಡ್ಯ.

# ಅನುಬಂಧ-೨

## ಪರಮಾರ್ಶನ ಗ್ರಂಥಗಳು

೧. ಅಶೋಕ.ಟಿ.ಪಿ, ೨೦೧೧, ಸಾಹಿತ್ಯ ಸಂದರ್ಭ, ವಸಂತ ಪ್ರಕಾಶನ ಬೆಂಗಳೂರು.

೨. ಅಶೋಕ.ಟಿ.ಪಿ, ೨೦೧೦, ಪುಸ್ತಕ ಪ್ರೀತಿ, ವಸಂತ ಪ್ರಕಾಶನ, ಬೆಂಗಳೂರು.

೩. ಅಗ್ರಹಾರ ಕೃಷ್ಣಮೂರ್ತಿ, ೨೦೦೩, ಸಂಸ್ಕೃತಿ ಕಥನ, ಸಂಪಾದಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೪. ಅಮರೇಶ ನುಗುಡೋಣಿ, ೨೦೦೮, ಕನ್ನಡ ಸಂಶೋಧನೆಯ ವೈಧಾನಿಕತೆಗಳು, , ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫. ಆಮೂರ.ಜಿ.ಎಸ್, ೨೦೧೨, ಕನ್ನಡ ಕಥನ ಸಾಹಿತ್ಯ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು.

೬. ಆಮೂರ.ಜಿ.ಎಸ್, ೧೯೮೬, ಸಮಕಾಲೀನ ಕಥೆ ಕಾದಂಬರಿ ಹೊಸ ಪ್ರಯೋಗಗಳು, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

೭. ಕರೀಗೌಡ ಬೀಚನಹಳ್ಳಿ, ೨೦೦೩, ಶತಮಾನದ ಸಣ್ಣಕಥೆಗಳ ಸಮೀಕ್ಷೆ, ಕರ್ನಾಟಕ ಸಾಹಿತ್ಯ ಆಕಾಡಮಿ, ಬೆಂಗಳೂರು.

೮. ಕೀರ್ತಿನಾಥ ಕುರ್ತಕೋಟಿ, ೨೦೦೮, ಯುಗಧರ್ಮ ಹಾಗೂ ಸಾಹಿತ್ಯ ದರ್ಶನ, ಕುರ್ತಕೋಟಿ ಮೆಮೋರಿಯಲ್ ಟ್ರಸ್ಟ್, ಧಾರವಾಡ.

೯. ಕೋದಂಡರಾಮ.ಎನ್.ಕೆ. ೧೯೯೬, ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ, ಗಾಯತ್ರಿ ಸ್ಮಾರಕ ಗ್ರಂಥಮಾಲೆ, ಮೈಸೂರು.

೧೦. ಗಿರಡಿ ಗೋವಿಂದರಾಜ, ೧೯೬೫, ಸಣ್ಣಕಥೆಯ ಹೊಸ ಒಲವುಗಳು, ಸಂಕ್ರಮಣ ಪ್ರಕಾಶನ, ಧಾರವಾಡ.

೧೧. ಜವರೇಗೌಡ (ಪ್ರ.ಸಂ), ೧೯೯೪, ಸುವರ್ಣ ಮಂಡ್ಯ, ೬೩ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ಸಮಿತಿ, ಮಂಡ್ಯ.

೧೨. ತಿಪ್ಪೇರುದ್ರಸ್ವಾಮಿ.ಎಚ್, ೨೦೦೩, ಕನ್ನಡ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ. ಮೂರ್ತಿ ಪ್ರಕಾಶಕರು, ಮೈಸೂರು.

೧೩. ದೇಜಗೌ(ಪ್ರ.ಸಂ), ೧೯೯೪, ಸಿರಿಯೊಡಲು, ಸ್ವಾಗತ ಸಮಿತಿ ೬೩ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ, ಮಂಡ್ಯ

೧೪. ನಾಗರಾಜ್.ಡಿ.ಆರ್. ೧೯೯೬,ಸಾಹಿತ್ಯ ಕಥನ, ಅಕ್ಷರ ಪ್ರಕಾಶನ, ಹೆಗ್ಗೋಡು.

೧೫. ನಾಯಕ್.ಹಾ.ಮಾ, ೧೯೭೬, ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೧೬. ನಾಗಭೂಷಣಸ್ವಾಮಿ.ಓ.ಎಲ್, ೨೦೧೨, ವಿಮರ್ಶೆಯ ಪರಿಭಾಷೆ, ಅಭಿನವ ಪ್ರಕಾಶನ, ಬೆಂಗಳೂರು.

೧೭. ನಾಯಕ್. ಹಾ.ಮಾ, (ಪ್ರ. ಸಂ), ೧೯೮೨, ಭಾರತೀಯ ಸಾಮಾಜಿಕ ಸಂಸ್ಥೆಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೮. ಪರಮಶಿವಯ್ಯ. ಜೀ.ಶಂ,(ಸಂ), ೧೯೮೯, ನಾಗವಲ್ಲಿ, ಶ್ರೀ ನಾಗೇಗೌಡ ಗೌರವ ಗ್ರಂಥ, ಬೆಂಗಳೂರು.

೧೯. ಪಾರ್ಥಸಾರಥಿ.ಟಿ.ಎ, (ಮು. ಸಂ), ೨೦೦೨ (ಪರಿಷ್ಕೃತ ಆವೃತಿ), ಮಂಡ್ಯ ಜಿಲ್ಲಾ ಗ್ಯಾಸೆಟಿಯರ್, ಕರ್ನಾಟಕ ರಾಜ್ಯ ಸರ್ಕಾರದ ಪ್ರಕಟಣೆ.

೨೦. ಪ್ರಸಾದಸ್ವಾಮಿ.ಎಸ್. ೨೦೧೧. ಸಣ್ಣ ಕಥೆ, ಕಣ್ವ ಪಬ್ಲಿಕೇಶನ್ಸ್ ಪ್ರೈವೆಟ್ ಲಿ. ಬೆಂಗಳೂರು.

೨೧. ಬಸವರಾಜ ಸಬರದ, ೨೦೧೧, ಕನ್ನಡ ಸಾಹಿತ್ಯ ವಿಮರ್ಶೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೨. ಬಲ್ಲೇನಹಳ್ಳಿ ಮಂಜುನಾಥ್. ೨೦೦೯. ಮಂಡ್ಯ ಜಿಲ್ಲೆಯ ಮಹೋನ್ನತ ಸಾಹಿತಿಗಳು, ಚಿರಂತನ ಪ್ರಕಾಶನ, ಮಂಡ್ಯ.

೨೩. ಬೆಸಗರಹಳ್ಳಿ ರಾಮಣ್ಣ, ೨೦೧೧, ಕಣಜ, ಲೋಹಿಯಾ ಪ್ರಕಾಶಕರು, ಬಳ್ಳಾರಿ.

೨೪. ಬೋರೇಗೌಡ ಚಿಕ್ಕಮರಳಿ,(ಸಂ), ೧೯೯೯, ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್, ಪಾಂಡವಪುರ.

೨೫. ರಹಮತ್ ತರೀಕೆರೆ(ಸಂ), ೨೦೧೧, ಮಾತು ತಲೆಯೆತ್ತುವ ಬಗೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೬. ರಾಘವೇಂದ್ರರಾವ್.ಎಚ್.ಎಸ್, ೨೦೦೬, ನಮಸ್ಕಾರ, ಅಭಿನವ ಪ್ರಕಾಶನ, ಬೆಂಗಳೂರು.

೨೭. ರಾಘವೇಂದ್ರರಾವ್.ಹೆಚ್.ಎಸ್, ೨೦೦೧, ಶತಮಾನದ ಸಾಹಿತ್ಯ ವಿಮರ್ಶೆ, ಸಂಪಾದಕರು, ಕರ್ನಾಟಕ ಸಾಹಿತ್ಯ ಆಕಾಡಮಿ, ಬೆಂಗಳೂರು.

೨೮. ರಾಘವೇಂದ್ರರಾವ್.ಎಚ್.ಎಸ್, ೧೯೯೫, ಹಾಡೆ ಹಾದಿಯ ತೋರಿತು, ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು.

೨೯. ರಾಮಚಂದ್ರನ್.ಸಿ.ಎನ್, ೨೦೧೩, ಸಾಹಿತ್ಯ ವಿಮರ್ಶೆ ಮತ್ತು ವಸಾಹತೋತ್ತರ ಚಿಂತನೆ, ಅಂಕಿತ ಪುಸ್ತಕ.

೩೦. ರಾಮಚಂದ್ರನ್.ಸಿ.ಎನ್. ೨೦೦೮, ಸಾಹಿತ್ಯ ವಿಮರ್ಶೆ, ಕರ್ನಾಟಕ ಸಾಹಿತ್ಯ ಅಕಾಡಮಿ, ಬೆಂಗಳೂರು.

೩೧. ಲೀಲಾಅಪ್ಪಾಜಿ.(ಪ್ರ.ಸಂ), ೨೦೧೫, ಡಾ. ಬೆಸಗರಹಳ್ಳಿ, ಪ್ರಕಾಶಕರು ಕೀರ್ತನ ಗ್ರಾಫಿಕ್ಸ್, ಮೈಸೂರು.

೩೨. ಲೀಲಾಅಪ್ಪಾಜಿ.(ಪ್ರ.ಸಂ), ೨೦೧೫, ಅಮೃತ ಮಂಡ್ಯ, ಅಮೃತ ಮಹೋತ್ಸವ ಸ್ಮರಣ ಸಂಪುಟ ಸಮಿತಿ, ಜಿಲ್ಲಾಡಳಿತ ಮಂಡ್ಯ.

೩೩. ವೀರಪ್ಪ. ಜಿ.ಟಿ, ೧೯೯೫, ಪುಣ್ಯಕೋಟಿ, (ಪ್ರ. ಸಂ), ಮಂಡ್ಯ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಮಂಡ್ಯ.

೩೪. ವೀರಪ್ಪ.ಕೆ.ಟಿ, ೧೯೭೮, ೪೪ನೇ ಕನ್ನಡ ಸಾಹಿತ್ಯ ಸಮ್ಮೇಳನದ ನೆನಪಿನ ಸಂಚಿಕೆ, ಮಂಡ್ಯ.

೩೫. ಸದಾಶಿವಯ್ಯ.ಎಚ್.ಎಮ್, ೧೯೭೯, ಸಮಾಜಶಾಸ್ತ್ರ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೩೬. ಸಿ.ಪಿ.ಕೆ, ೧೯೭೪, ಸಾಹಿತ್ಯ ಪ್ರವೇಶ, ಕರ್ನಾಟಕ ಸಹಕಾರಿ ಪ್ರಕಾಶನ, ಬೆಂಗಳೂರು.

೩೭. ಸೋಮಯ್ಯ.ಕೆ.ಎನ್, ೧೯೭೭, ಸಮಾಜಶಾಸ್ತ್ರದ ಆಚಾರ್ಯರು, ಸಂಸ್ಕೃತ ಸಾಹಿತ್ಯ ಸದನ, ಮೈಸೂರು.

೩೮. ಶೇಷಗಿರಿರಾವ್. ಎಲ್. ಎಸ್. ೨೦೧೩, ಹೊಸಗನ್ನಡ ಸಾಹಿತ್ಯ ಚರಿತ್ರೆ, ಸ್ವಪ್ನ ಬುಕ್ ಹೌಸ್, ಬೆಂಗಳೂರು.

೩೯. ಶ್ರೀಕಂಠಯ್ಯ.ಎಲ್, ೧೯೮೫, ಸಮಾಜವಾದ, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೪೦. ಹೇಮಲತಾ, ೨೦೦೭, ಮಹಿಳಾ ಅಧ್ಯಯನ-೧, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು.

೪೧. ಹೇಮಲತಾ, ೨೦೦೭, ಮಹಿಳಾ ಅಧ್ಯಯನ-೪, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು.

೪೨. ಹಾಲತಿಸೋಮಶೇಖರ್, ೨೦೦೭, ಮಹಿಳಾ ಚಳವಳಿ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆ, ವಿಸ್ಮಯ ಪ್ರಕಾಶನ, ಮೈಸೂರು.

## ಅನುಬಂಧ–೩

## ಮಂಡ್ಯ ಜಿಲ್ಲೆಯ ಸಣ್ಣ ಕಥೆಗಾರರು

| ಕಥೆಗಾರರು | ಕಥಾಸಂಕಲನಗಳು |
|---|---|
| ೧. ಅಶ್ವಿನಿ.ಜಿ | ಬೇಲಿ ಮೇಲಿನ ಹೂವುಗಳು |
| ೨. ಆರ್ಯಾಂಬ ಪಟ್ಟಾಭಿ | ಮರಳಿ ಬಂದ ಮಮತೆ.<br>ಉದಯರವಿ. ನನ್ನವಳು.<br>ತೆರೆ ಸರಿದಾಗ |
| ೩. ಕ್ಯಾತನಹಳ್ಳಿ ರಾಮಣ್ಣ | ತಿಳಿಜಲ<br>ಎಂದು ಬಂದಿತೋ ಮಳೆ |
| ೪ . ತ್ರಿವೇಣಿ | ಹೆಂಡತಿಯ ಹೆಸರು<br>ಎರಡು ಮನಸ್ಸು<br>ಸಮಸ್ಯೆಯ ಮಗು |
| ೫. ದಾಸೇಗೌಡ.ಜಿ.ವಿ. | ನಂಜು ಬಡಿಯಿತು<br>ಮೌಲ್ಯಮಾಪನ |
| ೬. ನಾಗೇಗೌಡ.ಎಚ್.ಎಲ್. | ಕಂಡು ಕೇಳಿದ ಕಥೆಗಳು<br>ಖೈದಿಗಳ ಕಥೆಗಳು |
| ೭. ನಾಗತಿಹಳ್ಳಿ ಚಂದ್ರಶೇಖರ | ಹದ್ದುಗಳು. ಮಲೆನಾಡಿನ ಹುಡುಗಿ<br>ನನ್ನ ಪ್ರೀತಿಯ ಹುಡುಗನಿಗೆ<br>ಸನ್ನಿಧಿ |
| ೮. ನಾಗಮಂಗಲ ಕೃಷ್ಣಮೂರ್ತಿ | ಚಂದ್ರಸಾನಿ |
| ೯. ಪರಮಶಿವಯ್ಯ.ಜೀ.ಶಂ | ಮಬ್ಬು ಜಾರಿದ ಕಣಿವೆಯಲ್ಲಿ |
| ೧೦. ಪುಟ್ಟಲಕ್ಷ್ಮಿ ಕಾಳೇಗೌಡ | ಮನಸು ಮನಸುಗಳ ನಡುವೆ<br>ಕಥೆಯಲ್ಲ ಜೀವನ |

| | | |
|---|---|---|
| ೧೧. | ಬೆಸಗರಹಳ್ಳಿ ರಾಮಣ್ಣ | ನೆಲದ ಒಡಲು, ಗರ್ಜನೆ ಹರಕೆಯ ಹಣ, ಒಂದು ಹುಡುಗನಿಗೆ ಬಿದ್ದ ಕನಸು. |
| ೧೨. | ಬೋರೇಗೌಡ ಚಿಕ್ಕಮರಳಿ | ಏಳು ಸುತ್ತಿನ ಕೋಟೆ<br>ಗೋಡೆಗಳ ನಡುವೆ |
| ೧೩. | ಮಂಜುಳ. ಪಿ.ಎನ್. | ಮಳೆಬಿಲ್ಲು |
| ೧೪. | ರಮೇಶ್ ಹುಲ್ಲುಕೆರೆ | ಸೊಗಡು ಕಥಾ ಸಂಕಲನ |
| ೧೫. | ರಾಮಕೃಷ್ಣ.ಎಂ. | ತೇರು ಬಂತು ತವರಿಗೆ |
| ೧೬. | ಲಿಂಗಯ್ಯ.ಡಿ. | ಆಟಿಕೆ<br>ರಣಕಾಟಿಗಳು |
| ೧೭. | ವೆಂಕಟಯ್ಯ.ಜಿ | ಮಗಳ ಮಾಂಗಲ್ಯ |
| ೧೮. | ಶಿವಳ್ಳಿ ಕೆಂಪೇಗೌಡ | ಚಮ್ಮಾವುಗೆ |
| ೧೯. | ಸುಬ್ಬಮ್ಮ.ಬಿ.ಎನ್.(ವಾಣಿ) | ಕಸ್ತೂರಿ, ನಾಣಿಯ ಮದುವೆ |
| ೨೦. | ಸೋಮಣ್ಣ ಹೊಂಗಳ್ಳಿ | ತಮಟೆ |
| ೨೧. | ಹರವು ದೇವೇಗೌಡ | ಮದಕ |
| ೨೨. | ಹುಲಿವಾನ ನರಸಿಂಹಸ್ವಾಮಿ | ಛಿದ್ರ, ಮುಗಿಲ ಕೆಂಡ |